ಅನುಭಾವ ಪ್ರಚಾರ ಉಪನ್ಯಾಸ ಮಾಲೆ–೧೩

# ವೀರಶೈವ ಪರಿಜ್ಞಾನ



ಲೇಖಕರು
ಷಣ್ಮುಖಯ್ಯ ಅಕ್ಕೂರಮಠ
ಬೆಂಗಳೂರು

ಪ್ರಕಾಶಕರು
ಶ್ರೀ ಚೆನ್ನಬಸವೇಶ್ವರ ಸಂಸ್ಥಾನ ಹಿರೇಮಠ
ಸುಕ್ಷೇತ್ರ, ಹಾರಕೂಡ – 585 437
ತಾ : ಬಸವಕಲ್ಯಾಣ, ಜಿಲ್ಲೆ : ಬೀದರ

ವೀರಶೈವ ಪರಿಜ್ಞಾನ: (ವೀರಶೈವ ವಾಙ್ಮಯ ಸಂಶೋಧನ ಲೇಖನ ಸಂಕಲನ) ಶ್ರೀ ಷಣ್ಮುಖಯ್ಯ ಅಕ್ಕೂರಮಠ, ಪ್ರಕಾಶಕರು: ಶ್ರೀಚೆನ್ನಬಸವೇಶ್ವರ ಸಂಸ್ಥಾನ ಹಿರೇಮಠ, ಸುಕ್ಷೇತ್ರ ಹಾರಕೂಡ – ೫೮೫ ೪೩೭ ತಾ. ಬಸವಕಲ್ಯಾಣ ಜಿ. ಬೀದರ (ಕರ್ನಾಟಕ ರಾಜ್ಯ)

ಮೊದಲ ಮುದ್ರಣ : ೨೦೦೨

ಪುಟಗಳು : xii+188=200

ಪ್ರತಿಗಳು : ೧೦೦೦

ಬೆಲೆ : ರೂ. ೬೦/-



ಮುದ್ರಕರು:
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್
ಕಾಗದಗೇರಿ ಓಣಿ, ಗದಗ – ೫೮೨ ೧೦೧
✆ ೦೮೩೭೨–೨೩೭೨೬೬, ೨೩೨೨೦೯ (ಆ), ೨೩೬೨೭೮ (ಮ)

# ಆಶೀರ್ವಚನ

ಶರಣರ ನೆಲೆವೀಡಾಗಿದ್ದ ಕಲ್ಯಾಣ ಕರ್ನಾಟಕದ ಕೇಂದ್ರ ಸ್ಥಳದಿಂದ ಅನತಿ ದೂರದಲ್ಲಿರುವ ಹಾರಕೂಡ ಚಿಕ್ಕ ಹಳ್ಳಿಯಾದರೂ ಕರ್ತೃ ಶ್ರೀ ಚೆನ್ನಬಸವೇಶ್ವರರು ನಂತರ ಶ್ರೀ ಗುರುಲಿಂಗಶಿವಾಚಾರ್ಯರು, ಗೈದ ಸಮಾಜೋ ಧಾರ್ಮಿಕ ಶ್ರೇಷ್ಠ ಕಾರ್ಯಗಳಿಂದ ಭಕ್ತಿಜ್ಞಾನ ಪ್ರವಾಹದ ಮೂಲ ಸೆಲೆಯಾಗಿ ಇಂದಿಗೂ ಪ್ರಸಿದ್ಧಿಯನ್ನು ಪಡೆದಿದೆ. ಅವರು ಹಾಕಿಕೊಟ್ಟ ಮಾರ್ಗ ನಮಗೆ ಆದರ್ಶವಾಗಿದೆ. ಅಂತೆಯೇ ಈ ಭಾಗದ ಜನತೆ ಅವರಲ್ಲಿ ಅವಿರತ ಭಕ್ತಿ ಶ್ರದ್ಧೆಯನ್ನು ಇಟ್ಟುಕೊಂಡು ಅವರ ಕರ್ತೃ ಗದ್ದುಗೆಗೆ ನಡೆದುಕೊಳ್ಳುತ್ತ ತಮ್ಮ ಇಷ್ಟಾರ್ಥಗಳನ್ನು ಪೂರೈಸಿಕೊಳ್ಳುತ್ತ ಧನ್ಯರಾಗಿದ್ದಾರೆ. ಅವರ ಧನ್ಯತೆಯೇ ನಮ್ಮ ಶ್ರೀಮಠಕ್ಕೆ ಆಸ್ತಿಯಾಗಿದೆ. ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದರೆಂಬಂತೆ ಭಕ್ತರು ಧನ್ಯತೆಯ ಭಾವದಲ್ಲಿ ನೀಡಿದ ಧನವನ್ನು ಅವರ ಏಳಿಗೆಯ ಕಾರ್ಯ ಗಳಿಗೇ ವಿನಿಯೋಗಿಸುತ್ತಿರುವುದರಿಂದ ಇಂದು ಹಾರಕೂಡ ಒಂದು ಮಾದರಿ ಗ್ರಾಮೀಣ ವಿದ್ಯಾಕೇಂದ್ರವಾಗಿ, ಧರ್ಮ ಸಂಸ್ಕೃತಿಯ ಪುಣ್ಯಭೂಮಿಯಾಗಿ ಕಂಗೊಳಿಸತೊಡಗಿದೆ. ಮಹಾತ್ಮರು ದೇಹಧರಿಸಿ ಇದ್ದಾಗ ಎಂಥ ಶಕ್ತಿಸಾಮರ್ಥ್ಯ ವನ್ನು ತೋರ್ಪಡಿಸಿದರೋ ಅಂಥದೇ ಶಕ್ತಿ ಸಾಮರ್ಥ್ಯದ ಪರಿಣಾಮ ಅವರು ದೇಹಬಿಟ್ಟ ಮೇಲೂ ನಡೆಯುತ್ತದೆಂಬುದನ್ನು ಹಾರಕೂಡ ಸಂಸ್ಥಾನ ಹಿರೇಮಠ ಶ್ರುತಪಡಿಸಿದೆ. ಶ್ರೀ ಚೆನ್ನಬಸವ ಶಿವಯೋಗಿಗಳು ತಮ್ಮ ತಪೋನಿಷ್ಠ ಪೂಜೆ ಯಿಂದ, ಜನರಲ್ಲಿ ನೈತಿಕತೆ, ಸಾತ್ವಿಕ ಸದ್ಭಕ್ತಿಯ ಬೀಜವನ್ನು ಬಿತ್ತಿ ಬೆಳೆದರು. ಆದ್ದರಿಂದ ಅವರ ಪ್ರಭಾವ ಕೇವಲ ಕರ್ನಾಟಕವಷ್ಟೇ ಅಲ್ಲ ನೆರೆಯ ಆಂಧ್ರ, ಮಹಾರಾಷ್ಟ್ರಗಳಿಗೂ ಹಬ್ಬಿದೆ. ನಾಡಿನ ತುಂಬ ಅವರ ಸ್ಮರಣೆಯಲ್ಲಿ ಶಾಖಾಮಠ ಗಳು ಸ್ಥಾಪನೆಗೊಂಡು ಅವರ ಮಣಿಹವನ್ನು ಮುಂದುವರಿಸಿವೆ.

ಶ್ರೀಮಠ ಸಮಾಜೋ ಧಾರ್ಮಿಕ ಚಟುವಟಿಕೆಗಳೊಂದಿಗೆ ಸಾಹಿತ್ಯಿಕ ಸಾಂಸ್ಕೃತಿಕ ಚಟುವಟಿಕೆಗಳನ್ನು ನಿರಂತರವಾಗಿ ನಡೆಸುತ್ತ ಕ್ರಿಯಾಶೀಲತೆಯನ್ನು ಮೆರೆದಿದೆ. ಸಾಹಿತ್ಯ ಕೃತಿಗಳ ಪ್ರಕಟನೆ, ವಿಶೇಷ ಉಪನ್ಯಾಸ, ಮಾನವತಾವಾದದ

ನೆಲೆಗಟ್ಟಿನ ಮೇಲೆ ಶ್ರೇಷ್ಠ ಮೌಲ್ಯಗಳ ಪ್ರತಿಪಾದನೆ, ಜನಜಾಗೃತಿ, ಜನರ ಪ್ರಜ್ಞಾವಂತಿಕೆಯನ್ನು ಸುಸಂಸ್ಕೃತಿಯ ಮಟ್ಟವನ್ನು ಎತ್ತರಿಸಲು ಹತ್ತು ಹಲವು ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಲಿದೆ.

ಈ ನಿಟ್ಟಿನಲ್ಲಿ ಈಗಾಗಲೇ ಇಪ್ಪತ್ತೆರಡು ಕೃತಿಗಳನ್ನು ಪ್ರಕಟಿಸಲಾಗಿದೆ. ನಾಡಿನ ಶ್ರೇಷ್ಠ ವಿದ್ವಾಂಸರನ್ನು ಬರಮಾಡಿಕೊಂಡು ವಿಶೇಷ ಉಪನ್ಯಾಸಗಳನ್ನು ಏರ್ಪಡಿಸಲಾಗಿದೆ. ಪ್ರತಿವರ್ಷ ಏರ್ಪಡಿಸುವ ಅನುಭಾವ ಪ್ರಚಾರೋಪನ್ಯಾಸ ಮಾಲೆಯಲ್ಲಿ ಈಗಾಗಲೇ ಹನ್ನೆರಡು ಕೃತಿಗಳು ಪ್ರಕಟವಾಗಿದ್ದು ಅವೆಲ್ಲವೂ ಜನರ, ವಿದ್ವಾಂಸರ ಮೆಚ್ಚುಗೆಯನ್ನು ಪಡೆದಿವೆ.

ಪ್ರಸ್ತುತ, ಶ್ರೇಷ್ಠ ವಿದ್ವಾಂಸರಾದ ಶ್ರೀ ಷಣ್ಮುಖಯ್ಯ ಅಕ್ಕೂರಮಠ ಅವರು ಕಳೆದ ವರ್ಷ ಅನುಭಾವ ಪ್ರಚಾರೋಪನ್ಯಾಸಮಾಲೆಯಲ್ಲಿ ನೀಡಿದ ಉಪನ್ಯಾಸ ಶರಣರ ಮತ್ತು ಆಗಮಗಳ ವಿಷಯಕ್ಕೆ ಸಂಬಂಧಿಸಿತ್ತು. ಈ ಕುರಿತು ಈಗಾಗಲೇ ಗ್ರಂಥಗಳು ಪ್ರಕಟವಾಗಿರುವುದರಿಂದ ವೀರಶೈವಕ್ಕೆ ಸಂಬಂಧಿಸಿದ ಅವರ ವಿದ್ವತ್‌ಪೂರ್ಣ ಹನ್ನೊಂದು ಲೇಖನಗಳನ್ನು ಸೇರಿಸಿ 'ವೀರಶೈವ ಪರಿಜ್ಞಾನ'ವೆಂಬ ಹೆಸರಿನಲ್ಲಿ ಪ್ರಕಟಪಡಿಸುತ್ತಿದ್ದೇವೆ. ಈ ಹನ್ನೊಂದೂ ಲೇಖನಗಳು ಶರಣರ ಅನುಭಾವವಿಕ ಮತ್ತು ವೀರಶೈವ ಸೈದ್ಧಾಂತಿಕ ಎಲ್ಲ ಮಹತ್ವದ ವಿಚಾರಗಳನ್ನು ವಿವೇಚನಾತ್ಮಕ ರೀತಿಯಲ್ಲಿ ಒಳಗೊಂಡಿವೆ. ಇಂಥ ಒಂದು ಮೌಲಿಕ ಕೃತಿಯನ್ನು ಶ್ರೀಮಠದಿಂದ ಪ್ರಕಟಿಸಲು ಅನುವು ಮಾಡಿ ಕೊಟ್ಟ ಶ್ರೀ ಷಣ್ಮುಖಯ್ಯ ಅಕ್ಕೂರಮಠರಿಗೆ ಶ್ರೀ ಚೆನ್ನಬಸವ ಶಿವಯೋಗಿಗಳು ಸಕಲ ಸಂಪದಗಳನ್ನು ನೀಡಲೆಂದು ಆಶಿಸುತ್ತೇವೆ. ಶ್ರೀ ಷಣ್ಮುಖಯ್ಯನವರು ಧರ್ಮನಿಷ್ಠರೂ, ನೈಷ್ಠಿಕರೂ, ಒಳ್ಳೆಯ ವಿಚಾರವಂತರೂ ಆಗಿದ್ದಾರೆ. ಅವರ ವಿದ್ವತ್ ಪರಿಚಯ ಅವರ ಲೇಖನಗಳಲ್ಲಿ ಸ್ಪಷ್ಟವಾಗಿ ಅಭಿವ್ಯಕ್ತಗೊಂಡಿದೆ. ಅವರಿಂದ ಇನ್ನೂ ಅನೇಕ ಕೃತಿಗಳು ಹೊರಬರಲಿ ಎಂದು ಹಾರೈಸುತ್ತೇವೆ.

ಹಾರಕೂಡ
೨೫-೭-೨೦೦೨

ಚೆನ್ನವೀರ ಶಿವಾಚಾರ್ಯರು
ಸಂಸ್ಥಾನ ಹಿರೇಮಠ ಸುಕ್ಷೇತ್ರ, ಹಾರಕೂಡ

# ನನ್ನ ನಾಲ್ಕು ಮಾತು

ಹಾರಕೂಡ ಗ್ರಾಮವು ಹೈದರಾಬಾದ ಕರ್ನಾಟಕ ಪ್ರದೇಶದ, ಬೀದರ ಜಿಲ್ಲೆಯ ಬಸವ ಕಲ್ಯಾಣ ತಾಲೂಕಿನಲ್ಲಿರುವ ಒಂದು ಚಿಕ್ಕಗ್ರಾಮ. ಇದು ಬಸವಕಲ್ಯಾಣದಿಂದ ದಕ್ಷಿಣಕ್ಕೆ ಹದಿನೈದು ಮೈಲುಗಳ ಅಂತರದಲ್ಲಿದೆ. ಆ ಗ್ರಾಮದ ಹಿರೇಮಠ ಸಂಸ್ಥಾನ ಮೊದಲಿನಿಂದಲೂ ಪ್ರಸಿದ್ಧಿಯನ್ನು ಪಡೆದಿದೆ. ಹಾರಕೂಡ ಗ್ರಾಮ ಇಂದು ಕರ್ನಾಟದಲ್ಲಿ ಹೆಸರಾಗಿರುವುದು ಈ ಮಠದಿಂದಲೇ. ೨೦ ನೇ ಶತಮಾನದಲ್ಲಿ ಜೀವಿಸಿದ್ದ ಪರಮಪೂಜ್ಯ ಶ್ರೀ ಚನ್ನಬಸವ ಶಿವಯೋಗಿಗಳ ತಪಃ ಪ್ರಭಾವದಿಂದ ಪುಣ್ಯಕ್ಷೇತ್ರವೆನಿಸಿತು. ಗುರು ಒಲಿದು ಪಾದವನಿಟ್ಟ ನೆಲ ಸುಕ್ಷೇತ್ರವಾಯಿತು. ಜಲ ಪಾವನ ತೀರ್ಥ ವಾಯಿತು ಶ್ರೀಮಠದ ಕೀರ್ತಿ ದಿಕ್ ದೆಸೆಗಳಿಗೆ ಹರಡಿತು. ಆ ನಾಡಿನಲ್ಲಿ ಹರನ ಕೂಡುವ ತಾಣ ಎಂದು ಹೇಳುವ ವಾಡಿಕೆಯ ಮಾತು ಇಂದಿಗೂ ವಾಸ್ತವವಾಗಿ ಕಾಣುತ್ತದೆ.

ಜಗದ್ಗುರು ಪಂಚಪೀಠಗಳಲ್ಲೊಂದಾದ ಶ್ರೀ ಮದ್ರಂಭಾಪುರಿ ಮಹಾ ಪೀಠದ ಪರಂಪರೆಗೆ ಸೇರಿದ ಪಟ್ಟದ ಮಠವಾದರೂ, ಗುರು–ವಿರಕ್ತ ಪರಂಪರೆಯ ವೀರಶೈವ ಸ್ಸಾಹಿತ್ಯವನ್ನೇ ಮೇಳೈಸಿಕೊಂಡು ಸರ್ವಸಮನ್ವಯ, ಸದ್ಭಾವನೆಯಿಂದ ಮುನ್ನಡೆದಿರುವುದು ಈ ಮಠದ ಹಿರಿಮೆ, ಗರಿಮೆ ಯಾಗಿದೆ.

ಇಂದಿನ ಪಟ್ಟಾಧ್ಯಕ್ಷರಾದ ಪೂಜ್ಯ ಷ. ಬ್ರ. ಶ್ರೀ ಚನ್ನವೀರ ಶಿವಾಚಾರ್ಯ ಸ್ವಾಮೀಜಿಯವರು ವಿದ್ವಾಂಸರು, ಅಧ್ಯಯನಶೀಲರು, ಶಿವಯೋಗಸಂಪನ್ನರು. ಧರ್ಮ, ಸಾಹಿತ್ಯ, ಸಂಸ್ಕೃತಿ, ದಾಸೋಹಗಳ ಮೂಲಕ ಜನಪರ ಕಲ್ಯಾಣದ ಸತ್ಕಾರ್ಯಗಳನ್ನು ನಡೆಸುತ್ತ ಮಠದ ಸತ್ ಪರಂಪರೆಯನ್ನು ಸಮರ್ಥವಾಗಿ ಮುಂದುವರಿಸುತ್ತಿದ್ದಾರೆ. ಶ್ರೀಮಠದ ಅಭಿವೃದ್ಧಿಯ ಜೊತೆಗೆ ಸಮಾಜದ ಸರ್ವಾಂಗೀಣ ಪ್ರಗತಿಗೆ ಶ್ರಮಿಸುತ್ತಿರುವ ಕ್ರಿಯಾಶೀಲ, ಚೈತನ್ಯ ಸ್ವರೂಪಿ, ಶಿವಾಚಾರ್ಯರು.

ಶ್ರೀಮಠದ ಗುರುಪರಂಪರೆ ಹಿಂದಿನ ಹಾಗೂ ಇಂದಿನ ಗುರುಗಳನ್ನು ಕುರಿತು ಈ ಕಲ್ಯಾಣನಾಡಿನ ಕವಿಗಳು ಭಕ್ತಿ–ಭಾವನೆಯಿಂದ ರಚಿಸಿದ ೩೪೩ ಪದಗಳನ್ನು (ಹಾಡುಗಬ್ಬ) ಓದಿದಾಗ, ಈ ಮಠದ ಗುರುಪರಂಪರೆಯ ಪ್ರಭಾವ ಭಕ್ತರ ಮೇಲೆ ಹೇಗೆ ಬೆಳಕು ಚೆಲ್ಲಿತ್ತು ಎನ್ನುವುದು ಸ್ಪಷ್ಟವಾಗುತ್ತದೆ.

ಷ. ಬ್ರ. ಚನ್ನವೀರ ಶಿವಾಚಾರ್ಯರು ಪ್ರತಿವರ್ಷ ದಸರಾ ಮಹೋತ್ಸವದ ಸಂದರ್ಭದಲ್ಲಿ ನಾಡಿನ ವಿದ್ವಾಂಸರನ್ನು ಶ್ರೀಮಠಕ್ಕೆ ಬರಮಾಡಿಕೊಂಡು ಅವರಿಂದ ಉಪನ್ಯಾಸ ಮಾಡಿಸಿ, ಉಪನ್ಯಾಸದ ವಿಷಯವನ್ನೇ ಪುಸ್ತಕ ರೂಪದಲ್ಲಿ ಪ್ರಕಟಿಸಿ ನಾಡಿನ ಜನತೆಗೆ ಜ್ಞಾನದಾಸೋಹ ಮಾಡುತ್ತಾ ಬಂದಿದ್ದಾರೆ. ಇದನ್ನು ಒಂದು ವ್ರತದಂತೆ ನಡೆಸಿಕೊಂಡು ಬರುತ್ತಿರುವುದು ಅವರ ಧರ್ಮ, ಸಾಹಿತ್ಯ ಹಾಗೂ ಸಂಸ್ಕೃತಿಗಳ ಮೇಲಿನ ಕಾಳಜಿಗೆ ಸಾಕ್ಷಿ ಎನಿಸುತ್ತದೆ.

ಶ್ರೀಮಠದ ಪವಿತ್ರ ಉಪಕ್ರಮದಂತೆ ಲಿಂ. ಷ. ಬ್ರ. ಗುರುಲಿಂಗ ಶಿವಾಚಾರ್ಯರ ೩೧ನೆಯ ಪುಣ್ಯಸ್ಮರಣೆ ಹಾಗೂ ಅನುಭಾವ ಪ್ರಚಾರ ಉಪನ್ಯಾಸ ಮಾಲೆ–೧೩ರ ಕಾರ್ಯಕ್ರಮ ದಿನಾಂಕ ೬–೧೦–೨೦೦೦ ಶುಕ್ರವಾರದಂದು ಆಯೋಜಿಸಲಾಗಿತ್ತು. ಅಂದಿನ ಕಾರ್ಯಕ್ರಮಕ್ಕೆ ನಮ್ಮ ನಾಡಿನ ಖ್ಯಾತ ವಿದ್ವಾಂಸರೂ ಭಾಷಾವಿಜ್ಞಾನಿಗಳೂ ಆದ ಡಾ. ಸವದತ್ತಿ ಮಠರ ಆಹ್ವಾನವನ್ನು ಅಂಗೀಕರಿಸಿ ಉಪನ್ಯಾಸ ಮಾಡಲು ಹೋಗಿದ್ದೆ. ಸಾಯಂಕಾಲದ ಕಾರ್ಯಕ್ರಮ. ಪುಟ್ಟದ್ವೀಪದಂತಿರುವ ಹಾರಕೂಡ ಗ್ರಾಮ. ಊರ ಹೊರಭಾಗದ ಬಯಲು ಪ್ರದೇಶದ ಪ್ರಕೃತಿ ಸೌಂದರ್ಯದ ಪ್ರಶಾಂತ ಪರಿಸರದಲ್ಲಿ ಸಂಸ್ಥಾನ ಹಿರೇಮಠ. ಅಲ್ಲಿಗೆ ಹೋದ ಮೇಲೆ ಪೂಜ್ಯರ ದರ್ಶನವಾಯಿತು. 'ತೇಜಸಾಂಹಿನವಯಃ ಸಮೀಕ್ಷ್ಯತೆ' ಎಂಬ ಕಾಳಿದಾಸನ ಮಾತು ನೆನಪಾಯಿತು ಸ್ವಾಮೀಜಿಯವರು ಕಿರಿಯ ವಯಸ್ಸಿನವರಾದರೂ ಪರಮತೇಜಸ್ವಿಗಳು. ಮಾತು ಕಡಿಮೆ ಕ್ರಿಯೆ ಅಧಿಕವೆನಿಸಿತು. ಅಂದಿನ ಸಭೆಗೆ ಬಂದ ಸಮಾಜದ ಪ್ರತಿಷ್ಠಿತ ವ್ಯಕ್ತಿಗಳು ರಾಜಕಾರಣಿಗಳು, ಅಪಾರ ಭಕ್ತ ಸಮೂಹವನ್ನು ಕಂಡು, ಅವರು ಗುರುಗಳಿಗೆ ಭಕ್ತಿ–ಭಾವನೆಯಿಂದ ಗೌರವ ಸಮರ್ಪಿಸುವುದನ್ನು ಕಂಡು ಮೌನದಿಂದಲೇ ಗುರುಪಾದಕ್ಕೆ

ನತಮಸ್ತಕ ನಾದೆ. ಅಂದಿನ ಕಾರ್ಯಕ್ರಮ ಸರ್ವಾಂಗ ಸುಂದರವಾಗಿ ಜರುಗಿತು.

''ನೀವು ವಿಚಾರ ಸಂಕಿರಣದಲ್ಲಿ ವಿದ್ವತ್ ಗೋಷ್ಠಿಯಲ್ಲಿ ಮಂಡಿಸಿದ ಪ್ರಬಂಧಗಳ ಸಂಕಲವನ್ನು ಕಳಿಸಿಕೊಡಿ, ಅವುಗಳನ್ನು ಶ್ರೀಮಠದಿಂದ ಪುಸ್ತಕ ರೂಪದಲ್ಲಿ ಪ್ರಕಟಿಸುತ್ತೇವೆ'' ಎಂದು ನನಗೆ ಪೂಜ್ಯರು ಸೂಚನೆ ನೀಡಿದ್ದ ರಿಂದ ನನ್ನ ಹನ್ನೊಂದು ಪ್ರಬಂಧಗಳ ಸಂಕಲನವೇ ಈ ಪುಸ್ತಕ. ವೀರಶೈವ ತತ್ತ್ವಕ್ಕೆ ಸಂಬಂಧಿಸಿದ ಬಹುಪಾಲು ಲೇಖನಗಳು ಇಲ್ಲಿ ಸಮಾವೇಶ ಗೊಂಡಿರುವುದರಿಂದ ಈ ಪುಸ್ತಕಕ್ಕೆ ''ವೀರಶೈವ ಪರಿಜ್ಞಾನ'' ಎನ್ನುವ ಹೆಸರನ್ನಿಟ್ಟಿ ದ್ದೇನೆ.

ಈ ಸಂಕಲನದಲ್ಲಿ ಆಗಮಕ್ಕೆ ಸಂಬಂಧಿಸಿದ ಲೇಖನಗಳು 'ಜಗದ್ಗುರು ವಿಶ್ವಾರಾಧ್ಯ ಜನಕಲ್ಯಾಣ ಪ್ರತಿಷ್ಠಾನ ವಾರಣಾಸಿ' ಇದರ ಆಗಸಕ್ಕೆ ವೀರಶೈವ ಅನುಸಂಧಾನ ಬೆಂಗಳೂರು ಇದರ ಆಶ್ರಯದಲ್ಲಿ ದಾವಣಗೆರೆ ಜಿಲ್ಲೆ 'ಹರಪನಹಳ್ಳಿ' ಹಾಗೂ ರಾಯಚೂರಿನಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧಗಳು. 'ಇಷ್ಟಲಿಂಗ ದೀಕ್ಷೆ' ಲೇಖನ ಬೆಳಗಾಂವ 'ಅಖಿಲ ಭಾರತ ವೀರಶೈವ ಮಹಾಸಭಾ'ದ ಜಿಲ್ಲಾ ಘಟಕದ ರಜಮಹೋತ್ಸವದ ಸಂಚಿಕೆಗೆ ಬರೆದದ್ದು.

'ಶಿವಯೋಗದ ನೆಲೆ–ಹಿನ್ನೆಲೆ' ಹಾಗೂ 'ಸಿದ್ಧಾಂತ ಶಿಖಾಮಣಿಯಲ್ಲಿ ಶಿವಯೋಗದ ಲೇಖನಗಳು', 'ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು' ಬೆಂಗಳೂರಿನಲ್ಲಿ ನಡೆಸಿದ 'ಸಿದ್ಧಾಂತ ಶಿಖಾಮಣಿ' ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧಗಳು. ''ಸೂಫಿ ಮತ್ತು ಶರಣರ ಅನುಭಾವಪಥ'' ನಮ್ಮ ನಾಡಿನ ಶ್ರೇಷ್ಠ ಕವಿಗಳಾದ ಶ್ರೀ ಚನ್ನವೀರ ಕಣವಿ ಅವರ ಅಪೇಕ್ಷೆಯಂತೆ, ಗುರುಲಿಂಗ ಕಾಪಸೆ ಅವರ ಸಂಭಾವನಾ ಗ್ರಂಥ 'ಅಂತರಂಗದ ರತ್ನ'ಕ್ಕೆ ಬರೆದ ಲೇಖನ. 'ಕಾಯಕ–ದಾಸೋಹದಲ್ಲಿ ನೈತಿಕ ಮೌಲ್ಯಗಳು' ಬೆಂಗಳೂರಿನ ಕಾಯಕ ಬಳಗದ 'ಕಾಯಕ' ಸ್ಮರಣ ಸಂಚಿಕೆಗಾಗಿ ಬರೆದ ಲೇಖನ.

'ಕೈವಲ್ಯ ಸಾಹಿತ್ಯದಲ್ಲಿ ನಿಜಗುಣರ ನಿಲುವು' ಮಹಾಲಿಂಗಪುರದಲ್ಲಿ ನಡೆದ ನಿಜಗುಣ ಶಿವಯೋಗಿಗಳ ವಿಚಾರ ಸಂಕಿರಣದಲ್ಲಿ ವಿದ್ವತ್‌ಗೋಷ್ಠಿ ಯಲ್ಲಿ ಮಂಡಿಸಿದ ಪ್ರಬಂಧ 'ಕೈವಲ್ಯ ದರ್ಪಣ : ಒಂದು ಅವಲೋಕನ'

ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳ ಕೈವಲ್ಯ ದರ್ಪಣವನ್ನು ಇತ್ತೀಚಿಗೆ ನಾನೇ ಸಂಪಾದಿಸಿ, ಆ ಕೃತಿಗೆ ಬರೆದ ಕೈವಲ್ಯತೋರಣದ ಮುನ್ನುಡಿ, ಇನ್ನು ಕೊನೆಯದಾದ ''ಧಾರ್ಮಿಕ ಹಿನ್ನೆಲೆಯಲ್ಲಿ ಸಾವಿನ ಪರಿಕಲ್ಪನೆ'' ಎನ್ನುವ ವಿಷಯವನ್ನು ಕುರಿತು ಬೆಂಗಳೂರಿನ "Live well : Leave well" (ಚೆನ್ನಾಗಿ ಬದುಕಿ : ಚೆನ್ನಾಗಿ ನಿರ್ಗಮಿಸಿ) ಸೊಸೈಟಿಯವರು ನಡೆಸಿದ ಬೆಂಗಳೂರು 'ವಕೀಲರ ಸಂಘ' (ಲಾಯರ್ಸ್ ಅಸೋಸಿಯೇಷನ್) ಶಿವಮೊಗ್ಗಾದ 'ಕರ್ನಾಟಕ ಸಂಘ' ಬಾಗಲಕೋಟೆಯ ಬಸವೇಶ್ವರ ಶಿಕ್ಷಣ ಸಂಸ್ಥೆಗಳ ಆಶ್ರಯದಲ್ಲಿ ನಾನು ಮಾಡಿದ ಭಾಷಣಗಳ ಲೇಖನರೂಪ. ಈ ಎಲ್ಲ ಲೇಖನಗಳೂ ಕಳೆದ ೨–೩ ವರ್ಷಗಳಿಂದ ಬೇರೆ–ಬೇರೆ ಸಂದರ್ಭಗಳಲ್ಲಿ ವಿದ್ವತ್ ಸಭೆಗಳಲ್ಲಿ, ವಿಚಾರ ಸಂಕಿರಣಗಳಲ್ಲಿ ಮಂಡಿಸಿದ ಪ್ರಬಂಧಗಳು ಇಲ್ಲಿಯ ಎಲ್ಲ ಪ್ರಬಂಧಗಳ ವಿಷಯ : ವೀರಶೈವ ತತ್ತ್ವ–ಸಿದ್ಧಾಂತ, ಯೋಗ–ಶಿವಯೋಗ ಅನುಭಾವ, ಕಾಯಕ–ದಾಸೋಹ 'ನಾವು'ಗಳನ್ನು ಕುರಿತು ಇವೆ.

ಈ ಎಲ್ಲ ಲೇಖನಗಳು ಈಗಾಗಲೆ, ಪತ್ರಿಕೆಗಳಲ್ಲಿ ಸ್ಮರಣ ಸಂಚಿಕೆಗಳಲ್ಲಿ ಸಂಭಾವನಾ ಗ್ರಂಥಗಳಲ್ಲಿ ಪ್ರಕಟವಾಗಿವೆ. ಇವುಗಳ ಸಂಕಲನವನ್ನು ಪುಸ್ತಕರೂಪದಲ್ಲಿ ಪ್ರಕಟಿಸುವ ಕೃಪೆಮಾಡಿದ್ದಾರೆ ಹಾರಕೂಡ ಮಠದ ಪೂಜ್ಯಶ್ರೀ ಷ ಬ್ರ. ಚನ್ನವೀರ ಶಿವಾಚಾರ್ಯರು. ಅವರ ನಿರ್ಮಲ ಅಂತಃಕರಣ ಹಾಗೂ ವಿದ್ವತ್ ಪ್ರೀತಿಗೆ ನನ್ನ ಅನಂತ ಪ್ರಣಾಮಗಳು.

ಪೂಜ್ಯ ಗುರುಗಳ ಅಪ್ಪಣೆಯಂತೆ ಉಪನ್ಯಾಸದ ಕಾರ್ಯಕ್ರಮಕ್ಕೆ ನನ್ನನ್ನು ಪ್ರೀತಿಯಿಂದ ಬರಮಾಡಿಕೊಂಡು ಶ್ರೀಮಠಕ್ಕೆ ನನ್ನನ್ನು ಪರಿಚಯಿಸಿ ಸಾಹಿತ್ಯ ಸೇವೆಯನ್ನು ಸಲ್ಲಿಸುವಂತೆ ಮಾಡಿದ ಹಾಗೂ ಈ ಸಂಕಲನ ಹೊರಬರಲು ಕಾರಣರಾದ ಡಾ. ಸಂಗಮೇಶ ಸವದತ್ತಿಮಠರನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿದ ಗದುಗಿನ ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್‌ದ ಸಂಸ್ಥಾಪಕರನ್ನು, ಸಂಚಾಲಕರನ್ನು ಸಂತೋಷ ದಿಂದ ನೆನೆಯುತ್ತೇನೆ.

೧೫–೮–೨೦೦೨
೬೭ 'ದೇವಗಂಗೋತ್ರಿ'
ಶಂಕರ ಮಠದ ರಸ್ತೆ
ಬೆಂಗಳೂರು–೪

ಷಣ್ಮುಖಯ್ಯ ಅಕ್ಕೂರಮಠ

# ಪರಿವಿಡಿ

## ಸೂಕ್ಷ್ಮಾಗಮದಲ್ಲಿ ವೀರಶೈವ ಧರ್ಮದ ಸೂಕ್ಷ್ಮನೋಟ

**ಶಿವಾಗಮ ಸಾಹಿತ್ಯ :**

ಸಿದ್ಧಾಂತ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಶಿವಾಗಮಗಳ ಸಂಖ್ಯೆ ಕಾಮಾದಿವಾತುಲಾಂತ ಇಪ್ಪತ್ತೆಂಟು. ಈ ಆಗಮಗಳ ಪೂರ್ವ ಭಾಗದಲ್ಲಿ ಶೈವ ಸಿದ್ಧಾಂತ ಮತ್ತು ಉತ್ತರ ಭಾಗದಲ್ಲಿ ವೀರಶೈವ ಸಿದ್ಧಾಂತದ ವಿಶೇಷವಾದ ಪ್ರತಿಪಾದನೆ ಕಂಡುಬರುತ್ತದೆ. ಈ ವಿಷಯ ಸಿದ್ಧಾಂತ ಶಿಖಾಮಣಿಯಲ್ಲಿ ಹೀಗಿದೆ :

ಸಿದ್ಧಾಂತಾಖ್ಯೆಮಹಾತಂತ್ರೇಕಾಮಿಕಾದ್ಯೇ ಶಿವೋದಿತೇ ।
ನಿರ್ದಿಷ್ಟಮುತ್ತರೇಭಾಗೇ ವೀರಶೈವಮತಂ ಪರಂ ॥

(ಸಿ. ಶಿ. ೫.೧೪)

ಶಿವಾಗಮಗಳ ಉತ್ತರ ಭಾಗದಲ್ಲಿ ಪರಶಿವನ ಮೂಲಕ ಪ್ರತಿಪಾದಿತ ವಾಗಿರುವ ವೀರಶೈವ ಸಿದ್ಧಾಂತವು, ಶಿವನ ಆದೇಶದಂತೆ ಶ್ರೀರೇಣುಕ, ಶ್ರೀದಾರುಕ, ಶ್ರೀಘಂಟಾಕರ್ಣ, ಶ್ರೀಧೇನುಕರ್ಣ ಮತ್ತು ಶ್ರೀವಿಶ್ವಕರ್ಣ ರೆಂಬ ನಾಮದಿಂದ ಪ್ರಸಿದ್ಧರಾದ ಪಂಚಾಚಾರ್ಯರಿಂದ ಸಂಸ್ಥಾಪಿತವಾಗಿ ಅನೇಕ ಋಷಿ–ಮುನಿಗಳಿಗೆ ಉಪದೇಶಿಸಲ್ಪಟ್ಟಿದೆ. ಈ ಜಗದಾಚಾರ್ಯರು, ಉಪದೇಶಿಸಿದ ಈ ಸಿದ್ಧಾಂತದ ಪರಿಪೂರ್ಣ ಸ್ವರೂಪವನ್ನು ಸಿದ್ಧಾಂತ ಶಿಖಾ ಮಣಿಯೇ ಮೊದಲಾದ ಪ್ರಾಚೀನ ಸಿದ್ಧಾಂತ ಗ್ರಂಥಗಳಲ್ಲಿ ಕಾಣಬಹು ದಾಗಿದೆ. ಆದ್ದರಿಂದ ಶ್ರೀ ಜಗದ್ಗುರು ಪಂಚಾಚಾರ್ಯರನ್ನು ವೀರಶೈವ ಧರ್ಮದ ಸಂಸ್ಥಾಪಕರೆಂದೂ, ಗೋತ್ರ ಪುರುಷರೆಂದೂ, ಪರಮಾಚಾರ್ಯ ರೆಂದೂ ಆಗಮಗಳಲ್ಲಿ ಉಲ್ಲೇಖಿತವಾಗಿದೆ.

ಭಾರತದಲ್ಲಿ ವೇದ ವಾಙ್ಮಯಕ್ಕಿಂತ ವಿಸ್ತಾರವಾದುದು ಆಗಮ ವಾಙ್ಮಯ. ಪರಶಿವನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮುಖಗಳಿಂದ ಕ್ರಮವಿಡಿದು ಋಗ್ವೇದ, ಯಜುರ್ವೇದ, ಸಾಮವೇದ,

ಆಥರ್ವಣ ವೇದಗಳು ಜನಿಸಿವೆ ಎಂದೂ, ಈಶಾನ ಮುಖದಿಂದ ಇಪ್ಪತ್ತೆಂಟು ಆಗಮಗಳು ಉದಿಸಿವೆ ಎಂಬುದು ಪುರಾತನರ ನಿರೂಪಣೆ. ಕಾಮಿಕಾದಿ, ವಾತುಲ ಪರ್ಯಂತವಾದ ಆಗಮಗಳನ್ನು ಶಿವಾಗಮಗಳೆಂದೂ, ವೀರಶೈವಾಗಮಗಳೆಂದೂ, ಕರೆಯುವ ರೂಢಿ ಇದೆ. ಆಗಮಗಳು ಕ್ರಿಯೆ–ಚರ್ಯೆ–ಯೋಗ–ಜ್ಞಾನ ಎಂಬ ಹೆಸರಿನ ನಾಲ್ಕು ಪಾದಗಳಿಂದ ಕೂಡಿರುತ್ತವೆ. 'ನಿಗಮ'ವೆಂದರೆ ಅಸ್ಪಷ್ಟವಾಗಿ ಹೊರಹೊಮ್ಮಿದ 'ಆಗಮ'ವೆಂದರೆ ಸ್ಪಷ್ಟವಾಗಿ, ವೈಖರಿ ವಾಣಿಯಲ್ಲಿ ಹೊರಹೊಮ್ಮಿದವು ಎಂದು ವಿದ್ವಾಂಸರ ಅಭಿಪ್ರಾಯ.

ಆಗಮಗಳು ಆಪ್ತ ವಾಕ್ಯಗಳು: ಪರಮ ಆಪ್ತನಾದ ಶಿವನ ವಾಕ್ಯಗಳು: ಗಿರಿಜೆಗಾಗಿ ಉಕ್ತವಾದವುಗಳು: ವಾಸುದೇವನಿಂದ ಆಚರಿತವಾದವುಗಳು. ಕ್ರಿಯೆ–ಜ್ಞಾನಗಳಿಗೂ; ಆಚಾರ–ವಿಚಾರಗಳಿಗೂ, ಯೋಗ–ಶಿವಯೋಗ ಗಳಿಗೂ, ತತ್ತ್ವ – ಸಿದ್ಧಾಂತಗಳಿಗೂ; ಮಂತ್ರ–ತಂತ್ರಗಳಿಗೂ ಆಗಮಗಳು ಪ್ರಮಾಣಗಳು.

ಆಗಮಗಳಿಗೆ 'ತಂತ್ರ'ಗಳೆಂದೂ ಹೇಳುವುದುಂಟು.

ಆ ಸಮಂತಾತ್ ಗಮಯತೀತಿ ಆಗಮ; ಎಲ್ಲವನ್ನು ಚೆನ್ನಾಗಿ ತಿಳಿಯಪಡಿಸುವುದರಿಂದ ಆಗಮವೆನಿಸಿದೆ. ಶಿವನ ಮುಖಗಳಿಂದ ಬಂದು, ಶಿವೆಯ ಮನಸ್ಸಿನಲ್ಲಿ ನೆಲೆ ನಿಂತು ಶ್ರೀಹರಿಗೆ ಸಮ್ಮತವಾದ ಶಾಸ್ತ್ರ ಆಗಮ. ಆಗತಂ–ಗತಂ–ಮಗ್ನಂ ಅಥವಾ ಮತಂ ಈ ಮೂರು ಶಬ್ದಗಳ ಮೊದಲಿನ ಅಕ್ಷರಗಳಿಂದ 'ಆಗಮ' ಶಬ್ದ ನಿರುಕ್ತಿಯನ್ನು ಮಾಡುತ್ತಾರೆ. ಹೆಚ್ಚು ಆಗಮಗಳಲ್ಲಿ ಶಿವ–ಪಾರ್ವತಿಯರ ಸಂವಾದ ರೂಪಕವಾಗಿಯೇ ಗ್ರಂಥಾರಂಭವಾಗುವುದು ಈ ನಿರುಕ್ತಿಗೆ ಸಂವಾದಿಯಾಗಿಯೇ ಇದೆ. ತತ್ತ್ವದರ್ಶನ, ಮಂತ್ರಸಿದ್ಧಿ, ಯೋಗ, ವಿಜ್ಞಾನದ ಎಲ್ಲ ವಿಷಯಗಳಿಗೂ ಆಗಮಗಳು ಪರಮ ಪ್ರಮಾಣಗಳಾಗಿವೆ.

ವೇದಜ್ಞರ ಅಭಿಪ್ರಾಯವನ್ನು ಕೇಳಿ:

> ಆಸಮಂತಾದ್ಗಮಯತಿ ಧರ್ಮಾಧರ್ಮೌ ಪರಂ ಪದಂ ।
> ಆಗಮಸ್ತೇನ ಕಥ್ಯತ ಇತಿ ವೇದವಿದೋ ವಿದುಃ ॥

ಚಿತ್ತಶುದ್ಧಿಗೆ ಬೇಕಾದ ಧರ್ಮಗಳು; ಕಾಯ ಶುದ್ಧಿಗೆ ಬೇಕಾದ ಕ್ರಿಯೆಗಳು ; ಪ್ರಾಣ ಶುದ್ಧಿಗೆ ಬೇಕಾದ ಯೋಗಗಳು; ಬುದ್ಧಿ ವಿಕಾಸಕ್ಕೆ ಬೇಕಾದ ಜ್ಞಾನ ವಿಜ್ಞಾನಗಳು ; ಶಿಲ್ಪ–ಸಂಗೀತ, ಚಿತ್ರ ಮೊದಲಾದ ಚತುಷಷ್ಟೀ (೬೪) ಕಲೆಗಳು ಆಗಮಗಳಲ್ಲಿವೆ. ಜನನ–ಮರಣ; ಬಾಳು–ಬದುಕು; ಆಗು–ಹೋಗುಗಳ ವಿಪುಲ ಹಾಗೂ ವಿಸ್ಮಯ ವಿಚಾರ ಆಗಮಗಳಲ್ಲಿದೆ.

ಶೈವ ಸಾಹಿತ್ಯದ ಮೂಲ ಶಿವಾಗಮವಾದರೆ, ವೀರಶೈವ ಸಾಹಿತ್ಯದ ಮೂಲ ವೀರಶೈವಾಗಮ ; ವೀರಶೈವ ತತ್ತ್ವದ ಮೂಲಸ್ರೋತ ಹಾಗೂ ಆದಿ–ಆಧಾರವೂ ಇದೇ. ಆಗಮಗಳು ಶೈವ–ವೀರಶೈವಗಳೆರಡರ ತುಂಗಾ–ಭದ್ರಾ ಅಥವಾ ಗಂಗೆ–ಯಮುನೆಯರ ಸಂಗಮ. ಶಿವಯೋಗಿ ಶಿವಾಚಾರ್ಯರು ಸಿದ್ಧಾಂತ ಶಿಖಾಮಣಿಯ ೨೧ನೆಯ ಪರಿಚ್ಛೇದದಲ್ಲಿ ಮಹಾಚಾರ್ಯರಾದ ರೇಣುಕರನ್ನು ವರ್ಣಿಸುತ್ತಾ 'ಸ್ಥಾಪಯಿತ್ವಾ ಶಿವಾಗಮಾನ್' ಎಂದು ನಿರೂಪಿಸಿರುವ ಮಾತು ಗಮನಾರ್ಹವಾಗಿದೆ. ಅಂದರೆ ಶಿವಾಗಮಗಳ ಪ್ರವರ್ತಕರು, ರಚನಾಕಾರರು ಶಿವಾಚಾರ್ಯರಿರಬೇಕು ಎನಿಸುತ್ತದೆ. ಶಿವಾಗಮ ಸಾಹಿತ್ಯ 'ಶೈವ–ವೀರಶೈವ ಸಂಸ್ಕೃತಿಯ ಗಂಗೋತ್ರಿ. ಶಿವಾಗಮಗಳು ಧರ್ಮಶಾಸ್ತ್ರಗಳು; ಮತ್ತು ಶೈವ–ವೀರಶೈವ ಜ್ಞಾನ ಕೋಶಗಳು ಎನ್ನುವ ಹೆಗ್ಗಳಿಕೆಗೆ ಪಾತ್ರವಾಗಿವೆ.

ಯದಿಹಾಸ್ತಿ ತದನ್ಯತ್ರ ಯನ್ನೇಽಹಾಸ್ತಿನತತ್ ಕ್ವಚಿತ್ ।

ಎಂದು ಮಹಾಭಾರತವನ್ನು ಕುರಿತು ಹೇಳುವ ಮಾತು ಆಗಮ ಸಾಹಿತ್ಯಕ್ಕೂ ಅನ್ವಯವಾದೀತೆಂದು ಭಾವಿಸಿದ್ದೇನೆ.

**ಸೂಕ್ಷ್ಮಾಗಮದ ಸೂಕ್ಷ್ಮ ಪರಿಚಯ :**

ಇಪ್ಪತ್ತೆಂಟು ಆಗಮಗಳಲ್ಲಿ ಇದು ಏಳನೆಯದು. ಬೃಹತ್ತಿನಲ್ಲಿ ಮೊದಲನೆಯದಾದ ಕಾಮಿಕಾಗಮವನ್ನು ಬಿಟ್ಟರೆ, ಎರಡನೆಯ ಸ್ಥಾನ ಇದಕ್ಕೆ ಮೀಸಲು. ಇದು ಸರ್ವಾಗಮಸಾರ ; ಸೂಕ್ಷ್ಮಕ್ಕೆ–ಸೂಕ್ಷ್ಮ: ಶಿವನ ಸೂಕ್ತಿಸುಧೆ : ಕಾರುಣ್ಯರಸಾಮೃತ ; ಗಿರಿಜೆಯ ಶ್ರವಣೇಚ್ಛೆಯ ಸತ್ಫಲ ; ದಾರ್ಶನಿಕ ಪರಿಣಾಮದ ಪರಿಣತ ಪ್ರೇರಣೆ.

ಈ ಆಗಮ ವಾಮದೇವ ಮುಖೋತ್ತರಣ. ಸೂಕ್ಷ್ಮವಾದ ವೀರಶೈವಾಚಾರ ವಿಚಾರ ಪ್ರವರ್ತಕ. ನಮ್ಮ ಒಳಗಣ್ಣನ್ನು ತೆರೆಯಿಸಿ, ಸಹಜಸಿದ್ಧವಾದ ವಸ್ತುವೊಂದನ್ನು ತೋರಿಸುತ್ತಾ ಅಂತರಂಗದ ಕತ್ತಲೆಯನ್ನು ಕಳೆಯುವುದು. ಆತ್ಮಜ್ಞಾನದ ಹಸಿವನ್ನು ಹಿಂಗಿಸಿ, ಅಂತರಂಗದಲ್ಲಿ ಇಷ್ಟ–ಪ್ರಾಣ–ಭಾವ–ಲಿಂಗಗಳ ಶಿವಯೋಗ ಸಾಧನೆಯಿಂದ ಸ್ವಸ್ವರೂಪ ದರ್ಶನವನ್ನು ಮಾಡಿಸುವ ಶಿವಯೋಗ ವಿಜ್ಞಾನದ, ವಿಧಾನ ಈ ಆಗಮದಲ್ಲಿದೆ. ಇದು ವೀರಶೈವ ದರ್ಶನದ ದಾರಿದೀಪ : ಶಿವಯೋಗ ಸಾಧಕನ ಕೈದೀವಿಗೆ.

ಸಾಧಕ ಮೈ–ಮನಗಳನ್ನು ಮರೆತು, ಭಾವ–ನಿರ್ಭಾವವಾಗಿ, ನಿರಾಳವಾಗಿ, ನಿರಾಲಂಬವಾಗಿ, ಲಿಂಗಾರ್ಚನ, ಲಿಂಗಾರ್ಪಣ, ಲಿಂಗಾನುಭೂತಿ, ಲಿಂಗಾನಂದದಲ್ಲಿ ಲೀನನಾಗುತ್ತಾನೆ. ಇದು ವೀರಶೈವ ಸಾಧನ ಲಕ್ಷ್ಯದ ಲಕ್ಷಣ. ಇದರ ವಿಶಿಷ್ಟ ನಿರೂಪಣೆ ಈ ಆಗಮದಲ್ಲಿದೆ. ಶಿಷ್ಯನೇ ಅಂಗವಾಗಿ, ಗುರುವೇ ಲಿಂಗವಾಗಿ, ಅವಿಭಕ್ತರಾಗುತ್ತಾರೆ. ಅವಿಮುಕ್ತರಾಗುತ್ತಾರೆ. ಸ್ಥೂಲ ಭಾವವಳಿದು, ಸೂಕ್ಷ್ಮಕ್ಕೆ ಆಗಮಿಸುವುದು : ಸೂಕ್ಷ್ಮದಲ್ಲಿ ಸಂಗಮಿಸುವುದು : ಕುರುಹು ಅರುಹಿನಲ್ಲಿ ಮರೆಯಾಗಿ ; ಅನುಭವ ಆನಂದದಲ್ಲಿ ಸಮರಸಗೊಳ್ಳುವುದು : ಲಿಂಗದ ಚಿಚ್ಛಕ್ತಿ ಏಕರಸವಾಗಿ ಶಾಂತ್ಯತೀತೋತ್ತರ ಕಳೆಯಾಗಿ ಹೊಳೆಯುವುದು : ಶಿವೆಯು ಶಿವನ ಚರಣಕಮಲದ ದುಂಬಿಯಾಗಿ 'ಮಹಾನುಭಾವ' ಮಕರಂದವನ್ನು ಆರೋಗಿಸುವಳು. ಇದು ಸೂಕ್ಷ್ಮಾಗ್ರಮದ ಸೂಕ್ಷ್ಮ ವಿಚಾರಸಾರ.

ಈಗ ನಮಗೆ ದೊರೆತ ಸೂಕ್ಷ್ಮಾಗ್ರಮವು ಹತ್ತು ಪಟಲಗಳುಳ್ಳ ಕ್ರಿಯಾಪಾದವನ್ನು ಹೊಂದಿದೆ. ಇದು ಉಮಾ ಮಾಹೇಶ್ವರ ಸಂವಾದ ರೂಪದಲ್ಲಿದೆ.

ಕೈಲಾಸ ಶಿಖರದ ಮೇಲೆ ಕುಳಿತ ಜಗಜ್ಜನನಿಪಾರ್ವತಿ ಶಿವನನ್ನು ಪ್ರಶ್ನಿಸುತ್ತಾಳೆ. ಅದಕ್ಕೆ ಶಿವನು ಸಾವಧಾನದಿಂದ ಉತ್ತರಿಸುತ್ತಾನೆ.

ಪಾರ್ವತಿಯ ಪ್ರಶ್ನೆ ಹೀಗಿದೆ : ''ಹೇ ಪರಮೇಶ್ವರ! ತಾವು ನಿಗಮಾಗಮಗಳ ಸಾರರಹಸ್ಯಗಳನ್ನು ಬಲ್ಲವರು, ತಮ್ಮಿಂದ ಅನೇಕ ತಂತ್ರಗಳ ವಿಷಯಗಳನ್ನು ಕೇಳಿ ತಿಳಿದಿದ್ದೇನೆ. ಆದರೂ, ಇವೆಲ್ಲವುಗಳನ್ನು ಕೇಳಿ, ನನ್ನ

ಮನಸ್ಸು ಯಾಕೋ ಇನ್ನೂ ಚಂಚಲವಾಗಿದೆ. ಆದ್ದರಿಂದ ತಾವು ಕೃಪೆಮಾಡಿ ನನ್ನ ಮನಸ್ಸಿನ ಸಮಾಧಾನಕ್ಕಾಗಿ ಸಕಲ ಶಾಸ್ತ್ರಗಳ ಸಾರವನ್ನು ಸಂಕ್ಷಿಪ್ತವಾಗಿ ತಿಳಿಸಿರಿ'' ಎಂದು ಪ್ರಾರ್ಥಿಸುತ್ತಾಳೆ. ಆಗ ಶಿವನು ಹೇಳುತ್ತಾನೆ: ''ಪಾರ್ವತೀ ! ವೇದಾಗಮ, ಶಾಸ್ತ್ರ–ಪುರಾಣಗಳು ಅನೇಕವಾಗಿವೆ, ಅವುಗಳಿಂದ ಸರಿಯಾದ ಜ್ಞಾನ ಸಿಗುವುದಿಲ್ಲ. ಆದ್ದರಿಂದ 'ಪರಮಾರ್ಥ' ವಸ್ತುವಿನ ತಿಳುವಳಿಕೆಗಾಗಿ, ನಿನಗೆ ಸೂಕ್ಷ್ಮತಂತ್ರದ ವಿಷಯವನ್ನು ಉಪದೇಶ ಮಾಡುತ್ತೇನೆ; ತಾಳ್ಮೆಯಿಂದ ಚಿತ್ತಗೊಟ್ಟು ಕೇಳು'' ಎನ್ನುತ್ತಾನೆ. ಆರಂಭದಲ್ಲಿ ಪರಶಿವನು ಪಾರ್ವತಿಗೆ ಪರತರತತ್ತ್ವ ಹಾಗೂ ಶಿವನ ಸ್ವರೂಪವನ್ನು ನಿರೂಪಿಸುತ್ತಾನೆ.

ಈ ಸೂಕ್ಷ್ಮಾಗಮದ ಮೊದಲನೆಯ ಪಟಲದಲ್ಲಿ – ಶಿವತತ್ತ್ವದ ಸ್ವರೂಪ, ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ ಹಾಗೂ ಕ್ರಿಯಾಶಕ್ತಿಗಳೆಂಬ ಐದು ಶಕ್ತಿಗಳ ನಿರೂಪಣೆ ಇದೆ. ಇಲ್ಲಿ ಒಂದೇ ಶಕ್ತಿ ಐದು ಸ್ವರೂಪಗಳನ್ನು ಪಡೆದುಕೊಳ್ಳುವ ವಿಧಾನ ವೈಶಿಷ್ಟ್ಯಪೂರ್ಣವಾಗಿದೆ. ನಿರ್ಗುಣ ಶಿವನು ಸಗುಣ ಸ್ವರೂಪ ಹೇಗಾಗುತ್ತಾನೆ? ಮತ್ತು ಅವನಿಂದ ಸಾದಾಖ್ಯ ತತ್ತ್ವದ ಅಭಿವ್ಯಕ್ತಿ ಹೇಗಾಗುತ್ತದೆ ? ಒಂದೇ ಶಿವತತ್ತ್ವ ಹೇಗೆ ಎರಡು, ಮೂರು ಹಾಗೂ ಐದು ವಿಧಗಳಾಗುತ್ತದೆ ? ಈ ಎಲ್ಲ ತಾತ್ವಿಕ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತಾ, ಇವುಗಳ ನಾಮರೂಪಗಳ ವರ್ಣನೆಯೊಂದಿಗೆ ಶಿವ ಸಾದಾಖ್ಯ, ಅಮೂರ್ತಸಾದಾಖ್ಯ, ಮೂರ್ತಸಾದಾಖ್ಯ, ಕರ್ತೃಸಾದಾಖ್ಯ ಹಾಗೂ ಕರ್ಮಸಾದಾಖ್ಯಗಳೆಂಬ ಐದು ಸಾದಾಖ್ಯ ತತ್ತ್ವಗಳ ಅವುಗಳ ಸ್ವರೂಪದ ವಿಸ್ತಾರವಾದ ವಿವರಣೆ ಇದೆ. ಮತ್ತೆ ಸಗುಣ ಸದಾಶಿವನೇ ಸಾದಾಖ್ಯ ತತ್ತ್ವವೆಂದು ಸ್ಪಷ್ಟಪಡಿಸಿದೆ. ಈ ಪಟಲದ ಕೊನೆಯಲ್ಲಿ ಮುಮುಕ್ಷುಗಳಿಗೆ ಶಿವನ ಧ್ಯಾನ ಸದಾ ಇರಲೆಂದು ಅವನ ಇಪ್ಪತ್ತೈದು ಲೀಲೆಗಳ ಹೆಸರುಗಳನ್ನು ತಿಳಿಸಲಾಗಿದೆ.

ಎರಡನೆಯ ಪಟಲದಲ್ಲಿ – ಪಾರ್ವತಿಯು ಶಿವನಿಗೆ ಹೀಗೆ ಪ್ರಶ್ನಿಸುತ್ತಾಳೆ:

''ತಾವು ಎಲ್ಲ ತತ್ತ್ವಗ್ರಂಥಗಳಲ್ಲೂ ಶಿವನ ಏನಃ ಅನ್ಯದೈವಗಳಿಲ್ಲ
ಶಿವನೇ ಜಗತ್ತಿಗೆ ಕಾರಣಕರ್ತನೆಂದು ತಿಳಿಸಿ; ಅವನ ಬೇರೆ ಬೇರೆ
ಲೀಲೆಗಳನ್ನು ನಿರೂಪಿಸಿದ್ದೀರಿ ಇದು ಹೇಗೆ?'' ಎಂದು.

ಆದಕ್ಕೆ ಪರಶಿವನ ಉತ್ತರ ಹೀಗಿದೆ : "ದೇವೀ ಮೊದಲನೆಯ ಪಟಲದಲ್ಲಿ ವರ್ಣಿಸಿದ ಎಲ್ಲ ಸ್ವರೂಪ ನಾನೇ ಆಗಿದ್ದೇನೆ. ಶಿವನ ಲೀಲೆಗಳು ಅನಂತ ; ಅವುಗಳಲ್ಲಿ ಇಪ್ಪತ್ತೈದು ಲೀಲೆಗಳು ಮಾತ್ರ ಉಪಾಸನಾ ದೃಷ್ಟಿಯಿಂದ ತುಂಬಾ ಉಪಯುಕ್ತವಾಗಿವೆ ಎಂದು ತಿಳಿಸಿ, ಈ ಪಟಲದಲ್ಲಿ ಪಂಚವಿಂಶತಿ (೨೫) ಲೀಲೆಗಳ ನಿರೂಪಣೆ ಮಾಡುತ್ತಾನೆ. ಈ ಪಟಲ ಶಿವನ ಪಂಚವಿಂಶತಿ ಲೀಲೆಗಳ ವರ್ಣನೆಗಾಗಿ ಮೀಸಲಾಗಿದೆ. ಬ್ರಹ್ಮಾದಿ ದೇವತೆಗಳು ಶಿವನ ಶಕ್ತಿಯ ವಿಲಾಸಗಳು ಮಾತ್ರ. ಶಿವನಿಗೆ ಸಮಾನ ಹಾಗೂ ಶಿವನಿಗಿಂತ ಅಧಿಕರಾದ ಯಾವ ದೇವತೆಗಳೂ ಇಲ್ಲ, ಎಂದು ಏಕದೇವೋಪಾಸನೆಯ ವಿಚಾರವನ್ನು ತಿಳಿಸಿ, ಮುಮುಕ್ಷುಗಳು ಶಿವನಿಗೆ ಮಾತ್ರ ಶರಣು ಹೋಗ ಬೇಕು ಎನ್ನುವ ವಿಷಯ ಇಲ್ಲಿದೆ.

ಮೂರನೆಯ ಪಟಲದಲ್ಲಿ – ಮಂತ್ರದ ಸ್ವರೂಪದ ನಿರೂಪಣೆ ಇದೆ. ಈ ಪಟಲ ಮಂತ್ರ–ಜಪ–ಶಿವಯೋಗ–ಸಿದ್ಧಿ ಈ ಎಲ್ಲ ವಿಚಾರಗಳಿಗೆ ಮೀಸ ಲಾಗಿದೆ. ಸಪ್ತಕೋಟಿ ಮಂತ್ರಗಳಲ್ಲಿ ಶಿವಮಂತ್ರದ ಶ್ರೇಷ್ಠತೆಯನ್ನು ಬಣ್ಣಿಸ ಲಾಗಿದೆ. ಶೈವ ಮಂತ್ರಗಳಲ್ಲಿ ಹನ್ನೊಂದು ಮಂತ್ರಗಳ, ಅವುಗಳಲ್ಲೂ ಅಘೋರ ಮಂತ್ರ ಅದರಲ್ಲೂ ಪಂಚಾಕ್ಷರ ಮಂತ್ರದ ಮಹಿಮೆಯನ್ನು ತಿಳಿಸಿ, ಈ ಮಂತ್ರದಿಂದಲೇ ಸಮಸ್ತ ಶಾಸ್ತ್ರಗಳ ಹಾಗೂ ಗಂಧರ್ವರ ಸೃಷ್ಟಿಯಾಗಿದೆ ಎಂದು ಪಂಚಾಕ್ಷರ ಮಂತ್ರದ ಮಹತ್ವವನ್ನು ಎತ್ತಿ ಸಾರುತ್ತದೆ ಮತ್ತು ಪಂಚಾಕ್ಷರ ಹಾಗೂ ಷಡಕ್ಷರ ಮಂತ್ರಗಳ ಮಹತ್ವವನ್ನು ಪ್ರತಿಪಾದಿಸಿ, ಪಂಚಾಕ್ಷರ ಮಂತ್ರಕ್ಕೆ ಸಮಾನವಾಗಿ ಷಡಕ್ಷರ ಮಂತ್ರದ ಮಹಿಮೆಯನ್ನು ತಿಳಿಸಿದೆ. ಮಂತ್ರಗಳ ಸಂಕ್ಷಿಪ್ತ ವಿನಿಯೋಗವನ್ನು ತಿಳಿಸಿ, ಅವುಗಳ ಪ್ರತ್ಯೇಕ ವರ್ಣದ ಋಷಿ, ದೇವತಾ, ಛಂದಸ್, ಸ್ವರ, ವರ್ಣ, ಮುಖ ಮೊದ ಲಾದವುಗಳ ನಿರೂಪಣೆಯನ್ನು ಮಾಡಲಾಗಿದೆ. ಕರನ್ಯಾಸ, ಅಂಗನ್ಯಾಸ ಮತ್ತು ಷಡಂಗನ್ಯಾಸದ ಕ್ರಮವನ್ನು ಸಂಕ್ಷಿಪ್ತವಾಗಿ ತಿಳಿಸಿ, ಶಿವಧ್ಯಾನ ಹಾಗೂ ಪೂಜಾ ಪರಿಕ್ರಮಗಳನ್ನು ವಿವರಿಸಿ, ಮೂರು ವಿವಿಧ ಜಪದ ಸ್ವರೂಪವನ್ನು ನಿರೂಪಿಸಲಾಗಿದೆ. ಇಲ್ಲಿ 'ಮಾನಸ' ಜಪದ ಲಕ್ಷಣ ವೈಶಿಷ್ಟ್ಯಪೂರ್ಣವಾಗಿದೆ. ಜಪದ ಸಮಾಪ್ತಿಯ ನಂತರ ನಿರ್ಗುಣ ಮುದ್ರಾಪ್ರದರ್ಶನದ ಉಲ್ಲೇಖ ವಿದೆ. ಪ್ರಸಂಗಾನುಸಾರ ಮಂತ್ರದ ಪುರಶ್ಚರಣ ವಿಧಿಯನ್ನು ಸಂಕ್ಷಿಪ್ತವಾಗಿ

ತಿಳಿಸಿ, 'ಕಾಮ್ಯ' ಜಪದ ವಿಧಾನವನ್ನು ಸೂಚಿಸಿ, ಜಪಮಾಲೆಯ ನಿರ್ಮಾಣದ ಕ್ರಮ, ಜಪದ ನಿಯಮ ಹಾಗೂ ಅದರ ಸಂಸ್ಕಾರ, ಅದನ್ನು ರಹಸ್ಯವಾಗಿಡುವ ವಿಧಾನಗಳನ್ನು ವಿವರವಾಗಿ ತಿಳಿಸಿ, ಯೋಗ್ಯ ಶಿಷ್ಯನಿಗೆ ಮಾತ್ರ ಈ ಮಂತ್ರ ವಿದ್ಯೆಯನ್ನು ಉಪದೇಶ ಮಾಡಬೇಕೆನ್ನುವ ಎಚ್ಚರಿಕೆಯ ಸೂಚನೆಯೂ ಇದೆ.

ನಾಲ್ಕನೆಯ ಪಟಲದಲ್ಲಿ – ಷಡಕ್ಷರ ಮಹಾಮಂತ್ರದ ರಹಸ್ಯವನ್ನು ಪ್ರಸ್ತಾಪಿಸಲಾಗಿದೆ.

ಸಾಕಲ್ಯ, ಶಾಂಭವ, ಸೌಖ್ಯ, ಸಾವಶ್ಯ ಮತ್ತು ಸಾಯುಜ್ಯವೆಂಬ ಐದು ಪ್ರಣವಗಳ ನಿರೂಪಣೆ ಇದೆ. ಷಡಕ್ಷರ ಮಹಾಮಂತ್ರದ ಪ್ರತ್ಯೇಕ ವರ್ಣದ ಸ್ವರೂಪದ, ವಿಸ್ತಾರವಾದ ವಿವರಣೆ ಇದೆ. ಮತ್ತು ಐದು ಪ್ರಣವಗಳ ಸ್ವರೂಪವನ್ನು ವಿಶ್ಲೇಷಣೆ ಮಾಡಲಾಗಿದೆ. ಪಂಚಾಕ್ಷರ ಮಹಾಮಂತ್ರವೇ ಪ್ರಣವ ಸಹಿತವಾಗಿ, ಷಡಕ್ಷರ ಮಂತ್ರವಾಗಿದೆ ಎನ್ನುವ ವಿಚಾರವೂ ಇದೆ.

ಷಡಕ್ಷರ ಮಂತ್ರದ ಷಟ್‌ತತ್ತ್ವ ಸ್ವರೂಪ, ಷಟ್‌ಸ್ಥಲರೂಪ, ಮತ್ತು ಷಡ್‌ಲಿಂಗ ರೂಪಗಳ ವಿವರಣೆಯನ್ನು ತಿಳಿಸಿ, ಷಡಾತ್ಮಕವಾದ ಈ ಸಮಸ್ತ ಜಗತ್ತು ಷಡಕ್ಷರ ಮಂತ್ರದಿಂದ ಸಂಭವಿಸಿದೆ ಎನ್ನುವ ವಿಶಿಷ್ಟ ವಿಚಾರವೂ ಇಲ್ಲಿದೆ. ಕೊನೆಯಲ್ಲಿ ಷಡಕ್ಷರ ಮತ್ತು ಪಂಚಾಕ್ಷರ ಮಂತ್ರಗಳ ಮಹತ್ವವನ್ನು ವಿವರಿಸಿ, ಈ ಮಂತ್ರದ ಅಧಿಕಾರಿಯ ಲಕ್ಷಣಗಳ ಸ್ವರೂಪವನ್ನು ಸ್ಪಷ್ಟ ಪಡಿಸಿದೆ.

ಐದನೆಯ ಪಟಲದಲ್ಲಿ – ಗುರು-ಶಿಷ್ಯರ ಸ್ವರೂಪವನ್ನು ಸಮಗ್ರವಾಗಿ ವಿವರಿಸಲಾಗಿದೆ. ಆದರ್ಶ ಗುರುವಿನ ಲಕ್ಷಣ, ಅವನ ಪ್ರಭಾವ ಹಾಗೂ ಮಹತ್ವವನ್ನು ಬಣ್ಣಿಸಲಾಗಿದೆ. ಗುರುವಿನ ದೇಹದಲ್ಲಿ ಸಮಸ್ತ ತೀರ್ಥಗಳಿವೆ ಎಂದು ಗುರುವಿನ ಮಹತ್ವವನ್ನು ಎತ್ತಿ ಹಿಡಿಯಲಾಗಿದೆ. ಪಶು-ಪತಿ-ಪಾಶ ಗಳೆಂಬ ತತ್ತ್ವಗಳ ಸ್ವರೂಪವನ್ನು ವಿವರವಾಗಿ ತಿಳಿಸಿ ಪಾಶಬದ್ಧನಾದ ಜೀವಿ ಮುಕ್ತನಾಗಲು ಗುರುವನ್ನು ಆಶ್ರಯಿಸಲೇಬೇಕು ಎನ್ನುವ ಉಪಯುಕ್ತ ಸೂಚನೆ ಇದೆ. ಒಂದು ಕುಟುಂಬಕ್ಕೆ ಒಬ್ಬನೇ ಗುರು ಇರಬೇಕು ; ಇಬ್ಬರು ಇರಬಾರದು ಎನ್ನುವ, ಭಾವನಾತ್ಮಕ ಹಾಗೂ ಮೌಲಿಕ ವಿಚಾರಗಳ ಉಲ್ಲೇಖ ವಿದೆ.

ಈ ಪಟಲದಲ್ಲಿ ಆದರ್ಶ ಗುರುವಿನಂತೆ, ಆದರ್ಶ ಶಿಷ್ಯನ ಲಕ್ಷಣವನ್ನು ತಿಳಿಸಿ, ಶಿಷ್ಯನನ್ನು ಪರೀಕ್ಷಿಸಿ, ಗುರುವು ಅವನಿಗೆ, ಶಿವಾಚಾರವನ್ನು ಬೋಧಿಸ ಬೇಕೆಂಬ ನಿರ್ದೇಶನವಿದೆ. ಭಸ್ಮ ರುದ್ರಾಕ್ಷಗಳ ಧಾರಣಕ್ರಮ ಹಾಗೂ ನ್ಯಾಸ ಕ್ರಮಗಳ ವಿವರಣೆ ಇದೆ. ಇಷ್ಟಲಿಂಗ, ಸಂಸ್ಕಾರ ಪದ್ಧತಿ, ಹಾಗೂ ವೀರ ಮಾಹೇಶ್ವರರ ಆಚಾರ ನಿಷ್ಠೆಯಿಂದ ಸಂಚಿತ ಮತ್ತು ಪ್ರಾರಬ್ಧ ಕರ್ಮಗಳು ನಷ್ಟವಾಗುತ್ತವೆ ಎನ್ನುವ ಸೂಚನೆಯ ಉಪದೇಶವೂ ಇದೆ.

ಆರನೆಯ ಪಟಲದಲ್ಲಿ – ಪರಮೇಶ್ವರಿಯು ಲಿಂಗತತ್ತ್ವದ ಸ್ವರೂಪದ ಬಗ್ಗೆ ಜಿಜ್ಞಾಸೆ ಉಳ್ಳವಳಾಗಿ, ಶಿವನಿಗೆ ಹೀಗೆ ಪ್ರಶ್ನಿಸುತ್ತಾಳೆ:

''ಇಷ್ಟಲಿಂಗದ ಪೂಜೆಯನ್ನು ಹೇಗೆ ಮಾಡಬೇಕು? ಅದರ ಫಲವೇನು?'' ಎಂದು. ಅದಕ್ಕೆ ಪರಶಿವನು ''ನಾದ–ಬಿಂದು–ಕಳಾಸ್ವರೂಪ ವನ್ನು ವಿವರಿಸಿ ಲಿಂಗತತ್ತ್ವ, ನಾದ–ಬಿಂದು–ಕಳಾಸ್ವರೂಪವಾಗಿದೆ ಎಂದು ತಿಳಿಸಿ, 'ಲಿಂಗ' ಪದದ ನಿರುಕ್ತಿಯನ್ನು ವಿವರಿಸಿ, 'ಲಿಂಗ'ದ ಮಹಿಮೆಯನ್ನು ವರ್ಣಿಸಿ, ಸಮಸ್ತ ಸೃಷ್ಟಿ ಲಿಂಗದಲ್ಲಿ ಉದ್ಭವಿಸಿ, ಲಿಂಗದಲ್ಲಿಯೇ ಲೀನವಾಗು ತ್ತದೆ'' ಎಂದು ಸ್ಪಷ್ಟಪಡಿಸುತ್ತಾನೆ. ಲಿಂಗಾರ್ಚನ ಪದ್ಧತಿಯ ಸಮ್ಯಕ್ ವಿವರಣೆ ಇದೆ. ಕರ್ಮ–ತಪ–ಜಪ–ಧ್ಯಾನ ಮತ್ತು ಜ್ಞಾನಗಳೆಂಬ ಐದು ಯಜ್ಞಗಳ ಸ್ವರೂಪದ ವರ್ಣನೆ ಇದೆ. ಬಾಹ್ಯ ಪೂಜೆಗಿಂತ ಅಂತರಂಗ ಪೂಜೆಯ ಮಹತ್ವವನ್ನು ಎತ್ತಿ ಹಿಡಿಯಲಾಗಿದೆ. ವೀರಶೈವರಿಗೆ ಕರಪೀಠದ ಇಷ್ಟಲಿಂಗಾರ್ಚನೆಯ ಪರಿಕ್ರಮ, ಪ್ರಾಣಲಿಂಗ ಭಾವಲಿಂಗಗಳ ಉಪಾಸನಾ ವಿಧಾನದೊಂದಿಗೆ ಅಷ್ಟೋಪಚಾರ, ಪಂಚೋಪಚಾರಗಳ ಬಹಿರಂಗ ಪೂಜೆಯ ವಿಧಾನವನ್ನು ತಿಳಿಸಲಾಗಿದೆ. ವೀರಶೈವನ ಲಕ್ಷಣ ಅವನು ಅತ್ಯಾ ವಶ್ಯಕವಾಗಿ ಉಪಾಸನೆ ಮಾಡುವ ಷಟ್‌ಸ್ಥಲಗಳ ವಿಸ್ತೃತ ವಿವರಣೆ ಇದೆ. ಲಿಂಗಾರ್ಚನದ ಫಲದ ಉಲ್ಲೇಖದೊಂದಿಗೆ, ಶಿವಲಿಂಗವನ್ನು ಪೂಜಿಸುವ ವನು ಲೋಕದಲ್ಲಿ 'ಶ್ರೇಷ್ಠ ಪುರುಷ' ಎನ್ನುವ ವಿಶಿಷ್ಟ ವಿಚಾರವೂ ಇಲ್ಲಿದೆ.

ಏಳನೆಯ ಪಟಲದಲ್ಲಿ – ಪರಮೇಶ್ವರಿಯು, ''ವೀರಶೈವವನ್ನು ಬಿಟ್ಟು ಶೈವಧರ್ಮದಲ್ಲಿ ಎಷ್ಟು ಪ್ರಭೇದಗಳಿವೆ ? ಅವುಗಳ ಮೋಕ್ಷಪ್ರದ ಆಚಾರ ಪದ್ಧತಿ ಹೇಗೆ ?'' ಎಂದು ಪರಮೇಶ್ವರನನ್ನು ಪ್ರಶ್ನಿಸುತ್ತಾಳೆ. ಆಗ ಪರಶಿವನು ಉತ್ತರರೂಪವಾಗಿ, ''ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ,

ಅವಾಂತರ ಶೈವ, ಪ್ರವರ ಶೈವ ಮತ್ತು ಅಂತ್ಯಶೈವಗಳೆಂಬ ಸಪ್ತವಿಧ ಶೈವದ ಲಕ್ಷಣಗಳನ್ನು ನಿರೂಪಿಸುತ್ತಾನೆ. ಆದಿಶೈವರ ವಿಷಯವನ್ನು ಮೊದಲು ಪ್ರಸ್ತಾಪಿಸಿ ಇವರು ಕೌಶಿಕ, ಕಶ್ಯಪ, ಭಾರದ್ವಾಜ, ಅತ್ರಿ ಮತ್ತು ಗೌತಮರೆಂಬ ಐದು ಜನ ಋಷಿಗಳ ವಂಶಜರು, ಪರಾರ್ಥ ಪೂಜೆಯ ಅಧಿಕಾರ ಉಳ್ಳವರು ಎಂದು ಹೇಳಿ, ಶೈವ ಪ್ರಭೇದಗಳು ಆಚಾರ ಭೇದಗಳಿಂದಾಗಿವೆ ಎಂದು ಸ್ಪಷ್ಟಪಡಿಸುತ್ತಾನೆ. ಅನಂತರ ವೀರಶೈವ ಪ್ರಭೇದಗಳಾದ ಸಾಮಾನ್ಯ, ವಿಶೇಷ ಹಾಗೂ ನಿರಾಭಾರಿಗಳ ಲಕ್ಷಣ ಮತ್ತು ಲಿಂಗನಿಷ್ಠೆಯ ಮಹತ್ವವನ್ನು ವಿವರಿಸಿ, ದೇಹದಿಂದ ಇಷ್ಟಲಿಂಗದ 'ವಿಯೋಗ'ವಾಗಬಾರದು ; ಒಂದು ವೇಳೆ ಆದರೆ, ಪುನಃ ಲಿಂಗ ಸಂಸ್ಕಾರಕ್ರಮ ಹೇಗೆ ? ಯಾವ ಸಂದರ್ಭದಲ್ಲಿ ಇದು ಸಾಧ್ಯ ? ಇತ್ಯಾದಿ ಪ್ರಶ್ನೆಗಳಿಗೆ ಸಮುಚಿತ ಉತ್ತರವಿದೆ. ಗುರು–ಲಿಂಗ–ಜಂಗಮರ ಸೇವೆಯಲ್ಲಿ ಪ್ರಾಣವನ್ನು ಸಹ ಅರ್ಪಿಸಲು ಸಿದ್ಧನಾದವನು ವಿಶೇಷ ವೀರಶೈವನೆಂದು ತಿಳಿಸಿ, ನಿರಾಭಾರಿ ವೀರಶೈವನ ಸ್ವರೂಪ ಮತ್ತು ಅವನ ನಡೆ–ನುಡಿಯ ವರ್ಣನೆ ಮಾಡಿ, ಅವನಿಗೆ 'ಅತ್ಯಾಶ್ರಮೀ', 'ಅತಿವರ್ಣಾಶ್ರಮೀ' ಎನ್ನುವ ಪದ ಪ್ರಯೋಗ ಮಾಡಲಾಗಿದೆ. ಕೊನೆಗೆ 'ಜಂಗಮ' ಮತ್ತು ಲಿಂಗಾರಾಧನೆಯ ಮಹತ್ವವನ್ನು ತಿಳಿಸಿ, ಇದು ರಹಸ್ಯದ ವಿಷಯ, ಇದನ್ನು ಅಯೋಗ್ಯರಿಗೆ ತಿಳಿಸಲಾಗದು ; ಯೋಗ್ಯ ವ್ಯಕ್ತಿಗಳಿಗೆ ಮಾತ್ರ ಇದರ ಪ್ರಕ್ರಿಯೆಯನ್ನು ಬೋಧಿಸಬೇಕು ಎನ್ನುವ ಎಚ್ಚರಿಕೆಯ ಸಂದೇಶವೂ ಇದೆ.

ಎಂಟನೆಯ ಪಟಲದಲ್ಲಿ– ಗಿರಿಜೆಯ, 'ಲಿಂಗಾಂಗ ಸಂಬಂಧ'ದ ಪ್ರಶ್ನೆಗೆ ಸಮುಚಿತ ಉತ್ತರವಿದೆ. ಪರಶಿವನು–ಷಟ್‌ಸ್ಥಲದ ಸಮ್ಯಕ್ ಜ್ಞಾನದಿಂದ ಲಿಂಗಾಂಗ ಸಾಮರಸ್ಯದ ನಿಲುವನ್ನು ಅರಿಯಲು ಸಾಧ್ಯವೆಂದು ತಿಳಿಸುತ್ತಾನೆ. ಇಲ್ಲಿ – ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಚರಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗಗಳೆಂಬ ಆರು ವಿಧ ಲಿಂಗಗಳ ಹಾಗೂ ಪ್ರತ್ಯೇಕ ಲಿಂಗಗಳ ಮೂರು, ಮೂರು ಪ್ರಭೇದಗಳ (ತ್ರಿವಿಧ) ವಿವರವಾದ ನಿರೂಪಣೆ ಇದೆ. ಅಂದರೆ, ಆಚಾರಲಿಂಗದಲ್ಲಿ ಸದಾಚಾರ, ನಿಯತಾಚಾರ ಮತ್ತು ಗಣಾಚಾರವೆಂದೂ, ಗುರುಲಿಂಗದಲ್ಲಿ–ದೀಕ್ಷಾ–ಶಿಕ್ಷಾ ಮತ್ತು ಅನುಭಾವಗಳೆಂದೂ ; ಶಿವಲಿಂಗದಲ್ಲಿ–ಇಷ್ಟ–ಪ್ರಾಣ–ಭಾವಲಿಂಗಗಳೆಂದೂ ; ಚರಲಿಂಗದಲ್ಲಿ–ಸ್ವಯಂ, ಚರ ಮತ್ತು ಪರವೆಂದೂ, ಪ್ರಸಾದಲಿಂಗದಲ್ಲಿ–ಶುದ್ಧ, ಸಿದ್ಧ ಮತ್ತು

ಪ್ರಸಿದ್ಧವೆಂದೂ; ಕೊನೆಯದಾದ ಮಹಾಲಿಂಗದಲ್ಲಿ – ಪಿಂಡಜ, ಅಂಡಜ, ಬಿಂದ್ವಾಕಾಶಗಳೆಂಬ ಪ್ರಭೇದಗಳ ಲಕ್ಷಣ ಸ್ವರೂಪವನ್ನು ವಿವರವಾಗಿ ವಿವರಿಸಲಾಗಿದೆ. ಪರಮೇಶ್ವರಿ ಮತ್ತೆ ಶಿವನಿಗೆ ಪ್ರಶ್ನಿಸುತ್ತಾಳೆ; ''ಈ ಎಲ್ಲ ಲಿಂಗಗಳ ಪೂಜೆ ಹೇಗೆ ? ವಿಧಿ–ವಿಧಾನ ಹೇಗೆ ? ಇದರಿಂದ ದೊರೆಯುವ ಫಲವಾವುದು ?'' ಎಂದು. ದೇವಿಯ ಪ್ರಶ್ನೆಗೆ ಪರಶಿವನು ಉತ್ತರ ರೂಪದಲ್ಲಿ ಭಕ್ತ–ಮಾಹೇಶ್ವರ–ಪ್ರಸಾದೀ–ಪ್ರಾಣಲಿಂಗೀ–ಶರಣ ಹಾಗೂ ಐಕ್ಯಗಳೆಂಬ ಅಂಗಸ್ಥಲಗಳ ವಿವರಣೆಯನ್ನು ನೀಡಿ, ಅವುಗಳ ಲಕ್ಷಣವನ್ನು ತಿಳಿಸುತ್ತಾನೆ. ಅನಂತರ ಗುರು–ಭಕ್ತ; ಲಿಂಗ–ಭಕ್ತ; ಮತ್ತು ಚರಭಕ್ತ;ರೆಂಬ ತ್ರಿವಿಧ ಭಕ್ತರ ವಿಷಯವನ್ನು ಪ್ರಸ್ತಾಪ ಮಾಡುತ್ತಾನೆ. ಆಚಾರಲಿಂಗದ ಮೋಹಿ, ಭಕ್ತ, ಪೂಜಕ, ವೀರ, ಪ್ರಸಾದವಾನ್, ಮತ್ತೆ ಪ್ರಾಣಿಗಳೆಂದು ಆರು ಪ್ರಕಾರದ ಭಕ್ತರ ಪುನಃ ಇದೇ ಕ್ರಮದಲ್ಲಿ ಗುರುಲಿಂಗ–ಶಿವಲಿಂಗ–ಚರಲಿಂಗ–ಪ್ರಸಾದಲಿಂಗ ಮತ್ತು ಪ್ರಾಣಲಿಂಗಗಳಿಗೆ ಆರು ಆರು ವಿಧದ ಭಕ್ತರ ಲಕ್ಷಣಗಳನ್ನು ತಿಳಿಸಿ, ಇದರಿಂದ ಲಿಂಗಸ್ಥಲದ ಸಂಖ್ಯೆ (೬×೬=೩೬) ಮೂವತ್ತಾರು ಆಗುತ್ತದೆ. ಷಟ್‌ಸ್ಥಲಾತ್ಮಕ ಅಂಗ (ಭಕ್ತ)ನಿಗೆ ಬೇರೆ–ಬೇರೆ ಅಂಗಗಳಲ್ಲಿ ಷಡ್ವಿಧ ಲಿಂಗಗಳ ವಿಚಾರವನ್ನು ತಿಳಿಸಿ, ಒಂದರ ನಂತರ ಮತ್ತೊಂದು ಹೀಗೆ ಕ್ರಮವಾಗಿ 'ಮಹಾಲಿಂಗ' ಸ್ವರೂಪವನ್ನು ಪಡೆಯುವ ಪರಿಕ್ರಮವನ್ನು ದಿಗ್ದರ್ಶನ ಮಾಡಿ ಕೊನೆಯಲ್ಲಿ ಲಿಂಗ ಮತ್ತು ಅಂಗ ಸಂಬಂಧದ ಜ್ಞಾನವನ್ನು ಗುರುವಿನ ಉಪದೇಶದ ಮೂಲಕವೇ ಅರಿಯಬೇಕು ಎನ್ನುವ ನಿರ್ಣಯದ ವಿಚಾರ ಇಲ್ಲಿದೆ.

ಒಂಭತ್ತನೆಯ ಪಟಲದಲ್ಲಿ – ಪಾರ್ವತಿ ಭಕ್ತರ ಮಹಾತ್ಮೆಯನ್ನು ಅರಿಯಲು ಬಯಸುತ್ತಾಳೆ. ಅದಕ್ಕೆ ಪರಮೇಶ್ವರನು ಉತ್ತರರೂಪವಾಗಿ ದೇವಿಗೆ ಹೀಗೆ ವಿವರಿಸುತ್ತಾನೆ.

''ಆಚಾರಭೇದದಿಂದ ಭಕ್ತರಲ್ಲಿ ಕನಿಷ್ಠ, ಮಧ್ಯಮ, ಉತ್ತಮ ಹಾಗೂ ಉತ್ತಮೋತ್ತಮವೆಂದು ನಾಲ್ಕು ವಿಧಗಳಿವೆ. ಮಧ್ಯಮ–ಉತ್ತಮ ಹಾಗೂ ಉತ್ತಮೋತ್ತಮ. ಭಕ್ತರಲ್ಲೂ, ಪುನಃ ಮೂರು–ಪ್ರಭೇದಗಳಿವೆ ಎಂದು ತಿಳಿಸುತ್ತಾನೆ. ಪ್ರಾಣಲಿಂಗದ ಉಪಾಸನೆ ಮಾಡುವ ವೃತ್ತಿಯಿಂದಾಗಿ ಅವನು ಉತ್ತಮೋತ್ತಮ ಭಕ್ತನೆನಿಸಿಕೊಳ್ಳುತ್ತಾನೆ. ಇಲ್ಲಿ ದೇವಿ, ಭಕ್ತರ ಲಕ್ಷಣ, ಅವರ ವೃತ್ತಿ, ಮತ್ತುಗುಣಗಳನ್ನು ಕುರಿತು ಪ್ರಶ್ನಿಸುತ್ತಾಳೆ. ಆಗ ಪರಶಿವನು ಸವಿಸ್ತಾರ

ವಾಗಿ ಭಕ್ತರ ಲಕ್ಷಣ, ಮಹಿಮೆಯನ್ನು ವಿವರಿಸುತ್ತಾನೆ. ವೀರಶೈವರಲ್ಲಿ ಶ್ರೇಷ್ಠ ಭಕ್ತನ ಗುಣಾತಿಶಯವನ್ನು ವರ್ಣಿಸಿ, ಶಿವನು ಇಂತಹ ಭಕ್ತರಿಗೆ ಮಾತ್ರ ಅಧೀನನೆಂದು (ಭಕ್ತಪರಾಧೀನ) ತಿಳಿಸುತ್ತಾನೆ. ಭಕ್ತಪದದ ನಿರುಕ್ತಿಯನ್ನು ಅರ್ಥಪೂರ್ಣವಾಗಿ ವ್ಯಾಖ್ಯಾನಿಸಿ, ಸದ್‌ಭಕ್ತರ ಸೇವೆಯಿಂದ ದೊರೆಯುವ ಸತ್‌ಫಲ, ಅವರಿಗೆ ದ್ರೋಹ ಮಾಡುವುದರಿಂದ ಸಿಗುವ ದುಷ್ಫಲದ ವಿವರಣೆ ಇದೆ.

ಗ್ರಂಥದ ಉಪಸಂಹಾರದಲ್ಲಿ ಸೂಕ್ಷ್ಮ ತಂತ್ರದಲ್ಲಿ ಇದುವರೆಗೆ ಪ್ರಸ್ತಾಪಿಸಿದ ಮೋಕ್ಷ ಮಾರ್ಗಕ್ಕೆ ಏಕೈಕ ಸಾಧನವಾದ ಜ್ಞಾನಕ್ಕಿಂತ ಅತಿಶಯ ವಾದ ಜ್ಞಾನ ಬೇರೊಂದಿಲ್ಲ. ಎಲ್ಲ ಪ್ರಕಾರದ ಸಂಪತ್ತನ್ನು ಕೊಡುವ ಜ್ಞಾನ ಇದೇ ಆಗಿದೆ ಎಂದು ಶಿವಜ್ಞಾನದ ಮಹತ್ವವನ್ನು ಸ್ಪಷ್ಟಪಡಿಸಿದೆ.

ಹತ್ತನೆಯ ಪಟಲದಲ್ಲಿ – ಪರಮೇಶ್ವರಿ, ಲೋಕಮಾತೆ, 'ಶಿವನು ಪಂಚಬ್ರಹ್ಮಮಯ ಸ್ವರೂಪ' 'ತತ್ತ್ವಾತೀತೆ' ಹಾಗೂ 'ತತ್ತ್ವಮಯ ಸ್ವರೂಪ'ನೆಂದೂ ಶಿವನ ಲೀಲಾವರ್ಣನೆಯನ್ನು ಬಗೆ–ಬಗೆಯಾಗಿ ಸ್ತುತಿ ಮಾಡುತ್ತಾಳೆ. ಸಮಸ್ತ ವೇದ, ದೇವಗಣ, ಈ ಜಗತ್ತಿನ ಸೃಷ್ಟಿ–ಸ್ಥಿತಿ–ಲಯಗಳಿಗೆ ಶಿವನೇ ಕಾರಣ ಅವನು ಅಮಂಗಳ ವಸ್ತುವಿನೊಂದಿಗಿದ್ದರೂ, ಜಗತ್ತಿಗೆ ಮಂಗಲಪ್ರದನಾಗಿದ್ದಾನೆ. ಹೀಗೆ ಪಾರ್ವತಿ ಶಿವನ ಮಹಿಮೆಯನ್ನು ಅನನ್ಯ ಭಕ್ತಿಯಿಂದ ವರ್ಣಿಸುತ್ತಾಳೆ. ಇಲ್ಲಿ ಶಿಪ್ರ ಜನಾಂಗದ ಉಲ್ಲೇಖವೂ ಇದೆ. ಶಿವನು ಪಾರ್ವತಿಯ ಸ್ತುತಿಗೆ ಪ್ರಸನ್ನನಾಗಿ, ''ಏನಾದರೊಂದು ವರವನ್ನು ಕೇಳು'' ಎಂದು ಹೇಳುತ್ತಾನೆ. ಆಗ ಪಾರ್ವತಿ– ''ದೃಢ ಭಕ್ತಿಯ'' ವರವೇ ಸಾಕೆಂದು ಹೇಳುತ್ತಾಳೆ. ಶಿವನು ಪಾರ್ವತಿಗೆ 'ದೃಢ ಭಕ್ತಿ'ಯ ವರದೊಂದಿಗೆ ಯಾರು ಪಾರ್ವತಿಯ 'ಸ್ತುತಿ'ಯನ್ನು ಭಕ್ತಿಭಾವದಿಂದ ಪಠಿಸುವರೋ ಅವರು ಷಟ್‌ಸ್ಥಲ ಜ್ಞಾನಸಂಪನ್ನರಾಗುತ್ತಾರೆ ಎನ್ನುವ ವರವನ್ನು ಅನುಗ್ರಹಿಸುತ್ತಾನೆ. ಪಟಲದ ಅಂತ್ಯದಲ್ಲಿ ಷಟ್‌ಸ್ಥಲ ಶಾಸ್ತ್ರ ರಹಸ್ಯದ ವಿಷಯವನ್ನು ಮಾರ್ಮಿಕವಾಗಿ ತಿಳಿಸಲಾಗಿದೆ. ಇಲ್ಲಿಗೆ ಸೂಕ್ಷ್ಮಾಗಮದ ಸೂಕ್ಷ್ಮ ಅವಲೋಕನದೊಂದಿಗೆ ೧೦ನೆಯ ಪಟಲ, ಉತ್ತರ ಭಾಗದ ಕ್ರಿಯಾಪಾದ ಮುಕ್ತಾಯವಾಗುತ್ತದೆ.

■■

## ಚಂದ್ರಜ್ಞಾನಾಗಮದಲ್ಲಿ ಶೈವ, ವೀರಶೈವ ಪ್ರಭೇದಗಳು

### ಶೈವಧರ್ಮದ ಇತಿಹಾಸ : ಒಂದು ನೋಟ

ಶಿವೋದಾತಾ ಶಿವೋಭೋಕ್ತಾ ಶಿವಃ ಸರ್ವಮಿದಂ ಜಗತ್ ।
ಶಿವೋ ಯಜತಿ ಯಜ್ಞಶ್ಚ ಯಃ ಶಿವಃ ಸೋಽಹಮೇವ ಹಿ ॥
ಶುಭಮಸ್ತು ಸರ್ವಜಗತಾಂ ಪರಹಿತನಿರತಾ ಭವಂತು ಭೂತಗಣಾಃ ।
ದೋಷಾಃ ಪ್ರಯಾಂತು ಶಾಂತಿಃ ಸರ್ವತ್ರ ಸುಖೀ ಭವಂತು ಲೋಕಾಃ॥*

ಶಿವನೇ ಎಲ್ಲದಕ್ಕೂ ಕಾರಣ, ಜಗತ್ತು ಶಿವಮಯ, ಎಲ್ಲರೂ ಶಿವಸ್ವರೂಪಿಗಳು, ಜಗತ್ತಿಗೆ ಶುಭವಾಗಲಿ, ಲೋಕದ ಜನರು ಪರಹಿತದಲ್ಲಿ ತೊಡಗಲಿ, ಕಷ್ಟಗಳೆಲ್ಲ ಕಳೆದು ಜಗತ್ತಿನ ಜನಾಂಗವೆಲ್ಲ ಸುಖವಾಗಿರಲಿ ಎನ್ನುವ ಉದಾತ್ತ ಧ್ಯೇಯ, ಆಶಯವನ್ನು ಜಗತ್ತಿಗೆ ಸಂದೇಶ ನೀಡುವ ಶೈವಧರ್ಮ ಭಾರತದಲ್ಲಿ ಪ್ರಾಚೀನತಮವಾದುದು. ಇದು ಪ್ರಾಕ್ ವೈದಿಕ ಮತವೆಂದು ವಿದ್ವಾಂಸರ ಅಭಿಮತ. ಖ್ಯಾತ ಇತಿಹಾಸ ಸಂಶೋಧಕರಾದ ಸರ್ ಜಾನ್ ಮಾರ್ಷಲ್ಲರು "ಪ್ರಪಂಚದ ಧರ್ಮಗಳಲ್ಲಿ ಶೈವಧರ್ಮ ಪ್ರಾಚೀನತಮವಾದುದು. ಮೊಹಂಜೋದಾರೋ–ಹರಪ್ಪ–ನಾಗರಿಕತೆಯ ಅವಶೇಷಗಳಿಂದ ತಿಳಿದು ಬಂದಿರುವ ಸಂಗತಿ ಎಂದು ಹೇಳುತ್ತಾರೆ.

ಶೈವಧರ್ಮ ಜಗತ್ತಿನಾದ್ಯಂತ ಹರಡಿತ್ತೆಂದು ತಿಳಿದುಬರುತ್ತದೆ. ಸೈಂಧವ ಸಂಸ್ಕೃತಿ ಜನಾಂಗದಲ್ಲಿ, ಮೆಸೊಪೊಟೋಮಿಯಾ, ಬ್ಯಾಬಿಲೋನ, ಗ್ರೀಕ್, ಈಜಿಪ್ತ್ ಮುಂತಾದ ನದೀ ಸಂಸ್ಕೃತಿಗಳ ಜನಾಂಗಗಳಲ್ಲಿ ಆಗ್ನೇಯ, ಏಷ್ಯಾದೇಶಗಳಲ್ಲಿ ನೇಪಾಳ–ಭೂತಾನ ಹಾಗೂ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಶಿವೋಪಾಸನೆ ಅಲ್ಲಲ್ಲಿ ಉಳಿದುಬಂದಿದೆ ಹಾಗೂ ಬೆಳೆದುಬಂದಿದೆ. ವೇದ–ಆಗಮ–ಪುರಾಣ, ಸ್ತೋತ್ರ ಸಾಹಿತ್ಯದಲ್ಲಿ ಶಿವಾರಾಧನೆಯ ವಿಷಯವಿದೆ. ಶಿವಪುರಾಣಗಳು ಪ್ರಸಿದ್ಧವಾಗಿವೆ. ಕಾಳಿದಾಸ–ಭೋಜ–ಬಾಣ–ಹರ್ಷ

---

*. ವಿವೃತ್ತಿ ವಿಮರ್ಶಿನಿ–ಅಭಿನವಗುಪ್ತ

ಮೊದಲಾದ ಕವಿಗಳೂ ಹಾಗೂ ಶಂಕರಾಚಾರ್ಯರು ಶಿವೋಪಾಸಕರು. ಕುಶಾನ, ಹೂಣ, ಚೋಳ; ಪಲ್ಲವ, ಕದಂಬ, ರಾಷ್ಟ್ರಕೂಟ, ಚಾಲುಕ್ಯ, ವಿಜಯನಗರ, ಕಾಕತೀಯ ರಾಜವಂಶಗಳ ಅರಸರು ಶಿವಭಕ್ತರಾಗಿದ್ದರು. ಭಾರತದ ಉದ್ದಗಲಕ್ಕೂ ಇರುವ ದ್ವಾದಶ ಜ್ಯೋತಿರ್ಲಿಂಗಗಳು, ಅಗಣಿತ ಶಿವಮಂದಿರಗಳು ಶಿವಮತದ ಜನಪ್ರಿಯತೆಗೆ ವ್ಯಾಪಕತೆಗೆ ಸಾಕ್ಷಿಗಳಾಗಿ ನಿದರ್ಶನಗಳಾಗಿ ನಿಂತಿವೆ. ಬುದ್ಧನು ತನ್ನ ಉಪದೇಶದಲ್ಲಿ ''ಶಿವವಿಜ್ಜ'' ಎಂದು ಹೇಳಿದ್ದಾನೆ.

ಅಶೋಕನು ಕ್ರಿ.ಪೂ. ೨೫೦ರಲ್ಲಿ ನೇಪಾಳಕ್ಕೆ ಹೋದಾಗ ಪಶುಪತಿ ನಾಥನ ದೇವಾಲಯದ ಉತ್ತರಭಾಗದಲ್ಲಿ ಬೌದ್ಧವಿಹಾರವನ್ನು ಕಟ್ಟಿಸಿದ. ಅವನ ನಿಧನಾಂತರ ಅವನ ಮಗಳು ಚಾರುಮತಿ, ಮಗ ಜತಾಕ, ಇವನ ಪತ್ನಿ ಈಶಾನದೇವಿ ಶಿವದೇವಾಲಯವನ್ನು ಕಟ್ಟಿಸಿ ಅಶೋಕೇಶ್ವರನೆಂದು ಹೆಸರಿಟ್ಟಿದ್ದಾರೆ. ನೇಪಾಳದಲ್ಲಿ ಈಗಲೂ ಈ ದೇವಾಲಯವನ್ನು ನೋಡಬಹುದಾಗಿದೆ. ಭಾರತದಲ್ಲಿ ರಾಜಮಹಾರಾಜರು ಶಿವಭಕ್ತರಾಗಿದ್ದರು. ಉತ್ತರ ಭಾರತದ ಕನಿಷ್ಕ, ಪುಷ್ಯಭೂತಿ, ಹರ್ಷ ಚಕ್ರವರ್ತಿಗಳು ಶಿವನ ಪರಮಾರಾಧಕರಾಗಿದ್ದರು.

ಇತಿಹಾಸ ಪೂರ್ವಕಾಲದಿಂದ ಶಿವನನ್ನು ಉಗ್ರ–ಸೌಮ್ಯ, ಭೀಕರ–ಸುಂದರ, ಕಠೋರ–ಕರುಣಾಮಯ ರೂಪಗಳಲ್ಲಿ ಭಾರತದ ಒಳಗೂ–ಹೊರಗೂ ಅಸಂಖ್ಯರು ಆರಾಧಿಸುತ್ತಾ ಬಂದಿದ್ದಾರೆ. ಉತ್ತರ ಕಾಶ್ಮೀರದಲ್ಲಿ ವಸುಗುಪ್ತ–ಕಲ್ಲಟರ–ಸ್ಪಂದ ಶಾಸ್ತ್ರ ಮತ್ತು ಸೋಮಾನಂದನ ಪ್ರತ್ಯಭಿಜ್ಞ ಶಾಸ್ತ್ರಗಳೂ, ದಕ್ಷಿಣ ಭಾರತದ ತಮಿಳುನಾಡಿನಲ್ಲಿ ಅಪ್ಪಾರ್, ತಿರುಜ್ಞಾನ ಸಂಬಂಧಿ, ಸೌಂದರನಂಬಿ, ಸಿರಿಯಾಳ ಶೆಟ್ಟಿ, ಮಾಣಿಕ್ಯ ವಾಚಕರ್, ನಂಬಿ ಯಾಂಡಾರ್ ಮೊದಲಾದ ಪುರಾತನರಿಂದ ರೂಪುಗೊಂಡ ಶೈವಸಿದ್ಧಾಂತ, ಶಿವಮತದ ವೃಕ್ಷದ ಶಾಖೆಗಳಾಗಿ ಒಡಮೂಡಿದವು. ಸಂಸ್ಕೃತದಲ್ಲಿ ಸದ್ಯೋಜ್ಯೋತಿ, ಭೋಜರಾಜ, ರಾಜಾನಕ ರಾಮಕಂಠ, ಶ್ರೀಕಂಠ ಸೂರಿ, ಸೋಮಶಂಭು, ಅಘೋರಶಿವ, ತ್ರಿಲೋಚನ ಶಿವಾಚಾರ್ಯ ಮೊದಲಾದ ಶೈವಾಚಾರ್ಯರು, ತಮಿಳಿನಲ್ಲಿ ಉಯ್ಯವದಂದೇವರ್, ಮೆಯ್ಯಕಂಡದೇವರ್, ಅರುಳ್‌ನಂದಿ, ಮನವಾಸಗಂ, ಕಡಂದದೇವರ್, ಉಮಾಪತಿ ಶಕ್ಕೀರರ್

ಮುಂತಾದ ಶಿವಜ್ಞಾನಸಿದ್ಧರೂ, ಅನೇಕ ಉದ್ಗ್ರಂಥಗಳನ್ನು ರಚಿಸಿ ಶಿವಮತದ ಪ್ರಚಾರಕ್ಕೆ ಕಾರಣರಾಗಿದ್ದಾರೆ. ಸಂಸ್ಕೃತದ ವ್ಯಾಕರಣಾಚಾರ್ಯ ಪಾಣಿನಿ ೧೪ ಸೂತ್ರಗಳ ಮೂಲಕ ಸಂಸ್ಕೃತದ ವ್ಯಾಕರಣವನ್ನು ರಚಿಸಿದ. ಈ ಸೂತ್ರಗಳು ಮಾಹೇಶ್ವರಸೂತ್ರಗಳೆಂದು ಪ್ರಸಿದ್ಧವಾಗಿವೆ. ಈ ಸೂತ್ರಗಳಿಗೆ ನಂದಿಕೇಶ್ವರ ಶಿವಾಚಾರ್ಯರು ಶೈವಸಿದ್ಧಾಂತದ ಪರವಾಗಿ ಭಾಷ್ಯ ಬರೆದಿದ್ದಾರೆ.

ಶೈವಧರ್ಮ ೭ ಮತ್ತು ೧೨ನೇ ಶತಮಾನದ ಮಧ್ಯಂತರದಲ್ಲಿ ಭಾರತದ ಉತ್ತರ–ದಕ್ಷಿಣ ಭಾಗಗಳಲ್ಲಿ ಪ್ರಚಾರವಾಗಿತ್ತು. ಲಕುಲೀಶ–ಪಾಶುಪತ, ರಸೇಶ್ವರ ಕಾಶ್ಮೀರಶೈವಗಳು ಉತ್ತರಭಾರತದ ಗುಜರಾತ್, ಮಧ್ಯಪ್ರದೇಶ, ಬಿಹಾರ್, ಬಂಗಾಲ್, ನೇಪಾಳ್ ಕಾಶ್ಮೀರಗಳಲ್ಲೂ ; ಕಾಳಾಮುಖ, ತಮಿಳುಶೈವ ಹಾಗೂ ವೀರಶೈವಗಳು ದಕ್ಷಿಣದಲ್ಲೂ ಪ್ರಚಾರ ಪಡೆದಿದ್ದವು. ಶೈವಮತದ ಪ್ರಾಚೀನತೆಯನ್ನು ಚರ್ಚಿಸುವ ಶ್ರೀ ವಿ. ಆರ್. ರಾಮಚಂದ್ರ ದೀಕ್ಷಿತ್ ಅವರು ಗೋರಖಪುರದಿಂದ ಪ್ರಕಟವಾಗುತ್ತಿರುವ ಕಲ್ಯಾಣ 'ಶಿವಾಂಕ'ದಲ್ಲಿ ಬರೆದ ಲೇಖನದಲ್ಲಿ ಶೈವಸಂಪ್ರದಾಯದ ಲಿಂಗ ಪೂಜೆ, ಲಿಂಗಧಾರಣಾದಿಗಳು ಆರ್ಯಸಂಸ್ಕೃತಿಗಿಂತ ಬಹುಪ್ರಾಚೀನವೆಂದು ತಿಳಿಸುತ್ತಾರೆ.[೧]

ಆಫ್ರಿಕಾ ಮೊದಲಾದ ದೇಶಗಳಲ್ಲಿರುವ ಶಿವನ ಮೂರ್ತಿಶಿಲ್ಪ–ಶಿವದೇವಾಲಯಗಳನ್ನು ಕುರಿತು ಫ್ರಾನ್ಸ್ ದೇಶದ ಲೂಯಿ ಬರೆದ ಗ್ರಂಥದ ಆಧಾರದಿಂದ ಕಾಶಿಯ ಬಾಬೂ ಬೇಚುಸಿಂಹರು ರಚಿಸಿರುವ ''ನಿರ್ಮಾಲ್ಯ ರತ್ನಾಕರ'' ಎಂಬ ಗ್ರಂಥದ ಪ್ರಸ್ತಾವನೆಯಲ್ಲಿ ಹೀಗೆ ಹೇಳುತ್ತಾರೆ : ''ಉತ್ತರ ಆಫ್ರಿಕಾ ಖಂಡದ ಈಜಿಪ್ತಿನಲ್ಲಿರುವ ಮೆಂಚಿಸ್‌ನಲ್ಲಿ ನಂದಿವಾಹನ ತ್ರಿಶೂಲ, ಸರ್ಪ, ವ್ಯಾಘ್ರ ಚರ್ಮಾಂಬರಧಾರಿ ಶಿವನ ವಿಗ್ರಹವಿದೆ. ಅಲ್ಲಿ ಈ ವಿಗ್ರಹಕ್ಕೆ ಆಸಿರಿಸ್ ಎಂಬ ಹೆಸರಿದೆ. ಟರ್ಕಿದೇಶದ ಬ್ಯಾಬಿಲೋನ್‌ನಲ್ಲಿ ೧೨೦೦ ಘನಹಸ್ತ ಎತ್ತರದ ಶಿವಲಿಂಗವಿದೆ. ಮುಸಲ್ಮಾನರ ಪುಣ್ಯಕ್ಷೇತ್ರ ಮಕ್ಕಾದಲ್ಲಿ ಮಕ್ಕೇಶ್ವರಲಿಂಗ ಪ್ರಸಿದ್ಧವಾಗಿದೆ. ಅಮೇರಿಕಾದ ಬ್ರೆಜಿಲ್‌ನಲ್ಲಿ ಶಿವಲಿಂಗ

೧. ಕರ್ನಾಟಕ ಶಿವಾಂಕ, ಪುಟ–೧೬೮

ಮತ್ತು ವಿಘ್ನೇಶ್ವರ ಮೂರ್ತಿಗಳಿವೆ. ಗ್ರೀಸ್ ದೇಶಕ್ಕೆ ಸೇರಿದ ಕಾರಿಂಥ್‌ನಲ್ಲಿ ಪಾರ್ವತಿವಿಗ್ರಹ, ಸ್ಕಾಟ್‌ಲೆಂಡ್‌ನ ಗ್ಲಾಸ್ಗೋ ಪಟ್ಟಣಗಳಲ್ಲಿ ಶಿವಲಿಂಗ, ಕಾಬೂಲ್, ಬಲಖ್, ಬುಖಾರ ಮುಂತಾದ ಕಡೆಗಳಲ್ಲಿ ಶಿವಲಿಂಗಗಳು ನೋಡಲು ಸಿಕ್ಕುತ್ತವೆ ಎನ್ನುವ ವಿಷಯ ತಿಳಿಸುತ್ತಾರೆ. ಈ ಎಲ್ಲ ಕಾರಣಗಳಿಂದ ಶೈವಧರ್ಮ ಜಗತ್ತಿನಾದ್ಯಂತ ಹರಡಿತ್ತು ಎಂಬುದು ಗಮನಿಸಬೇಕಾದ ಅಂಶ.[೨]

ಹೀಗೆ ಶೈವಧರ್ಮದ ಪ್ರಭಾವ ಸಿಂಧೂಕಣಿವೆಯಿಂದ ಬಂಗಾಳದ ವರೆಗೂ, ಪೂರ್ಣ ಭಾರತದ ಮೇಲೂ, ಸಾಗರದಾಚೆಗೆ ಮಧ್ಯಏಷಿಯಾ ಜಗತ್ತಿನಾದ್ಯಂತ ಹರಡಿರುವುದು ಕಂಡುಬರುತ್ತದೆ. ಈ ಸತ್ವಪೂರ್ಣ ಪ್ರಾಚೀನ ಮತದ ಉಗಮ ವಿಕಾಸಕ್ಕೆ ವಿಸ್ತಾರವಾದ ಚರಿತ್ರೆ ಇದೆ.

'ಶಿವ' ಎಂಬ ಹೆಸರು ಋಗ್ವೇದದಲ್ಲಿ ಕಂಡುಬರುವುದಿಲ್ಲ. ಅಲ್ಲಿ ರುದ್ರ ಉಗ್ರದೇವತಾ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಯಜುರ್ವೇದದ ರುದ್ರಾಧ್ಯಾಯದಲ್ಲಿ ರುದ್ರ, ಸೋಮ, ಶಿವ ಎನ್ನುವ ಪರ್ಯಾಯ ನಾಮಗಳಿಂದ ಉಲ್ಲೇಖಗೊಂಡಿದ್ದಾನೆ. ರುದ್ರನ ಸೌಮ್ಯರೂಪವೇ ಶಿವ, ರುದ್ರ–ಶಿವರ ಕಲ್ಪನೆಗಳಿಗೆ ಹೊಸರೂಪವನ್ನು ನೀಡುತ್ತದೆ ಶತರುದ್ರೀಯ, ಋಗ್ವೇದದಲ್ಲಿ ರುದ್ರನು ಯಜುರ್ವೇದ ಕಾಲಕ್ಕೆ ಶಿವನಾಗಿ ಮುಂದೆ ಶ್ವೇತಾಶ್ವತರ ಉಪನಿಷತ್ತಿನಲ್ಲಿ ಪರತತ್ತ್ವರೂಪ ಹೊಂದಿ, ಮಹಾಭಾರತದಲ್ಲಿ ಪಶುಪತಿ, ಮಹೇಶ್ವರ, ಪರಮೇಶ್ವರ, ಶಿವ–ಶಂಕರನೆಂಬ ಪರ್ಯಾಯ ಪದಗಳಿಂದ ಆರಾಧಿಸಲ್ಪಡುತ್ತಾನೆ.

ಭಾರತೀಯ ಸಾಹಿತ್ಯದಲ್ಲಿ ವೇದಗಳಿಗೆ ಹೊಯ್‌ಕೈಯ್ಯಾಗಿ ನಿಲ್ಲುವ ಆಗಮ ಸಾಹಿತ್ಯದಲ್ಲಿ ಶಿವೋಪಾಸನೆ, ಶಿವತತ್ತ್ವ, ಮುಖ್ಯ ವಿಷಯವಾಗಿದೆ. ಬಹುಪಾಲು ಆಗಮಗಳು ಉಮಾ–ಮಹೇಶ್ವರರ ಸಂವಾದರೂಪದಲ್ಲಿ ರಚನೆಯಾಗಿದೆ. ಶೈವಧರ್ಮದ ಪ್ರತಿಪಾದಕ ಶಿವನೇ ಎಂದು ಆಗಮಗಳು ಘೋಷಿಸುತ್ತವೆ. ''ಕೃತಯುಗದಲ್ಲಿ 'ಕೇದಾರ'ವೆಂಬ ಮೂಲಸ್ಥಾನ, ತ್ರೇತಾ ಯುಗದಲ್ಲಿ 'ವಾರಣಾಸಿ' ಎಂಬ ಮೂಲಸ್ಥಾನ, ದ್ವಾಪರದಲ್ಲಿ 'ವಿರುಪಾಕ್ಷ'

---

೨. ಉದ್ಧೃತ : ವೀರಶೈವಾಗಮ ಪ್ರಯೋಗರತ್ನಾಕರ, ಪುಟ–೧೬

ನೆಂಬ ಮೂಲಸ್ಥಾನ, ಕಲಿಯುಗದಲ್ಲಿ 'ಪರ್ವತ'ವೆಂಬ ಮೂಲಸ್ಥಾನ ನಾನಾ ಸ್ಥಾನಂಗಳ ಮೆಟ್ಟಿದೆ, ಜಂಗಮವೆ ಲಿಂಗವೆಂದು ನಂಬಿದೆ ಕೂಡಲಸಂಗಮ ದೇವಾ'' ಎನ್ನುವ ಈ ವಚನ ಯುಗಯುಗಗಳಲ್ಲೂ ಶೈವಧರ್ಮ ಪ್ರಚಲಿತ ವಿತ್ತೆಂದು ಸೂಚಿಸುತ್ತದೆ.

ಶೈವರಲ್ಲಿ ಉಗ್ರ ಆಚರಣೆಗಳಿದ್ದವೆಂದು ಮೆಗಾಸ್ತನೀಸನು ತಿಳಿಸಿದರೆ, ೫ನೇ ಶತಮಾನದ ಆದಿಭಾಗದಲ್ಲಿ ಜಾವಾದ್ವೀಪದಲ್ಲಿ ಪಾಶುಪತರು ನೆಲ ಸಿದ್ದನ್ನು ಚೀನಿಯಾತ್ರಿಕ ಪಾಹಿಯಾನ್ ತಿಳಿಸುತ್ತಾನೆ.[೩]

ಭಾರತದಲ್ಲಿ ಪ್ರಾಚೀನತಮವಾದ ಈ ಶೈವಧರ್ಮದ ಉಗಮ– ಬೆಳವಣಿಗೆ ಅವಸಾನವನ್ನು ತಿಳಿಸುವ ಪದ್ಮಪುರಾಣದ ಒಂದು ಶ್ಲೋಕ ಪ್ರಸಿದ್ಧವಾಗಿದೆ–

ಉತ್ಪನ್ನಾ ದ್ರಾವಿಡೇ ಚಾಹಂ ವೃದ್ಧಿಂ ಕರ್ನಾಟಕೇ ಗತಾ ।
ಕ್ವಚಿತ್ ಕ್ವಚಿತ್ ಮಹಾರಾಷ್ಟ್ರೇ ಗುರ್ಜರೇ ಜೀರ್ಣತಾಂ ಗತಾ ॥[೪]

''ದಕ್ಷಿಣ ಭಾರತದ ತಮಿಳುನಾಡಿನಲ್ಲಿ ಹುಟ್ಟಿ, ಕರ್ನಾಟಕದಲ್ಲಿ ಅಭಿವೃದ್ಧಿ ಹೊಂದಿ, ಅಲ್ಪ–ಸ್ವಲ್ಪ ಮಹಾರಾಷ್ಟ್ರದಲ್ಲುಳಿದ, ಗುಜರಾತದಲ್ಲಿ ಅವಸಾನ ಹೊಂದಿತು'' ಎಂದು ಶೈವಧರ್ಮದ ಇತಿಹಾಸವನ್ನೇ ಸ್ಥೂಲವಾಗಿ ಸೂಚಿಸುತ್ತದೆ.

ಈ ಶೈವಧರ್ಮದಲ್ಲಿ ಅನೇಕ ಪ್ರಭೇದಗಳು ಸಮಾವೇಶಗೊಂಡಿವೆ. ಅವು ಆಚರಣೆ–ಸಂಪ್ರದಾಯಗಳಿಂದ ಬಂದಿವೆ. ಈ ಪ್ರಭೇದಗಳು ಕಾಲಗತಿಯಲ್ಲಿ ಸಾಗಿಬಂದಿವೆ. ಕಾಲಕಾಲಕ್ಕೆ ಶೈವಧರ್ಮಕ್ಕೆ ಬಂದ ಜನಾಂಗಗಳ ಆಚರಣೆಯ ಪದ್ಧತಿಯನ್ನು ತಿಳಿಸುತ್ತದೆ. ಇವುಗಳ ಅಧ್ಯಯನ ಶೈವಧರ್ಮದ ವಿಕಾಸದ ಅಧ್ಯಯನವೂ ಹೌದು. ಈ ಆಚರಣೆಯ ಪದ್ಧತಿಗಳನ್ನು ಗಮನಿಸಿದಾಗ ಇತಿಹಾಸ, ಸಮಾಜಶಾಸ್ತ್ರ, ಮನಶ್ಶಾಸ್ತ್ರ, ಆರಾಧನಾಶಾಸ್ತ್ರ (Rituals) ಸಂಸ್ಕೃತಿಗಳನ್ನು ಗುರುತಿಸಬಹುದಾಗಿದೆ. ಯಾವುದೇ ಒಂದು ಧರ್ಮ ಸಂಕೀರ್ಣವ್ಯವಸ್ಥೆ ಅದರಲ್ಲಿ ನಂಬಿಕೆ,

೩. ಉದ್ಧೃತ : ಯುಗಯಾತ್ರೀ ಭಾರತೀಯ ಸಂಸ್ಕೃತಿ, ಸಂಪುಟ–೪, ಪುಟ–೫೩–೫೫.
೪. ಪದ್ಮಪುರಾಣ, ೧–೪೮.

ನಡವಳಿಕೆ, ಆಚರಣೆಗಳ ಸಂಹಿತೆ ಇರುತ್ತದೆ. ಭಾರತದಲ್ಲಿ ಧರ್ಮಗಳು ಬೆಳೆದುಬಂದ ಮುಖ ಅನಂತ, ತತ್ತ್ವಜ್ಞಾನದ ಅನಂತ ಸ್ರೋತಸ್ಸುಗಳು ಹರಿದುಬಂದಿವೆ. ಇವು ಮಾನವ ಬುದ್ಧಿಯ ಪ್ರತಿರೂಪಗಳು.

ಶೈವ ಮಹಾಮತದ ಪ್ರಭೇದಗಳನ್ನು (Cults)=(Systems of Religious Worship) ಶಿವಾಗಮಗಳಲ್ಲಿ, ಪುರಾಣಗಳಲ್ಲಿ, ಶಾಸನಗಳಲ್ಲಿ, ಸಿದ್ಧಾಂತಗ್ರಂಥಗಳಲ್ಲಿ, ಭಾಷ್ಯಗಳಲ್ಲಿ ಹಾಗೂ ಕನ್ನಡದ ವಚನಸಾಹಿತ್ಯದಲ್ಲಿ ಗುರುತಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಶೈವಮತದಲ್ಲಿ ತಾತ್ವಿಕ ದೃಷ್ಟಿಯಿಂದ ಎಂಟು ಪ್ರಭೇದಗಳನ್ನು ವಿದ್ವಾಂಸರು ಗುರುತಿಸಿದ್ದಾರೆ.

ಶೈವತತ್ತ್ವ ಪ್ರಭೇದಗಳು :

(೧) ದ್ವೈತ ಪಾಶುಪತ, ೨) ದ್ವೈತಶೈವ ಸಿದ್ಧಾಂತ, ೩) ದ್ವೈತಾದ್ವೈತ ಲಕುಲೀಶ ಪಾಶುಪತ, ೪) ವಿಶಿಷ್ಟಾದ್ವೈತಶೈವ, ೫) ವಿಶೇಷಾದ್ವೈತ, ೬) ನಂದಿಕೇಶ್ವರಶೈವ, ೭) ರಸೇಶ್ವರಶೈವ, ೮) ಕಾಶ್ಮೀರಶೈವ.

ಈ ಎಲ್ಲ ತಾತ್ವಿಕ ಪ್ರಭೇದಗಳಿಗೂ ೨೮ ಶೈವಾಗಮಗಳೇ ಆಧಾರ. ಎಲ್ಲ ಪ್ರಭೇದಗಳು ದ್ವೈತ–ಅದ್ವೈತ ಭಾವನೆ ಉಳ್ಳವುಗಳಾಗಿವೆ. ಶೈವಸಂಪ್ರದಾಯದಲ್ಲಿ ಕಾಶ್ಮಿರದ ಪ್ರತ್ಯಭಿಜ್ಞಾದರ್ಶನ, ವೀರಶೈವರ ವಿಶೇಷಾದ್ವೈತ, ತಮಿಳು ನಾಡಿನ ಶೈವಸಿದ್ಧಾಂತ ಇಂದಿಗೂ ಪ್ರಚಾರದಲ್ಲಿವೆ. ಉಳಿದ ಶೈವ ಪ್ರಭೇದಗಳು ಎಲ್ಲೂ ಕಂಡುಬರುವುದಿಲ್ಲ. ಶಿವಾಗಮದಲ್ಲಿ ಮುಖ್ಯವಾಗಿ ಉಲ್ಲೇಖವಾಗುವ ಪ್ರಭೇದಗಳಲ್ಲಿ (Divisions) ಶೈವ–ಪಾಶುಪತ–ಕಾಪಾಲ–ಕಾಳಾಮುಖ ಸಂಪ್ರದಾಯಗಳು (Traditions) ಕೆಲವು ಕಡೆ ಕಂಡರೆ, ಮತ್ತೆ ಕೆಲವು ಕಡೆ ಶೈವ–ಪಾಶುಪತ ಸೋಮ–ಲಾಕುಳ ಸಂಪ್ರದಾಯಗಳನ್ನು ಕಾಣುತ್ತೇವೆ. ಸುಪ್ರಭೇದಾಗಮ, ಸಿದ್ಧಾಂತ ಶಿಖಾಮಣಿಗಳಲ್ಲಿ, ವಾಮ–ದಕ್ಷಿಣ–ಮಿಶ್ರ–ಸಿದ್ಧಾಂತವೆಂಬ ನಾಲ್ಕು ವಿಧ ಶೈವದ ಶಾಖೆಗಳನ್ನು ಗುರುತಿಸಲಾಗಿದೆ. ವಾಮವು ಶಕ್ತಿಪ್ರಧಾನ, ದಕ್ಷಿಣ ಭೈರವಾತ್ಮಕ, ಮಿಶ್ರಸಪ್ತಮಾತೃಪರ, ಸಿದ್ಧಾಂತ ವೇದಸಮ್ಮತವೆಂದು ಸಿದ್ಧಾಂತ ಶಿಖಾಮಣಿ ಈ ಶಾಖೆಗಳ ಲಕ್ಷಣಗಳನ್ನು ಸೂಚಿಸುತ್ತದೆ. ಮಾಧವಾಚಾರ್ಯನ

ನೆಂಬ ಮೂಲಸ್ಥಾನ, ಕಲಿಯುಗದಲ್ಲಿ 'ಪರ್ವತ'ವೆಂಬ ಮೂಲಸ್ಥಾನ ನಾನಾ ಸ್ಥಾನಂಗಳ ಮೆಟ್ಟಿದೆ, ಜಂಗಮವೆ ಲಿಂಗವೆಂದು ನಂಬಿದೆ ಕೂಡಲಸಂಗಮ ದೇವಾ'' ಎನ್ನುವ ಈ ವಚನ ಯುಗಯುಗಗಳಲ್ಲೂ ಶೈವಧರ್ಮ ಪ್ರಚಲಿತ ವಿತ್ತೆಂದು ಸೂಚಿಸುತ್ತದೆ.

ಶೈವರಲ್ಲಿ ಉಗ್ರ ಆಚರಣೆಗಳಿದ್ದವೆಂದು ಮೆಗಾಸ್ತನೀಸನು ತಿಳಿಸಿದರೆ, ೫ನೇ ಶತಮಾನದ ಆದಿಭಾಗದಲ್ಲಿ ಜಾವಾದ್ವೀಪದಲ್ಲಿ ಪಾಶುಪತರು ನೆಲ ಸಿದ್ದನ್ನು ಚೀನಿಯಾತ್ರಿಕ ಪಾಹಿಯಾನ್ ತಿಳಿಸುತ್ತಾನೆ.[೩]

ಭಾರತದಲ್ಲಿ ಪ್ರಾಚೀನತಮವಾದ ಈ ಶೈವಧರ್ಮದ ಉಗಮ– ಬೆಳವಣಿಗೆ ಅವಸಾನವನ್ನು ತಿಳಿಸುವ ಪದ್ಮಪುರಾಣದ ಒಂದು ಶ್ಲೋಕ ಪ್ರಸಿದ್ಧವಾಗಿದೆ–

ಉತ್ಪನ್ನಾ ದ್ರಾವಿಡೇ ಚಾಹಂ ವೃದ್ಧಿಂ ಕರ್ನಾಟಕೇ ಗತಾ ।
ಕ್ವಚಿತ್ ಕ್ವಚಿತ್ ಮಹಾರಾಷ್ಟ್ರೇ ಗುರ್ಜರೇ ಜೀರ್ಣತಾಂ ಗತಾ ॥[೪]

''ದಕ್ಷಿಣ ಭಾರತದ ತಮಿಳುನಾಡಿನಲ್ಲಿ ಹುಟ್ಟಿ, ಕರ್ನಾಟಕದಲ್ಲಿ ಅಭಿವೃದ್ಧಿ ಹೊಂದಿ, ಅಲ್ಪ–ಸ್ವಲ್ಪ ಮಹಾರಾಷ್ಟ್ರದಲ್ಲುಳಿದ, ಗುಜರಾತದಲ್ಲಿ ಅವಸಾನ ಹೊಂದಿತು'' ಎಂದು ಶೈವಧರ್ಮದ ಇತಿಹಾಸವನ್ನೇ ಸ್ಥೂಲವಾಗಿ ಸೂಚಿಸುತ್ತದೆ.

ಈ ಶೈವಧರ್ಮದಲ್ಲಿ ಅನೇಕ ಪ್ರಭೇದಗಳು ಸಮಾವೇಶಗೊಂಡಿವೆ. ಅವು ಆಚರಣೆ–ಸಂಪ್ರದಾಯಗಳಿಂದ ಬಂದಿವೆ. ಈ ಪ್ರಭೇದಗಳು ಕಾಲಗತಿಯಲ್ಲಿ ಸಾಗಿಬಂದಿವೆ. ಕಾಲಕಾಲಕ್ಕೆ ಶೈವಧರ್ಮಕ್ಕೆ ಬಂದ ಜನಾಂಗಗಳ ಆಚರಣೆಯ ಪದ್ಧತಿಯನ್ನು ತಿಳಿಸುತ್ತದೆ. ಇವುಗಳ ಅಧ್ಯಯನ ಶೈವಧರ್ಮದ ವಿಕಾಸದ ಅಧ್ಯಯನವೂ ಹೌದು. ಈ ಆಚರಣೆಯ ಪದ್ಧತಿಗಳನ್ನು ಗಮನಿಸಿದಾಗ ಇತಿಹಾಸ, ಸಮಾಜಶಾಸ್ತ್ರ, ಮನಶ್ಶಾಸ್ತ್ರ, ಆರಾಧನಾಶಾಸ್ತ್ರ (Rituals) ಸಂಸ್ಕೃತಿಗಳನ್ನು ಗುರುತಿಸಬಹುದಾಗಿದೆ. ಯಾವುದೇ ಒಂದು ಧರ್ಮ ಸಂಕೀರ್ಣವ್ಯವಸ್ಥೆ, ಅದರಲ್ಲಿ ನಂಬಿಕೆ,

---

೩. ಉದ್ಧೃತ : ಯುಗಯಾತ್ರೀ ಭಾರತೀಯ ಸಂಸ್ಕೃತಿ, ಸಂಪುಟ–೪, ಪುಟ–೫೩–೫೫.
೪. ಪದ್ಮಪುರಾಣ, ೧–೪೮.

ನಡವಳಿಕೆ, ಆಚರಣೆಗಳ ಸಂಹಿತೆ ಇರುತ್ತದೆ. ಭಾರತದಲ್ಲಿ ಧರ್ಮಗಳು ಬೆಳೆದುಬಂದ ಮುಖ ಅನಂತ, ತತ್ತ್ವಜ್ಞಾನದ ಅನಂತ ಸ್ರೋತಸ್ಸುಗಳು ಹರಿದುಬಂದಿವೆ. ಇವು ಮಾನವ ಬುದ್ಧಿಯ ಪ್ರತಿರೂಪಗಳು.

ಶೈವ ಮಹಾಮತದ ಪ್ರಭೇದಗಳನ್ನು (Cults)=(Systems of Religious Worship) ಶಿವಾಗಮಗಳಲ್ಲಿ, ಪುರಾಣಗಳಲ್ಲಿ, ಶಾಸನಗಳಲ್ಲಿ, ಸಿದ್ಧಾಂತಗ್ರಂಥಗಳಲ್ಲಿ, ಭಾಷ್ಯಗಳಲ್ಲಿ ಹಾಗೂ ಕನ್ನಡದ ವಚನಸಾಹಿತ್ಯದಲ್ಲಿ ಗುರುತಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಶೈವಮತದಲ್ಲಿ ತಾತ್ತ್ವಿಕ ದೃಷ್ಟಿಯಿಂದ ಎಂಟು ಪ್ರಭೇದಗಳನ್ನು ವಿದ್ವಾಂಸರು ಗುರುತಿಸಿದ್ದಾರೆ.

ಶೈವತತ್ತ್ವ ಪ್ರಭೇದಗಳು :

(೧) ದ್ವೈತ ಪಾಶುಪತ, ೨) ದ್ವೈತಶೈವ ಸಿದ್ಧಾಂತ, ೩) ದ್ವೈತಾದ್ವೈತ ಲಕುಲೀಶ ಪಾಶುಪತ, ೪) ವಿಶಿಷ್ಟಾದ್ವೈತಶೈವ, ೫) ವಿಶೇಷಾದ್ವೈತ, ೬) ನಂದಿಕೇಶ್ವರಶೈವ, ೭) ರಸೇಶ್ವರಶೈವ, ೮) ಕಾಶ್ಮೀರಶೈವ.

ಈ ಎಲ್ಲ ತಾತ್ತ್ವಿಕ ಪ್ರಭೇದಗಳಿಗೂ ೨೮ ಶೈವಾಗಮಗಳೇ ಆಧಾರ. ಎಲ್ಲ ಪ್ರಭೇದಗಳು ದ್ವೈತ–ಅದ್ವೈತ ಭಾವನೆ ಉಳ್ಳವುಗಳಾಗಿವೆ. ಶೈವಸಂಪ್ರದಾಯದಲ್ಲಿ ಕಾಶ್ಮಿರದ ಪ್ರತ್ಯಭಿಜ್ಞಾದರ್ಶನ, ವೀರಶೈವರ ವಿಶೇಷಾದ್ವೈತ, ತಮಿಳು ನಾಡಿನ ಶೈವಸಿದ್ಧಾಂತ ಇಂದಿಗೂ ಪ್ರಚಾರದಲ್ಲಿವೆ. ಉಳಿದ ಶೈವ ಪ್ರಭೇದಗಳು ಎಲ್ಲೂ ಕಂಡುಬರುವುದಿಲ್ಲ. ಶಿವಾಗಮದಲ್ಲಿ ಮುಖ್ಯವಾಗಿ ಉಲ್ಲೇಖವಾಗುವ ಪ್ರಭೇದಗಳಲ್ಲಿ (Divisions) ಶೈವ–ಪಾಶುಪತ–ಕಾಪಾಲ–ಕಾಳಾಮುಖ ಸಂಪ್ರದಾಯಗಳು (Traditions) ಕೆಲವು ಕಡೆ ಕಂಡರೆ, ಮತ್ತೆ ಕೆಲವು ಕಡೆ ಶೈವ–ಪಾಶುಪತ ಸೋಮ–ಲಾಕುಳ ಸಂಪ್ರದಾಯಗಳನ್ನು ಕಾಣುತ್ತೇವೆ. ಸುಪ್ರಭೇದಾಗಮ, ಸಿದ್ಧಾಂತ ಶಿಖಾಮಣಿಗಳಲ್ಲಿ, ವಾಮ–ದಕ್ಷಿಣ–ಮಿಶ್ರ–ಸಿದ್ಧಾಂತವೆಂಬ ನಾಲ್ಕು ವಿಧ ಶೈವದ ಶಾಖೆಗಳನ್ನು ಗುರುತಿಸಲಾಗಿದೆ. ವಾಮವು ಶಕ್ತಿಪ್ರಧಾನ, ದಕ್ಷಿಣ ಭೈರವಾತ್ಮಕ, ಮಿಶ್ರಸಪ್ತಮಾತೃಪರ, ಸಿದ್ಧಾಂತ ವೇದಸಮ್ಮತವೆಂದು ಸಿದ್ಧಾಂತ ಶಿಖಾಮಣಿ ಈ ಶಾಖೆಗಳ ಲಕ್ಷಣಗಳನ್ನು ಸೂಚಿಸುತ್ತದೆ. ಮಾಧವಾಚಾರ್ಯನ

ಸರ್ವದರ್ಶನ ಸಂಗ್ರಹದಲ್ಲಿ ಲಕುಲೀಶ ಪಾಶುಪತ, ಶೈವ–ಪ್ರತ್ಯಭಿಜ್ಞಾನ, ರಸೇಶ್ವರ ಎಂದು ಶೈವಪ್ರಭೇದ ಗಳನ್ನು ತಿಳಿಸುತ್ತಾನೆ. ಸಿದ್ಧಾಂತ ಶಿಖಾಮಣಿ ಯಲ್ಲೂ–

ಆಗಮಾ ಬಹುಧಾ ಪ್ರೋಕ್ತಾಃ ಶಿವೇನ ಪರಮಾತ್ಮನಾ ।
ಶೈವಂ ಪಾಶುಪತಂ ಸೋಮಂ ವಾಕುಲಂ ಚೇತಿ ಭೇದತಃ ॥[೫]

ಎಂದು ನಾಲ್ಕು ಪ್ರಭೇದಗಳನ್ನು ತಿಳಿಸುತ್ತದೆ. ಬ್ರಹ್ಮಸೂತ್ರಗಳಿಗೆ ಶಾಂಕರ ಭಾಷ್ಯದ ಮೇಲೆ 'ಭಾಮತಿ' ನಾಮಕ ಟೀಕೆಯನ್ನು ಬರೆದ ವಾಚಸ್ಪತಿಮಿಶ್ರರು ಭಾಮತೀ ಗ್ರಂಥದ ೨ನೇ ಅಧ್ಯಾಯ, ೨ನೇ ಪಾದದ ೩೭ನೇ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಶೈವ–ಪಾಶುಪತ–ಕಾರುಣಿಕ–ಸಿದ್ಧಾಂತಿ–ಕಾಪಾಲಿಕ ಮತಗಳೆಂದು ಶೈವಪ್ರಭೇದಗಳನ್ನು ತಿಳಿಸುತ್ತಾರೆ. ''ಶೈವಂ ಸಪ್ತವಿಧಂ ಜ್ಞೇಯಂ'' ಎಂದು ತಿಳಿಸಿ, ಮುಖ್ಯವಾಗಿ ಶೈವದಲ್ಲಿ ಶೈವಂ ಚ ವೀರಶೈವಂ ಚ ದ್ವಿವಿಧಂ ಶೈವಮೀರಿತಂ'' ಎಂದು ವೀರಶೈವಪ್ರಕಾಶಿಕೆ[೬] ತಿಳಿಸುತ್ತದೆ.

ಈ ಎಲ್ಲ ವಿವರಣೆಗಳಿಂದ ಈ ಶೈವಸಂಪ್ರದಾಯಗಳು ನಾಲ್ಕರಿಂದ ಏಳರವರೆಗೆ ಅವುಗಳ ವ್ಯಾಪ್ತಿ ಹೆಚ್ಚಾಗಿ ಕಂಡುಬರುತ್ತದೆ. ಕೆಲವು ಕಡೆ ನಾಮಾಂತರಗಳಿಂದ ಬೇರೆ ಬೇರೆ ಹೆಸರುಗಳ ಉಲ್ಲೇಖ ಕಂಡುಬರುತ್ತದೆ. ಶೈವಶಾಖೆಗಳಲ್ಲಿ ಹೆಚ್ಚಾಗಿ ಪ್ರತಿಪಾದಿತವಾಗಿರುವ ಪಾಶುಪತ–ಕಾಪಾಲಿಕ–ಕಾಳಾಮುಖ–ಮತ್ತು ಶೈವ ಈ ನಾಲ್ಕು ಮುಖ್ಯವೆಂದು ತೋರುತ್ತದೆ; ಇವುಗಳ ಕಾಲ ಕ್ರಿ.ಪೂ. ೨ನೇ ಶತಮಾನ. ಪಾಶುಪತ ಅಥವಾ ಮಾಹೇಶ್ವರ ಎಂಬ ವಿಭಾಗವು ಕಾಪಾಲಿಕ–ಕಾಳಾಮುಖ ಶೈವಶಾಖೆಗಳನ್ನೊಳಗೊಂಡ ವ್ಯಾಪಕ ವಾದ ಅರ್ಥದಲ್ಲಿ ಬಳಕೆಯಾದಂತೆ ಕಂಡುಬರುತ್ತದೆ. ಶಂಕರಾಚಾರ್ಯರು ಪಶುಪತಿ ಮತದವರನ್ನು ಮಾಹೇಶ್ವರರೆಂದು ಕರೆದಿದ್ದಾರೆ.

ಹೀಗೆ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಶೈವಧರ್ಮದ ಸಂಪ್ರದಾಯಗಳನ್ನು ಹೆಸರಿಸಿದ್ದಾರೆ. ಕಾಪಾಲಿಕ–ಕಾಳಾಮುಖ–ಪಾಶುಪತ–ಶೈವ ಎಂದು ರಾಮಾನುಜಾಚಾರ್ಯರು ಗುರುತಿಸುತ್ತಾರೆ. ಮಧ್ವಾ ಚಾರ್ಯರು ಪಾಶುಪತ ಎಂಬ ಶೈವಭಾಗವನ್ನು ಎಲ್ಲಾ ಶೈವಶಾಖೆಗಳಿಗೂ

---

೫. ಶ್ರೀ ಸಿದ್ಧಾಂತ ಶಿಖಾಮಣಿ, ೫–೯.
೬. ವೀರಶೈವ ಪ್ರಕಾಶಿಕೆ, ೮–೨.

ಅನ್ವಯವಾಗುವಂತೆ ತಿಳಿಸಿದ್ದಾರೆ. ಸುಪ್ರಭೇದಾಗಮದಲ್ಲಿ ಶೈವ–ಪಾಶುಪತ–ಸೋಮ–ಲಾಕುಳ ಎಂಬ ವಿಭಾಗಗಳ ಹೆಸರು ಬರುತ್ತವೆ. ಕಾಪಾಲಿಕ ಎನ್ನುವ ಹೆಸರಿಗೆ ಬದಲಾಗಿ 'ಸೋಮ' ಎಂದು ಈ ಆಗಮವು ಕರೆದಿದೆ. ಇವರಿಗೆ ಮಹಾವ್ರತಧಾರಿಗಳೆನ್ನುವ ಹೆಸರೂ ಉಂಟು. ಹಾಗೆಯೇ ಕಾಳಾಮುಖ ಎಂಬ ಹೆಸರು ಕಾಲದಮನ, ಕಾರುಣಿಕ, ಲಾಕುಳ ಎಂದು ಬೇರೆ ಬೇರೆ ಹೆಸರು ಪಡೆದಿರುವುದನ್ನು ಕಾಣುತ್ತೇವೆ.[೭] ಆದರೆ ಪಾಶುಪತ ಎಂಬ ಹೆಸರು ಎಲ್ಲ ಆಗಮಗಳಲ್ಲಿ ಹಾಗೆಯೇ ಉಳಿದುಕೊಂಡು ಬಂದಿದೆ. ಮಹಾಭಾರತದ ಶಾಂತಿಪರ್ವದಲ್ಲಿ ''ಸಾಂಖ್ಯಂ ಯೋಗಂ ಪಾಂಚರಾತ್ರಂ ವೇದಾಃ ಪಾಶುಪತ ಸ್ತಥಾ'' ಎನ್ನುವ ಮಾತನ್ನು ನೆನೆದರೆ, ಪಾಶುಪತ ಶೈವಶಾಖೆಗಳಲ್ಲಿ ಪ್ರಾಚೀನ ವೆಂದು ತಿಳಿದುಬರುತ್ತದೆ.

ಶೈವಧರ್ಮದ ಇತಿಹಾಸದಲ್ಲಿ ಶಿವಾಗಮಗಳು ಆಧಾರ ಗ್ರಂಥಗಳಾಗಿ ನಿಲ್ಲುತ್ತವೆ. ಆಗಮಗಳ ಮೂಲತತ್ತ್ವಗಳನ್ನು ಆಧರಿಸಿ ಅನೇಕ ಶೈವಶಾಖೆಗಳು ರೂಪುಗೊಂಡಿವೆ. ದೇಶ–ಕಾಲ–ನಂಬಿಕೆ, ವಿಚಾರ–ಆಚಾರ ಸಂಪ್ರದಾಯ ಆಚರಣೆಗಳಿಗೆ ಅನುಗುಣವಾಗಿ ಭಿನ್ನವೆಂದು ತೋರಿದರೂ ಇವೆಲ್ಲ ಶೈವ ಮಹಾವೃಕ್ಷದ ರೆಂಬೆಕೊಂಬೆಗಳೆಂಬುದು ಗಮನಿಸಬೇಕಾದ ಅಂಶ. ಈ ಎಲ್ಲ ಶಾಖೆಗಳ ಸಂಕೀರ್ಣ ಮಹಾಸೌಧವೇ ಶೈವಧರ್ಮ. ಇಲ್ಲಿ ಕೆಲವು ಪ್ರಮುಖ ಶೈವಶಾಖೆಗಳ ಸ್ಥೂಲ ಪರಿಚಯವನ್ನು ಮಾಡಿಕೊಡುವುದು ಸೂಕ್ತವೆನಿಸುತ್ತದೆ.

**ಪಾಶುಪತ :**

ಇದು ಶೈವಧರ್ಮದ ಪ್ರಾಚೀನ ಶಾಖೆ. ಪಶುಪತಿ ಈ ತತ್ತ್ವವನ್ನು ಹೇಳಿದನೆಂದು ಹೇಳುತ್ತಾರೆ. ಇದಕ್ಕೆ ನಕುಲೀಶ ಅಥವಾ ಲಕುಲೀಶ ಮತವೆಂದೂ ಕರೆಯುವ ವಾಡಿಕೆ ಇದೆ. ಪಶು–ಪತಿ–ಪಾಶದ ವಿಚಾರ ಇಲ್ಲಿ ಆರಂಭವಾಗಿ ಮುಂದೆ ಬೇರೆಬೇರೆ ಶಾಖೆಗಳಿಗೆ ಹಬ್ಬಿತು ಎಂದು ಹೇಳುತ್ತಾರೆ. ಸರ್ವದರ್ಶನ ಸಂಗ್ರಹದಲ್ಲಿ ಈ ಮತದ ಆಚರಣೆಯ ವಿಧಾನ ಹೀಗಿದೆ : ಈ ಮಾರ್ಗವನ್ನು ಅನುಸರಿಸುವವರು ಸನ್ಯಾಸಿಗಳು, ಯೋಗಮಾರ್ಗಾವ ಲಂಬಿಗಳು, ತ್ರಿಕಾಲಸ್ನಾನ, ಬೂದಿಯಲ್ಲಿ ಶಯನ, ಉಚ್ಚಸ್ವರದಲ್ಲಿ ದೇವರ

೭. ವಿವರಗಳಿಗೆ ನೋಡಿ : ಕರ್ನಾಟಕ ಲಾಕುಳ ಶೈವರ ಇತಿಹಾಸ.

ಸ್ತುತಿಮಾಡುವುದು, ಹುಚ್ಚರಂತೆ ನಟಿಸುವುದು ಇತ್ಯಾದಿ. ಆದರೆ ಶ್ರೀಪತಿ ಪಂಡಿತರ ಅಭಿಪ್ರಾಯ ಬೇರೆ ಇದೆ. ಅವರ ಪ್ರಕಾರ ಹಣೆಯ ಮೇಲೆ, ಭುಜದಲ್ಲಿ ಅಥವಾ ಎದೆಯಮೇಲೆ ಲಿಂಗಧರಿಸಿ ತ್ರಿಕಾಲದಲ್ಲಿ ಭಕ್ತಿಯಿಂದ ಪೂಜಿಸುವವರು ಪಾಶುಪತರು ಅಥವಾ ವೀರಶೈವರು ಎಂದು ತಿಳಿಸುತ್ತಾರೆ. ಆನಂದಗಿರಿಯ ಶಂಕರದಿಗ್ವಿಜಯದಲ್ಲಿ ''ಲಲಾಟೇ ಭುಜದ್ವಯೇ ಹೃನ್ನಾಭಿಷು ಲಿಂಗಧಾರಿಣಾಃ ಪಾಶುಪತಾಃ'' ಎನ್ನುವ ವಿಚಾರವಿದೆ.

''ಶಿವಲಿಂಗಂ ಕರೇ, ಕಂಠೇಧೃತ್ವಾ ವಕ್ಷಸ್ಥಲೇಪಿ ವಾ ।
ತ್ರಿಕಾಲಂ ಆರ್ಚಯೇತ್ ಭಕ್ತ್ಯಾ ಮಹಾಪಾಶುಪತೋ ಹಿ ॥

ಇದು ಶ್ರೀಕರಭಾಷ್ಯದಲ್ಲಿ ಶ್ರೀಪತಿ ಪಂಡಿತರ ಅಭಿಪ್ರಾಯ. ಈ ಎಲ್ಲ ಅಭಿಪ್ರಾಯಗಳನ್ನು ಗಮನಿಸಿದಾಗ ''ಪಶುಪತಿ ಮತಸಾರೇ ಪಂಡಿತ ಶ್ಲಾಘನೀಯಾ'' ಎನ್ನುವ ಸಿದ್ಧಾಂತ ಶಿಖಾಮಣಿಯ ವಾಕ್ಯವನ್ನು ಅವಲೋಕಿಸಿದಾಗ ಹಿಂದಿನ ಪಾಶುಪತ ಮತವೇ ವೀರಶೈವವೆಂದೂ, ವೀರಶೈವಧರ್ಮದ ಪರ್ಯಾಯ ನಾಮವೆಂಬುದು ವ್ಯಕ್ತವಾಗುತ್ತದೆ.

ಕಾಳಾಮುಖ :

ಈ ಶೈವ ಶಾಖೆ ಪಾಶುಪತಮತದ ಒಂದು ಭಾಗವೆಂದು ಹೇಳುತ್ತಾರೆ. ಕಾಳಾಮುಖರು ಹಣೆಯಮೇಲೆ ಕಪ್ಪು ಗೆರೆಗಳನ್ನು ಧರಿಸುತ್ತಿದ್ದುದರಿಂದ ಇವರನ್ನು ಕಾಳಾಮುಖರೆಂದು ಕರೆಯುತ್ತಾರೆ. ಕರ್ನಾಟಕದಲ್ಲಿ ೧೦ ರಿಂದ ೧೩ನೇ ಶತಮಾನದವರೆಗೆ, ಇದು ಪ್ರಮುಖ ಧರ್ಮವಾಗಿತ್ತೆಂದು ಹೇಳುತ್ತಾರೆ. ಈ ಸಂಪ್ರದಾಯದ ಮಠಗಳು, ಶಿವದೇವಾಲಯಗಳು ಕರ್ನಾಟಕದ ನಗರ ಹಾಗೂ ಗ್ರಾಮಗಳಲ್ಲಿದ್ದವು ಎನ್ನುವ ವಿಚಾರ ಶಾಸನಗಳಿಂದ ತಿಳಿದು ಬರುತ್ತದೆ. ೧೩–೧೪ನೇ ಶತಮಾನದಲ್ಲಿ ಈ ಸಂಪ್ರದಾಯದ ಮಠಗಳು ವೀರಶೈವ ಮಠಗಳಾದವು, ಈ ಸಂಪ್ರದಾಯದ ಗುರುಗಳು ವೀರಶೈವರಾದರು. ಶೈವಶಾಖೆಗಳನ್ನು ಬಹುಪಾಲು ಆಗಮಗಳು ೪ ರಿಂದ ೭ ರವರೆಗೆ ಹೇಳುತ್ತವೆ. ಶೈವಮತದ ಹಲವಾರು ಶಾಖೆಗಳು ವೀರಶೈವದಲ್ಲಿ ವಿಲೀನಗೊಂಡು ವಿಕಾಸಸ್ವರೂಪವನ್ನು ಪಡೆದವು. ''ಶೈವ–ತ್ರೈವೆರಗಾದ, ಪಾಶುಪತ ಪಥವ ನರಿಯ ಕಾಳಾಮುಖ ಕಂಗೆಟ್ಟ, ಮಹಾವ್ರತಿ ಮದವೇರಿದ ಸನ್ಯಾಸಿ

ಪಾಷಂಡಿಯಾದ ಕಾಪಾಲಿ ಮರುಳಾಗಿ ತಿರುಗಿದ ಈ ಆರು ಭಕ್ತಿಪಂಥಕ್ಕೆ ಸಲ್ಲವು'' ಎಂದು ಹೇಳುತ್ತಾನೆ ಚನ್ನಬಸವಣ್ಣ. ಅಂದರೆ ಈ ಸಂಪ್ರದಾಯ ಗಳೆಲ್ಲ ಕ್ರಮೇಣ ವೀರಶೈವದಲ್ಲಿ ವಿಲೀನಗೊಂಡವು ಎನ್ನುವ ವಿಚಾರ ತಿಳಿಸುತ್ತಾನೆ.[೮]

ಕಾಪಾಲಿಕ :

ಇದು ಪ್ರಾಚೀನ ಶೈವಶಾಖೆ. ಇದನ್ನು 'ಸೋಮ' ಎಂದೂ ಕರೆಯುತ್ತಾರೆ. ಈ ಸಂಪ್ರದಾಯದವರು ಕೊರಳಲ್ಲಿ ಎಲುಬಿನ ಮಾಲೆ ಧರಿಸುತ್ತಿದ್ದರು. ನರಕಪಾಲದಲ್ಲಿ ಊಟ ಮಾಡುತ್ತಿದ್ದರು. ಸ್ಮಶಾನವಾಸಿಗಳಾಗಿದ್ದರು. ಸುರಾಪಾನ, ಮಾಂಸಭಕ್ಷಣೆ ಮಾಡುತ್ತಿದ್ದರು. ಕರ್ನಾಟಕದಲ್ಲಿ ಐಹೊಳೆ–ಪಟ್ಟದ ಕಲ್ಲು–ಬಳ್ಳಿಗಾವಿ ಇವು ಕಾಪಾಲಿಕ ಶೈವರ ಕೇಂದ್ರಗಳಾಗಿದ್ದವು.

ಕಾಶ್ಮೀರಶೈವ :

ಇದು ಪ್ರಾಚೀನ ಶೈವಸಂಪ್ರದಾಯ ತತ್ತ್ವಪ್ರಧಾನವಾದುದು. ಇದಕ್ಕೆ ಆಗಮಗಳೇ ಪ್ರಮಾಣ. ಈ ಶೈವಶಾಖೆಯಲ್ಲಿ ಎರಡು ಸಂಪ್ರದಾಯಗಳಿವೆ. ೧) ವಸುಗುಪ್ತನ ಶಿವಸೂತ್ರಸಂಪ್ರದಾಯ, ೨) ಸೋಮಾನಂದನ ಪ್ರತ್ಯಭಿಜ್ಞಾ. ಒಂದು ದ್ವೈತಪರ–ಇನ್ನೊಂದು ಶಿವಾದ್ವೈತ ಪರ. ಪ್ರತ್ಯಭಿಜ್ಞಾನ ಎಂದರೆ ಮರೆತು ಹೋದ ಸ್ವಸ್ವರೂಪ ಜ್ಞಾನವನ್ನು ಪಡೆಯುವುದು (ಗ್ರಹಣ ಸ್ಮರಣೆಯೋಃ ಐಕ್ಯಂ ಪ್ರತ್ಯಭಿಜ್ಞಾ). ಇಲ್ಲಿ ಪಶು–ಪತಿ–ಪಾಶಗಳ ವಿಚಾರವಿದೆ. ಅಂದರೆ ಪರಮಾತ್ಮ ಜೀವಾತ್ಮನಿಂದ ಬೇರೆಯಾಗಿ, ಜೀವನು ಪಶುವಾಗಿ, ಅಜ್ಞಾನ ಜಡನಾಗಿ 'ಪಾಶ' ಎಂದರೆ ಸಂಸಾರ ಬಂಧನದಲ್ಲಿ ಸಿಲುಕಿ, ಸ್ವಸ್ವರೂಪವನ್ನು ಅರಿಯಲು ಅಶಕ್ಯನಾಗಿದ್ದಾನೆ. ಈ ಜ್ಞಾನವನ್ನು ಪುನರ್ ಗ್ರಹಿಸುವುದೇ ಪ್ರತ್ಯಭಿಜ್ಞಾನ. ಪಶು–ಪಾಶ–ಪತಿಗಳ ವಿಚಾರ ಭೇದಕ್ಕೆ 'ತ್ರಿಕ' ಎನ್ನುವ ಹೆಸರೂ ಇದೆ.

ಇಲ್ಲಿಯವರೆಗೆ ಶೈವಧರ್ಮದ ಪ್ರಮುಖ ಶಾಖೆಗಳ ಸ್ಥೂಲಪರಿಚಯವನ್ನು ಅರಿತಂತಾಗಿದೆ. ಈ ಶಾಖೆಗಳಲ್ಲದೆ ಪ್ರತಿಯೊಂದು ಆಗಮದಲ್ಲೂ ವಿಭಿನ್ನಶೈವ–ವೀರಶೈವ ಪ್ರಭೇದಗಳೂ ಇವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ

೮. ಚನ್ನಬಸವಣ್ಣನವರ ವಚನಗಳು, ಸಂ. ಆರ್. ಸಿ. ಹಿರೇಮಠ, ೫೪೫.

ಚಂದ್ರಜ್ಞಾನಾಗಮದಲ್ಲಿ ಶೈವ–ವೀರಶೈವ ಪ್ರಭೇದಗಳನ್ನು ವಿವರಿಸುವುದು ಈ ಲೇಖನದ ಆಶಯವಾಗಿದೆ.

ಚಂದ್ರಜ್ಞಾನಾಗಮದಲ್ಲಿ ಶೈವ–ವೀರಶೈವ ಪ್ರಭೇದಗಳು :

ಶೈವಾಗಮಗಳಲ್ಲಿ ಚಂದ್ರಜ್ಞಾನಾಗಮವು ವೈಶಿಷ್ಟ್ಯಪೂರ್ಣವಾದುದು. ವೀರಶೈವರ 'ಅಷ್ಟಾವರಣ'ವೇ ಅಂಗ, 'ಪಂಚಾಚಾರ'ವೇ ಪ್ರಾಣ, ಷಟ್‌ಸ್ಥಲವೇ ಆತ್ಮವಾಗಿರುವ ಈ ತತ್ತ್ವಗಳ ಸಮ್ಯಕ್ ಸ್ವರೂಪವನ್ನು ಈ ಚಂದ್ರಜ್ಞಾನಾಗಮ ಚಿತ್ರಿಸುತ್ತದೆ. ವೀರಶೈವರ ಆಚಾರ–ವಿಚಾರ–ಸಂಸ್ಕೃತಿಯ ಬಗೆಗೆ ಹೊಸಬೆಳಕನ್ನು ಚೆಲ್ಲುತ್ತದೆ, ಅಲ್ಲದೆ ವೀರಶೈವರ ಧರ್ಮಶಾಸ್ತ್ರ ಎನ್ನುವ ಅಗ್ಗಳಿಕೆಗೆ ಪಾತ್ರವಾಗಿದೆ. ಈ ಆಗಮವು ಬೃಹಸ್ಪತಿ ಹಾಗೂ ಅನಂತ ರುದ್ರರ ಸಂವಾದ ರೂಪದಲ್ಲಿದೆ. ಕ್ರಿಯಾಪಾದ ೧೦ನೇ ಪಟಲದ ೪ನೇ ಶ್ಲೋಕದಿಂದ ೪೮ ಶ್ಲೋಕಗಳವರೆಗೆ ಶೈವ–ವೀರಶೈವ ಪ್ರಭೇದಗಳನ್ನು ತಿಳಿಸಲಾಗಿದೆ. ಆಗಮಗಳಲ್ಲಿ ಹಿಂದೆಯೇ ತಿಳಿಸಿದಂತೆ ಅನೇಕ ಪ್ರಭೇದಗಳಿವೆ. ಕೆಲವು ಆಗಮಗಳಲ್ಲಿ ನಾಲ್ಕು, ಕೆಲವು ಆಗಮಗಳಲ್ಲಿ ಏಳು ಮತ್ತೆ ಕೆಲವು ಆಗಮಗಳಲ್ಲಿ ಹತ್ತು ಉಳಿದ ಆಗಮಗಳಲ್ಲಿ ಇನ್ನು ಹೆಚ್ಚು ಪ್ರಭೇದಗಳಿವೆ. ಇವುಗಳನ್ನೆಲ್ಲ ಸಂಗ್ರಹಿಸಿ, ಸಂಶಯ ಬಾರದಂತೆ ಎಂಟು ಶಾಖೆಗಳಲ್ಲಿ ಅಳವಡಿಸಿ ವಿವರಿಸಲಾಗಿದೆ ಎನ್ನುವ ವಿಚಾರ ಈ ಆಗಮದಲ್ಲಿದೆ. ಅಂದರೆ ಈ ಆಗಮ ಶೈವಧರ್ಮದ ಎಂಟು ಪ್ರಭೇದಗಳನ್ನು ವಿವರಿಸುತ್ತದೆ :

ಅನಾದಿಶೈವಂ ಪ್ರಥಮಮಾದಿಶೈವಂ ದ್ವಿತೀಯಕಮ್ ।  
ಪೂರ್ವಶೈವಂ ತೃತೀಯಂಸ್ಯಾನ್ಮಿಶ್ರಶೈವಂ ಚತುರ್ಥಕಮ್ ॥  
ಶುದ್ಧಶೈವಂ ಪಂಚಮಂ ಸ್ಯಾತ್, ಷಷ್ಠಂ ವೈ ಮಾರ್ಗಶೈವಕಮ್ ।  
ಸಾಮಾನ್ಯಂ ಸಪ್ತಮಂ ಜ್ಞೇಯಂ ವೀರಶೈವಮಥಾಷ್ಟಕಮ್ ॥[೯]

ಅನಾದಿ, ಆದಿ, ಪೂರ್ವ, ಮಿಶ್ರ, ಶುದ್ಧ ಮಾರ್ಗ, ಸಾಮಾನ್ಯ, ವೀರಶೈವ ಎಂದು ಎಂಟು ಪ್ರಭೇದಗಳನ್ನು ಚಂದ್ರಜ್ಞಾನಾಗಮ ತಿಳಿಸುತ್ತದೆ.

೧. ಅನಾದಿಶೈವ :

ಶಿವನೇ ಅನಾದಿಶೈವ, ಅವನು ಕಾಲಾತೀತ, ಆದಿರಹಿತ ಮತ್ತು ಅವನ ಗಣ (ಪರಿವಾರ)[೧೦]

---

೯. ಚಂದ್ರಜ್ಞಾನಾಗಮ, ಕ್ರಿ. ಪಾ. ೧೦, ೪–೫. ೧೦. ಅದೇ, ಪುಟ–೧೦೦

೨. ಆದಿಶೈವ :

ಕೌಶಿಕ, ಕಶ್ಯಪ, ಭರದ್ವಾಜ, ಅತ್ರಿ ಹಾಗೂ ಗೌತಮ–ಈ ಐವರು ಮಹರ್ಷಿಗಳು ಶಿವನ ಸದ್ಯೋಜಾತಾದಿ ಪಂಚಮುಖಗಳಿಂದುದಯಿಸಿದ ಪಂಚ ಬ್ರಹ್ಮರಿಂದ ದೀಕ್ಷೆ ಪಡೆದುಕೊಂಡರು. ವೇಧಾ–ಮನು–ಕ್ರಿಯಾದೀಕ್ಷೆಗಳಿಂದ ಸ್ಥೂಲ–ಸೂಕ್ಷ್ಮ–ಕಾರಣ ಶರೀರಗಳಲ್ಲಿ, ಇಷ್ಟ–ಪ್ರಾಣ–ಭಾವಲಿಂಗಗಳ ಸಂಯೋಗದ ಶಿವಜ್ಞಾನ ಪಡೆದು, ಇಷ್ಟಲಿಂಗವನ್ನು ಪೂಜಿಸಿ ಜೀವನ್ಮುಕ್ತರಾದರು. ಈ ಆಚಾರ್ಯರು ಲೋಕವಂದ್ಯರು.[೧೧]

೩. ಪೂರ್ವಶೈವ :

''ಕಾನೀನಾಸ್ತು ಶಿವದ್ವಿಜಾಃ ಅನೂಢಾಸುಹಿಕನ್ಯಾಸು ಪ್ರಭೂತಾಃ'' ಅಂದರೆ ಪೂರ್ವಶೈವರು ಕಾನೀನ ಶಿವದ್ವಿಜರು. ಮದುವೆಯಾಗದ (Out of wedlock) ಕನ್ಯೆಯರಿಂದ ಹುಟ್ಟಿದವರು. ಶಿವಸಂಸ್ಕಾರವಿಲ್ಲದವರು. ಪೂರ್ವಶೈವದ ದೀಕ್ಷೆ ಪಡೆದು ಶಿವದೇವಾಲಯದ ಪೂಜಾದಿ ಸೇವಾಕಾರ್ಯಗಳಲ್ಲಿ ನಿಯುಕ್ತರು. ಇವರಲ್ಲಿ ದೀಕ್ಷೆ ಪಡೆದವರು ಸ್ಥಾವರಲಿಂಗದ ಅಭಿಷೇಕ, ಪುಣ್ಯಾರ್ಚನೆಯನ್ನು ತಮ್ಮ ಕಲ್ಯಾಣಕ್ಕಾಗಿ ಮಾಡುವರು. ಇವರಿಗೆ ಸ್ಥಾವರ ದೇವತಾಪ್ರತಿಷ್ಠೆ ಮೊದಲಾದ ವಿಧಿಗಳ ಹಕ್ಕೂ ಇಲ್ಲ. ದೀಕ್ಷೆ ಪಡೆಯದವರು ದೇವರ ಪೂಜೆಗೆ ಬಿಲ್ವಪತ್ರೆ, ಹೂವತ್ತಿ ತರುವುದು, ಪ್ರತಿನಿತ್ಯ ದೇವಾಲಯದ ಕಸ ಗುಡಿಸಿ, ಪರಿಸರವನ್ನು ನಿರ್ಮಲವಾಗಿಡುವುದು, ದೇವಾಲಯದ ರಕ್ಷಣೆ ಮಾಡುವುದು, ದೇವಾಲಯಕ್ಕೆ ಬಂದ ಭಕ್ತರ ಕಲ್ಯಾಣಕ್ಕಾಗಿ ಹಣ್ಣು–ಕಾಯಿ ಮಂಗಳಾರತಿ ಪೂಜೆ ಮಾಡುವ ಇವರು 'ತಮ್ಮಡಿ'ಗಳು. 'ದೇವಲಕ'ರೆನಿಸಿದ ಇವರಿಗೆ ಹೆಚ್ಚಿನ ಅಧಿಕಾರವಿಲ್ಲ. ದೇವಾಲಯ ಸೇವೆಯಲ್ಲಿದ್ದಾಗ ಮಾತ್ರ ಇವರು ಸ್ಪರ್ಶರು. ಉಳಿದ ಕಾಲದಲ್ಲಿ ಹೊರಗೆ ಇವರನ್ನು ಮುಟ್ಟುವುದೇ ಪಾಪಕರ. ಉತ್ತಮರು ಶಿವದೀಕ್ಷೆ ಇಲ್ಲದ ದೇವರ ಎಡೆಯನ್ನು ಸೇವಿಸುವ ಇವರನ್ನು 'ಮಲಿನ'ರೆಂದು ಭಾವಿಸುತ್ತಿದ್ದರು. ಆದರೂ ಹೊರಗಿನ ಶಿವಾಲಯ ಸೇವೆಯಲ್ಲಿರುವ ಕಾರಣ ಇವರೂ ಶೈವರೇ.[೧೨]

---

೧೧. ಚಂದ್ರಜ್ಞಾನಾಗಮ ಕ್ರಿಯಾಪಾದ–೧೦, ೬–೧೦.

೧೨. ಅದೇ ೧೦–೧೧–೧೫

೪. ಮಿಶ್ರಶೈವ :

ಇವರು ಶಿವಲಿಂಗದ ಜೊತೆಗೆ ಸಮಾನ ಭಾವನೆಯಿಂದ ಸೂರ್ಯ, ಅಂಬಿಕೆ, ವಿಷ್ಣು, ಗಣಪತಿ ಮೂರ್ತಿಗಳನ್ನು ಒಂದೇ ಪೀಠದ ಮೇಲೆ ಇಟ್ಟು ಪೂಜಿಸುವರು. ಇವರ ಭಕ್ತಿ ಏಕನಿಷ್ಠವಾಗಿರುವುದಿಲ್ಲ, ಮಿಶ್ರವಾಗಿರುತ್ತದೆ. ಇವರಿಗೆ ಶಿವದೀಕ್ಷೆ ಇಲ್ಲ. ಇವರು ಭಸ್ಮ-ರುದ್ರಾಕ್ಷಗಳನ್ನು ಧರಿಸುವುದರಿಂದ ಇವರು ಶೈವರು. ಇವರು 'ಅಂತಃಶಾಕ್ತಂ ಬಹಿಃ ಶೈವಂ ಸಭಾಮಧ್ಯೇತು ವೈಷ್ಣವಮ್' ಎನ್ನುವಂತೆ ಹಲವು ದೈವಭಕ್ತರು.[೧೩]

೫. ಶುದ್ಧಶೈವ :

ಶುದ್ಧಶೈವರು ಭಸ್ಮ-ರುದ್ರಾಕ್ಷ ಧಾರಣೆ ಮಾಡುತ್ತಾರೆ. ಶೈವಪುರಾಣ ಪದ್ಧತಿಯಲ್ಲಿ ದೀಕ್ಷಿತರು. ಶಿವಲಿಂಗಪೂಜೆಯಲ್ಲಿ ಆಸಕ್ತರು, ಸದಾಶಿವ ಚಿಂತಕರು, ಶಿವನಲ್ಲಿ ಹೆಚ್ಚು ನಿಷ್ಠೆಯುಳ್ಳವರು, ಶಿವಾನುಭವಿಗಳು.[೧೪]

೬. ಮಾರ್ಗಶೈವ :

ಮಾರ್ಗವೆಂದರೆ ಮೋಕ್ಷಕ್ಕೆ ಕೊಂಡೊಯ್ಯುವ ದಾರಿ. ಇವರು ವೈದಿಕ, ಆಗಮಿಕ ಮತ್ತು ಆಗಮೋತ್ತರವೆಂದು ಮೂರು ದೀಕ್ಷೆಗಳನ್ನು ಪಡೆದ ಷಟ್‌ಸ್ಥಲಜ್ಞಾನ ಸಂಪನ್ನರು. ಆರು ಹೊತ್ತು 'ಶಿವಲಿಂಗ' ಪೂಜೆ ಮಾಡುವ ವ್ರತಶೀಲರು. (ಅರುಣೋದಯ – ಸೂರ್ಯೋದಯ, ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ, ರಾತ್ರಿ) ಪ್ರತಿದಿನ ೨೧೬೦೦ ಷಡಕ್ಷರ ಮಂತ್ರ ಜಪಿಸಿ, ಲಿಂಗಾಂಗಸಾಮರಸ್ಯದ ಅನುಭವ ಪಡೆಯುವವರು. ಮಾರ್ಗಶೈವರ ಆಚರಣೆ ವಿಶಿಷ್ಟವಾದುದು. ಮಾರ್ಗಶೈವ ಆದಿಶೈವಾಚರಣೆಯಂತೆ ಕಂಡರೂ, ಇಲ್ಲಿ ಮೂರು ವಿಧ ದೀಕ್ಷೆಗಳ ವಿಧಾನವೇ ಹಿರಿದು. ಶೀಘ್ರಮುಕ್ತಿ ಕೊಡುವ ಕರ್ಮ-ಜ್ಞಾನಗಳ ಸಮುಸಮುಚ್ಚಯದ ಷಟ್‌ಸ್ಥಲಾಚರಣೆ, ಆರು ಕಾಲ ಶಿವಲಿಂಗ ಪೂಜೆ ಮತ್ತು ಷಡಕ್ಷರಿ ಮಂತ್ರ ಜಪದ ನಿರಂತರ ಅನುಷ್ಠಾನ ಮಾರ್ಗಶೈವರ ಹಿರಿಮೆಯಾಗಿದೆ.[೧೫]

---

೧೩. ಚಂದ್ರಜ್ಞಾನಾಗಮ ಕ್ರಿ. ಪಾ. ೧೦, ೧೯, ೨೨

೧೪. ಅದೇ ೧೦, ೨೩, ೨೪

೧೫. ಅದೇ ೧೦, ೨೫, ೨೭

೭. ಸಾಮಾನ್ಯ ಶೈವ :

ಇವರು ಶಾಕ್ತ, ಸೌರ, ಗಾಣಪತ್ಯ ಮತ್ತು ಕೌಮಾರ ಮತಗಳ ಆಚರಣೆ ಉಳ್ಳವರು. ವರ್ಣ ಮೊದಲಾದ ಆರು ಅಧ್ವಗಳ ಶೋಧನೆಯಿಂದ ಶರೀರವನ್ನು ಸಂಸ್ಕರಿಸಿ ಶಿವಮಂತ್ರವಲ್ಲದೆ, ಗಾಯತ್ರಿ ಮಂತ್ರದ ಜಪದ ಸಾಧನೆ ಉಳ್ಳವರು.[೧೬] (ವಿ. ಸೂ : ಆರು ಅಧ್ವಗಳ ಸಂಸ್ಕಾರ ದೀಕ್ಷಾ ವಿವರ ಅಭಿನವ ಗುಪ್ತನ ತಂತ್ರಾಲೋಕದಲ್ಲಿದೆ.)

೮. ವೀರಶೈವ :

ಶೈವಧರ್ಮದ ಕೊನೆಯ ಶಾಖೆಯೇ ವೀರಶೈವವೆಂದು ಚಂದ್ರಜ್ಞಾನಾಗಮ ಸ್ಪಷ್ಟಪಡಿಸುತ್ತದೆ. ವೀರಶೈವರಲ್ಲಿ ಎರಡು ವಿಧ, ಶ್ರೌತ–ತಾಂತ್ರಿಕವೆಂದು. ವರ್ಣಾಶ್ರಮ ಪ್ರಧಾನವಾದುದು ಶ್ರೌತ (ವೈದಿಕ) ಅತಿವರ್ಣಾಶ್ರಮ ಪ್ರಧಾನವಾದುದು ತಾಂತ್ರಿಕ. ಜನ್ಮದಿಂದ ಬಂದ ಜಾತಿಯ ತಾರತಮ್ಯವನ್ನು ಮೀರಿದ (ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರರೆಂಬ) ಶಿವಾಗಮಗಳ ವಿಚಾರಭಾಗದಲ್ಲಿ ಉಕ್ತವಾಗಿರುವುದು ವೀರಶೈಮತ, ಸ್ವತಂತ್ರವಾದುದು. ಆದಿಶೈವ ಮತಕ್ಕೆ ಇದು ಸಮಾನವಾದಂತೆ ಕಂಡರೂ ಕೆಲವು ವಿಷಯಗಳಲ್ಲಿ ಅದಕ್ಕಿಂತ ವಿಭಿನ್ನ. ಶೈವಾಗಮಗಳ ಪೂರ್ವಭಾಗದಲ್ಲಿ ಪ್ರತಿಪಾದಿತವಾದ ಆದಿಶೈವ, ಗುರುಮುಖದಿಂದ ಪಡೆದ ಸ್ಥಾವರಲಿಂಗವನ್ನು ತನ್ನ ಪ್ರಾಣಕ್ಕೆ ಸಮಾನವೆಂದು ತಿಳಿದರೂ, ಅವನು ಅದನ್ನು ಎದುರಿಟ್ಟು ಪೂಜಿಸುತ್ತಾನೆ. ಆಗಮಗಳ ಉತ್ತರಭಾಗದಲ್ಲಿ ಪ್ರತಿಪಾದಿತ ವೀರಶೈವ, ವೇಧಾ–ಮನು–ಕ್ರಿಯಾದೀಕ್ಷೆಯ ಕ್ರಮದಲ್ಲಿ ಗುರುಕಾರುಣ್ಯದಿಂದ ಪಡೆದ ಮಂತ್ರಮೂರ್ತಿ ಇಷ್ಟಲಿಂಗವನ್ನು ಸದಾ ಅಂಗದ ಮೇಲೆ ಧರಿಸಿ ಪೂಜಿಸುತ್ತಾನೆ. ತನ್ನ ಪ್ರಾಣಸ್ವರೂಪವಾದ ಅದನ್ನು ಅಗಲಿ ಒಂದು ನಿಮಿಷವೂ ಇರುವುದಿಲ್ಲ. ಅಕಸ್ಮಾತ್ ಅದರ ವಿಯೋಗವಾದಲ್ಲಿ ತನ್ನ ಪ್ರಾಣವನ್ನು ಹುಲ್ಲುಕಡ್ಡಿಯಂತೆ ಭಾವಿಸಿ ಆತ್ಮಾರ್ಪಣೆಗೆ ಸಿದ್ಧನಾಗುವ ಅವನ ವೀರವ್ರತ ಅನನ್ಯವಾದುದು. ಅವನ ನೈಷ್ಟಿಕ ಭಕ್ತಿ–ಭಾವ ಮಹೋನ್ನತವಾದುದು.[೧೭] ಇಂತಹ ಕಠಿಣ ವ್ರತದ ಆಚರಣೆಯಿಂದಾಗಿ ಅವನು ನಿಜವಾದ ಅರ್ಥದಲ್ಲಿ ವೀರಶೈವನೆಂದೇ

---

೧೬. ಚಂದ್ರಜ್ಞಾನಾಗಮ ಕ್ರಿ.ಪಾ. ೧೦, ೨೮, ೨೯ ೧೭. ಅದೇ ೧೦, ೩೦, ೩೪.

ಪ್ರಸಿದ್ಧ. ಶೈವಭೇದಗಳು ಅನೇಕವಾಗಿದ್ದರೂ ಶೈವಮತ ಒಂದೇ ಆಗಿದೆ. ಶೈವ ಮಹಾವೃಕ್ಷದ ಕೊಂಬೆ-ರೆಂಬೆಗಳು ಅಸಂಖ್ಯವಾಗಿದ್ದರೂ, ಮೂಲವೃಕ್ಷ ಒಂದೇ ಆಗಿದೆ.

ದೇಶ-ಕಾಲ, ಸಂಪ್ರದಾಯ, ನಂಬಿಕೆ, ಆಚರಣೆಗಳ ಭೇದದಿಂದ ಶೈವಶಾಖೆಗಳು ಬೇರೆ ಬೇರೆ ಹೆಸರುಗಳನ್ನು ಪಡೆದಿವೆ. ಆದರೂ ಆ ಹೆಸರುಗಳು ಅನ್ವರ್ಥಕವಾಗಿವೆ. ಅನಾದಿಕಾಲದಿಂದ ನಡೆದುಬಂದ ಸೃಷ್ಟಿಯೊಂದಿಗೆ ಈ ಶಿವಾಚಾರವೂ ಸಾಗಿಬಂದಿರುವುದರಿಂದ ಅದು 'ಅನಾದಿ' ಎನಿಸಿದೆ. (ಅನಾದಿಸರ್ಗ-ಸಂಚಾರಾತ್ ಅನಾದೀದಂ ನಿಗದ್ಯತೆ)[೧೮] ಎಲ್ಲ ಮತಗಳಿಗೂ ಮೊದಲನೆಯದಾದುದರಿಂದ 'ವೀರಶೈವ' ಎನಿಸಿತು. (ಮತಾನಾಹ ಸರ್ವೇಷಾಂ ಆದ್ಯತ್ವಾದಪಿಗೀಷ್ಯತೇ)[೧೯] ಮುಕ್ತಿಮಾರ್ಗಕ್ಕೆ ಪ್ರಧಾನವಾದದ್ದರಿಂದ ಮಾರ್ಗಶೈವವಾಯಿತು (ಮುಕ್ತಿಮಾರ್ಗ-ಪ್ರಧಾನ ತ್ವಾತ್ ಮಾರ್ಗಶೈವಮಿತಿ ಶೃತಮ್)[೨೦] ಶಿವನೇ ಸರ್ವಸ್ವವೆಂದು ಭಾವಿಸಿ, ಶಿವಭಕ್ತಿಸಂಪನ್ನರೂ, ಅನ್ಯದೈವದ ನಿರಾಕರಣೆ ಉಳ್ಳವರು 'ಶುದ್ಧಶೈವರು'. (ದೇವತಾಂತರ ಸಂಬಂಧ ವರ್ಜನಾತ್ ಶುದ್ಧಮಿತ್ಯಪಿ)[೨೧] ಸ್ಮಾರ್ತಕರ್ಮಗಳ ಸಂಬಂಧದಿಂದ 'ಮಿಶ್ರಶೈವ'ವಾಯಿತು (ಸ್ಮಾರ್ತ ಕರ್ಮಾಭಿಸಂಬಂಧಾನ್ ಮಿಶ್ರಮಿತ್ಯಪಿ).[೨೨]

ಅಂಗದ ಮೇಲೆ ಗುರು ಕೊಟ್ಟ ಪ್ರಾಣಸಮಾನ ಇಷ್ಟಲಿಂಗವನ್ನು ಸದಾ ಧರಿಸಿ, ಪೂಜಿಸುವ ವೀರವ್ರತದಿಂದಾಗಿ, ವೀರಶೈವ ಎಂದು ಹೆಸರಾಯಿತು (ವೀರವ್ರತ ಸಮಾಯೋಗಾತ್ ವೀರಶೈವಮಿತಿ ಸ್ಮೃತಮ್).[೨೩]

ವೀರಶೈವ ಪ್ರಭೇದಗಳು[೨೪] :

ವೀರಶೈವಧರ್ಮ ಸನಾತಧರ್ಮ, ಶೈವಧರ್ಮ ಒಂದು ಪ್ರಭೇದ.

---

೧೮. ಚಂದ್ರಜ್ಞಾನಾಗಮ ಕ್ರಿ. ಪಾ. ೧೦, ೫೯
೧೯. ಅದೇ ೧೦, ೫೯
೨೦. ಅದೇ ೧೦, ೬೦.
೨೧. ಅದೇ ೧೦, ೬೦
೨೨. ಅದೇ ೧೦, ೬೧
೨೩. ಅದೇ ೧೦, ೬೧
೨೪. ಅದೇ ಕ್ರಿ. ಪಾ. ೧೦, ೩೦, ೪೮.

ಇದಕ್ಕೆ ಶೈವಧರ್ಮದಷ್ಟೇ ಪ್ರಾಚೀನ ಇತಿಹಾಸವಿದೆ. ವೀರಶೈವಧರ್ಮದ ಗಂಗೆಯ ಗಂಗೋತ್ರಿ ಶೈವಮತ. ಶೈವಧರ್ಮದ ಅಧ್ಯಯನದಿಂದ ವೀರಶೈವ ಧರ್ಮದ ಮೂಲ ನೆಲೆಯನ್ನು ಗುರುತಿಸುವುದು ಸಾಧ್ಯವಾಗುತ್ತದೆ. ವೀರಶೈವಧರ್ಮದ ಪ್ರಾಚೀನತೆ–ಪರಂಪರೆಗಳನ್ನು ಅರಿತುಕೊಳ್ಳಲು ಶೈವ ಧರ್ಮದ ಅಧ್ಯಯನ ಅನಿವಾರ್ಯವಾಗುತ್ತದೆ. ಶೈವಧರ್ಮದ ಇತಿಹಾಸ ದೊಂದಿಗೆ ವೀರಶೈವಧರ್ಮದ ಇತಿಹಾಸವೂ ಹಾಸುಹೊಕ್ಕಾಗಿದೆ. ಶೈವ ಮತದ ಪ್ರಭೇದಗಳೆಂಬ ಕೆಲವು ಉಪನದಿಗಳು ಕಾಲಾನಂತರದಲ್ಲಿ ವೀರಶೈವವೆಂಬ ನದಿಗೆ ಸಂಗಮಿಸಿ ವೀರಶೈವಧರ್ಮದ ನದಿ ವಿಸ್ತಾರ ವಾದುದು ಇತಿಹಾಸ ; ಒಂದು ರೀತಿಯಲ್ಲಿ ವೀರಶೈವಧರ್ಮದ ವಿಕಾಸರೂಪ ಅದೇ ಕೊನೆಯ ಸ್ವರೂಪವೆಂದು ಹೇಳಿದರೆ ಬಹುಶಃ ತಪ್ಪಾಗಲಿಕ್ಕಿಲ್ಲ. ಸಾಮಾನ್ಯವಾಗಿ ಎಲ್ಲ ವೀರಶೈವ ಆಗಮಗಳಲ್ಲೂ ವೀರಶೈವದ ಮೂರು ಭೇದಗಳು ಉಕ್ತವಾಗಿರುವುದು ಕಂಡುಬರುತ್ತದೆ ಪಾರಮೇಶ್ವರ, ಸೂಕ್ಷ್ಮ, ವಾತುಲ ಹೀಗೆ ಎಲ್ಲ ಪ್ರಮುಖ ಆಗಮಗಳಲ್ಲಿ ವೀರಶೈವದ ಮೂರು ಪ್ರಭೇದಗಳು ಉಕ್ತವಾಗಿದ್ದು ಅವುಗಳ ಲಕ್ಷಣಗಳು ಬಹುಮಟ್ಟಿಗೆ ಒಂದೇ ವಿಧವಾಗಿವೆ. ಚಂದ್ರಜ್ಞಾನಾಗಮವು ವೀರಶೈವದ ಮೂರು ಪ್ರಭೇದಗಳನ್ನು ತಿಳಿಸುತ್ತದೆ.''[೨೫] ಅವುಗಳೆಂದರೆ–

ಸಾಮಾನ್ಯ ವೀರಶೈವ, ವಿಶೇಷ ವೀರಶೈವ ಹಾಗೂ ನಿರಾಭಾರಿ ವೀರಶೈವ. ಅವುಗಳ ಲಕ್ಷಣಗಳು ಹೀಗಿವೆ–

೧. ಸಾಮಾನ್ಯ ವೀರಶೈವ : ಇಷ್ಟ–ಪ್ರಾಣ–ಭಾವಲಿಂಗಗಳನ್ನು ಏಕೋ ಭಾವದಿಂದ ಅರ್ಚಿಸಿ ಗುರು, ಲಿಂಗ, ಜಂಗಮರಲ್ಲಿ ಸಮಭಾವ ಹೊಂದಿ ತ್ರಿಕಾಲ ಶಿವಪೂಜೆಯನ್ನು ದೊರೆತಷ್ಟು ಹೂ–ಪತ್ರೆ ಮೊದಲಾದ ಪೂಜಾಪರಿ ಕರಗಳಿಂದ ಪೂಜಿಸಿ, ಸಂತುಷ್ಟನಾಗಿರುವವನು ಸಾಮಾನ್ಯ ವೀರಶೈವ.[೨೬]

೨. ವಿಶೇಷ ವೀರಶೈವ : ವಿಶೇಷ ವೀರಶೈವ ಧರ್ಮಾಚರಣೆ ವಿಶಿಷ್ಟ ವಾದುದು. ಪ್ರತಿದಿನ ಇಷ್ಟಲಿಂಗ ಪೂಜೆಯ ನಂತರ ಒಬ್ಬರು–ಇಬ್ಬರು ಇಲ್ಲವೆ

---

೨೫. ''ಸಾಮಾನ್ಯಶ್ಚ ವಿಶೇಷಶ್ಚ ನಿರಾಭಾರೀತಿ ಚ ತ್ರಿದಾ'' ಚಂದ್ರಜ್ಞಾನಾಗಮ ೧೦, ೩೫.

೨೬. ಅದೇ, ಕ್ರಿ. ಪಾ. ೧೦, ೩೭.

ಮೂವರು ಜಂಗಮರಿಗೆ ತಪ್ಪದೆ ಪ್ರಸಾದ ಮಾಡಿಸಿ, ಶೇಷಪ್ರಸಾದವನ್ನು ಸೇವಿಸುವುದು ಮತ್ತು ಪ್ರತಿದಿನ ತಪ್ಪದೆ ದಿನಕ್ಕೆ ಆರು ವೇಳೆಯಲ್ಲಿ ಇಷ್ಟಲಿಂಗವನ್ನು ಪೂಜಿಸುವುದು ಬಿಲ್ವಪತ್ರ, ಕರವೀರ, ಮಲ್ಲಿಕಾ, ಉತ್ಪಲ, ಪುನ್ನಾಗ ಮೊದಲಾದ ವಿವಿಧ ಪುಷ್ಪಗಳಲ್ಲಿ ಒಂದು, ಎರಡು ಅಥವಾ ಮೂರು ಪುಷ್ಪಗಳನ್ನು ನಿಯಮದಂತೆ ಅರ್ಪಿಸಿ, ಪೂಜಿಸಬೇಕು. ಜೀವನಪರ್ಯಂತ ನಿತ್ಯನೇಮಗಳ ಪಾಲನೆ ಮಾಡಬೇಕು. ವ್ರತ ಲೋಪವಾದರೆ ಪ್ರಾಣತ್ಯಾಗ ಮಾಡಲು ಸಿದ್ಧನಾಗಬೇಕು. ಇವನೇ ವಿಶೇಷ ವೀರಶೈವ.[೨೭]

೩. ನಿರಾಭಾರಿ ವೀರಶೈವ : ಇವನು ಅತ್ಯಾಶ್ರಮೀ. ಹೆಂಡತಿ ಮಕ್ಕಳ ಪೋಷಣೆಯ ಭಾರ ಹೊತ್ತಿರುವುದಿಲ್ಲ. ಆದ್ದರಿಂದ ಇವನು ವಿರಕ್ತ, ನಿರಾಭಾರಿ. ಮಂಡೆಬೋಳು ಅಥವಾ ಜಡೆಯನ್ನೂ ಬಿಟ್ಟಿರಬಹುದು. ಕೈಯ್ಯಲ್ಲಿ ದಂಡ ಹಿಡಿದು ಕಾವಿ, ಕಪನಿ ಧರಿಸಿ, ನಿರ್ಭಯ ಹಾಗೂ ಸ್ವತಂತ್ರ ನಾಗಿ ಲೋಕಸಂಚಾರ ಮಾಡುವವನು. ವೈದಿಕಾಚರಣೆಯ ವೀರಶೈವ ಸನ್ಯಾಸಿ, ಶಿಖಾಯಜ್ಞೋಪವೀತ ಧರಿಸಿದವನು. ದಂಡ ಕಾಷಾಯಧಾರಿ, ಲಿಂಗಾಂಗಿ ಸ್ವತಂತ್ರ. ವೈದಿಕ ವೀರಶೈವ ಸನ್ಯಾಸಿಗಳ ಆಚರಣೆಯಲ್ಲಿ ಇಷ್ಟಲಿಂಗ ಅಂಗದಿಂದ ಅಗಲಿದಾಗ, ಪ್ರಾಣತ್ಯಾಗ ಮಾಡುವ, ವೀರವ್ರತದ ಆಚರಣೆ ಸಮಾನವಾಗಿರುವುದು. ವಿಶೇಷ ನಿರಾಭಾರಿ, ನಿಸ್ಪೃಹ, ನಿಜಲಿಂಗೈಕ್ಯ, ಭಿಕ್ಷಾನ್ನತೃಪ್ತ ನಿರ್ಭಯ, ಮೌನಿ, ಭೂತದಯಾಯುಕ್ತ, ಸದಾ ಭಸ್ಮರುದ್ರಾಕ್ಷಧಾರಕ, ಶಿವ ಷಡಕ್ಷರಮಂತ್ರ ಜಪಾಸಕ್ತ, ಶಿವಾನುಭವ ಚರಮೂರ್ತಿ. ಆದಿಶೈವ, ಪೂರ್ವಶೈವ, ಶುದ್ಧಶೈವ, ಮಾರ್ಗಶೈವ ಮತ್ತು ವೀರಶೈವರು ಶಿವಾದ್ವೈತವಾದಿಗಳು. ಅದು ಶೃತಿ ಸಮ್ಮತ. ಮಿಶ್ರಶೈವನಿಗೆ ಶುದ್ಧದ್ವೈತಮತ ಪರಿಕಲ್ಪಿತವಾಗಿದೆ. ಸಾಮಾನ್ಯ ವೀರಶೈವನದು ಶಕ್ತಿವಿಶಿಷ್ಟಾ ದ್ವೈತ ಮತವೆಂದು ತೋರುತ್ತದೆ.[೨೮]

ಆದಿಶೈವ, ಮಾರ್ಗಶೈವ ಮತ್ತು ವೀರಶೈವನಿಗೆ ಪ್ರೇತಕರ್ಮದ ಸೂತಕವಿಲ್ಲ, ಶವದ ಅಗ್ನಿಸಂಸ್ಕಾರ ಇವರಿಗೆ ಸಮ್ಮತವಾದುದಲ್ಲ. ಆದರೆ

---

೨೭. ಚಂದ್ರಜ್ಞಾನಾಗಮ ಕ್ರಿ. ಪಾ. ೧೦, ೩೭, ೪೧.
೨೮. ಅದೇ, ಕ್ರಿ. ಪಾ. ೧೦, ೪೯, ೫೦.

ಪೂರ್ವಶೈವ, ಮಿಶ್ರಶೈವ ಮತ್ತು ಶುದ್ಧಶೈವರು ಪ್ರೇತಕರ್ಮಶೀಲರು. ಆದ್ದರಿಂದ ಅವರಿಗೆ ಶಾಂಭವೀದೀಕ್ಷೆ ಸಲ್ಲದು.[೩೯]

ಈ ಎಲ್ಲ ಶೈವ ಹಾಗೂ ವೀರಶೈವ ಪ್ರಭೇದಗಳು ಆಚಾರಭೇದಗಳಿಂದ ವಿಭಿನ್ನವಾಗಿವೆ. ಆದರೆ ಎಲ್ಲವೂ ಶೈವಮತದ ಅಂಗಗಳಾಗಿವೆ. ಶೈವಾಗಮ ಗಳ ಪೂರ್ವಭಾಗದಲ್ಲಿ ಇಷ್ಟಲಿಂಗ ಸಂಸ್ಕೃತಿಯ ವಿವೇಚನೆ ಇಲ್ಲ. ಆದರೆ ಉತ್ತರ ಭಾಗದಲ್ಲಿ ಶಾಂಭವದೀಕ್ಷೆ, ಸ್ಥೂಲ–ಸೂಕ್ಷ್ಮ–ಕಾರಣ ಶರೀರಗಳಿಗೆ ಇಷ್ಟಲಿಂಗ, ಭಾವಲಿಂಗಗಳ ಪರಿಕಲ್ಪನೆಯ ಸಂಬಂಧ ತಾತ್ವಿಕವಾಗಿದೆ. ವೀರಶೈವದಲ್ಲಿ ಷಟ್‌ಸ್ಥಲದ ಜ್ಞಾನಮಾರ್ಗವಿದೆ ಅಷ್ಟಾವರಣ, ಪಂಚಾಚಾರ ಗಳ ಆಚರಣೆ ನಿರಂತರವಾಗಿದೆ. ಕರ್ಮ–ಜ್ಞಾನಮಾರ್ಗಗಳ ಸಮನ್ವಯ ವಿದೆ. ಇವುಗಳ ಅನುಷ್ಠಾನದಿಂದ ಪಶುಪ್ರಿಯನಾದ ಜೀವನು ಆಣವ–ಮಾಯಾ–ಕಾರ್ಮಿಕ ಮಲತ್ರಯಗಳಿಂದ ಕೂಡಲೇ ಮುಕ್ತನಾಗುತ್ತಾನೆ. ವೈದಿಕಾಚರಣೆಯ (ವೈದಿಕ ವೀರಶೈವ) ವರ್ಣಾಶ್ರಮ ಧರ್ಮನಿಷ್ಠ. ಇವನು ಶಿವದೇವಾಲಯಗಳಲ್ಲಿ ಸ್ಥಾವರ ಶಿವಲಿಂಗ ಪ್ರತಿಷ್ಠೆ ಮೊದಲಾದ ಕಾರ್ಯ ಗಳಲ್ಲಿ ಆಚಾರ್ಯನಾಗಿ ಪೂಜ್ಯನಾದವನು. (ವೀರಶೈವ ಜಂಗಮರು, ಭಾರತದ ಜ್ಯೋತಿರ್ಲಿಂಗಗಳಲ್ಲೂ, ಶೈವ ದೇವಾಲಯಗಳಲ್ಲೂ ಇಂದಿಗೂ ಅರ್ಚಕರಾಗಿ ಪೂಜ್ಯರಾಗಿದ್ದಾರೆ. ಉದಾ: ಶ್ರೀಶೈಲ–ಕೇದಾರ–ಮಲೆಯ ಮಹದೇಶ್ವರ, ಎಡೆಯೂರು.)

ಇಲ್ಲಿಯವರೆಗೆ ಚಂದ್ರಜ್ಞಾನಾಗಮದ ಶೈವ–ವೀರಶೈವ ಪ್ರಭೇದ ಗಳನ್ನು ನಿರೂಪಿಸಲಾಗಿದೆ. ಲೇಖನದ ಪರಿಮಿತಿಯನ್ನು ಅನುಲಕ್ಷಿಸಿ, ವಿಸ್ತಾರ ವಾದ ವಿವರಣೆಗೆ ಹೋಗದೆ, ಸಂಕ್ಷಿಪ್ತವಾಗಿ, ಬೇರೆ ಬೇರೆ ಆಗಮಗಳಲ್ಲಿ, ಪುರಾಣಗಳಲ್ಲಿ ವಚನಸಾಹಿತ್ಯದಲ್ಲೂ ಶೈವ–ವೀರಶೈವ ಪ್ರಭೇದಗಳನ್ನು ನೋಡಬಹುದಾಗಿದೆ. ಪಾರಮೇಶ್ವರಾಗಮ[೪೦]ದಲ್ಲಿ ವೀರಶೈವಾದಿಭೇದೇನ 'ಶೈವ ಸಪ್ತವಿಧಂ' ಎಂದು ಶೈವದ ಸಪ್ತಪ್ರಭೇದಗಳನ್ನು ತಿಳಿಸುತ್ತದೆ. ವೀರಶೈವ ಮೊದಲುಗೊಂಡು ಅವು ಹೀಗಿವೆ: ಅನಾದಿಶೈವ, ಆದಿಶೈವ, ಅನುಶೈವ, ಮಹಾಶೈವ, ಯೋಗಶೈವ, ಜ್ಞಾನಶೈವ ಎಂದು. ಇದೇ

೩೯. ಚಂದ್ರಜ್ಞಾನಾಗಮ ಕ್ರಿ. ಪಾ. ೧೦, ೫೨, ೫೩.
೪೦. ಪಾರಮೇಶ್ವರ, ಕ್ರಿ. ಪಾ. ೭, ೫, ೨೭.

ಆಗಮದ[೩೧] ಶೈವಮತದ ಶಾಖೆಗಳನ್ನು ಸೋಪಾನಕ್ರಮದಲ್ಲಿ ನಿರೂಪಿಸಲಾಗಿದೆ. ಅವು: ಅನಾದಿಶೈವ, ಆದಿಶೈವ, ಮಹಾಶೈವ, ಯೋಗಶೈವ, ಜ್ಞಾನಶೈವ ಮತ್ತು ವೀರಶೈವ, ಇದೇ ಆಗಮದ[೩೨] ಶುದ್ಧ–ಮಿಶ್ರ–ಮಾರ್ಗ, ಅವಾಂತರ, ಮಹಾಶೈವ, ಅನುಶೈವ, ಅವಾಂತರಶೈವ, ತುರ್ಯಶೈವ (ವೀರಶೈವ) ಲಕ್ಷಣಗಳ ವಿವರಣೆ ಇದೆ.

ಶೈವಾಗಮಗಳಲ್ಲಿ ವೀರಶೈವತತ್ತ್ವವನ್ನು ಸಮ್ಯಕ್ ರೀತಿಯಲ್ಲಿ ಪ್ರತಿಪಾದಿಸುವ ಸೂಕ್ಷ್ಮಾಗಮದಲ್ಲಿ ಶೈವದ ಏಳು ಪ್ರಭೇದಗಳ ನಿರೂಪಣೆ ಇದೆ.[೩೩] ಅವುಗಳು ಹೀಗಿವೆ :

ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಅವಾಂತರಶೈವ, ಪ್ರವರಶೈವ, ಅಂತ್ಯಶೈವ ಎಂದು ಇವುಗಳ ಲಕ್ಷಣಗಳ ನಿರೂಪಣೆಯೂ ಇದೆ. ಪಾಶುಪತಾಗಮದಲ್ಲಿ[೩೪] ಶೈವದಲ್ಲಿ ಎರಡು ವಿಧ : ಶೈವ–ವೀರಶೈವ ಮತ್ತು ಶೈವದಲ್ಲಿ ಅನಾದಿ, ಆದಿ, ಮಹಾ, ಅನು, ಅವಾಂತರ, ಪ್ರವರ ಮತ್ತು ಅಂತ್ಯವೆಂದು ಏಳು ಪ್ರಭೇದಗಳನ್ನು ತಿಳಿಸುತ್ತದೆ. ಸೂಕ್ಷ್ಮಾಗಮದ ಶೈವಶಾಖೆಗಳನ್ನೇ ಈ ಆಗಮವೂ ಉಲ್ಲೇಖಿಸಿದೆ. ಸುಪ್ರಭೇದಾಗಮ[೩೫]ದಲ್ಲಿ ಸಾಮಾನ್ಯ–ಮಿಶ್ರ–ಶುದ್ಧ–ವೀರಶೈವ ಎಂದು ನಾಲ್ಕು ಪ್ರಭೇದಗಳ ವಿವರಣೆ ಇದೆ.

ಆಶ್ಚರ್ಯದ ಸಂಗತಿ ಎಂದರೆ ಎಲ್ಲ ಆಗಮಗಳಿಗಿಂತ 'ವೀರಾಗಮ'ದಲ್ಲಿ ೨೮ ಶೈವಪ್ರಭೇದಗಳ ನಿರೂಪಣೆ ಇದೆ.[೩೬] ೧) ಶುದ್ಧಶೈವ, ೨) ಕ್ರಿಯಾ ಶೈವ, ೩) ರೂಪಶೈವ, ೪) ಮಿಶ್ರಮಾರ್ಗಶೈವ, ೫) ಮಾರ್ದವಶೈವ, ೬) ತಾಂತ್ರ್ಯಶೈವ, ೭) ಉನ್ಮತ್ತಶೈವ, ೮) ಸ್ವರಶೈವ, ೯) ಗುಣಶೈವ, ೧೦) ಬಿಂಬಶೈವ, ೧೧) ಭಕ್ತಶೈವ, ೧೨) ಕರ್ಮ ಕ್ರಿಯಾಶೈವ, ೧೩) ಮಠ ಶೈವ, ೧೪) ಆತಿಥ್ಯಶೈವ, ೧೫) ಲಾಕ್ಷಣಿಕಶೈವ, ೧೬) ವ್ರತಶೈವ,

೩೧. ಪಾರಮೇಶ್ವರ, ಕ್ರಿ. ಪಾ. ೯, ೮೪, ೯೧.
೩೨. ಪಾರಮೇಶ್ವರ ಕ್ರಿ. ಪಾ. ೧೭, ೪, ೨೮.
೩೩. ಸೂಕ್ಷ್ಮಾಗಮ, ೭, ೫, ೬.
೩೪. ಶಿವಾಗಮ ಸೌರಭ, ಪುಟ–೬೩.
೩೫. ಅದೇ ಪುಟ–೫೭.
೩೬. ವೀರಾಗಮ, ಕನ್ನಡ ಟೀಕೆ, ೧, ೫೬.

೧೭) ಪಾಕಕ್ರಿಯಾಶೈವ, ೧೮) ಅನುಕೂಲಶೈವ, ೧೯) ಪ್ರತಿಕೂಲಶೈವ, ೨೦) ಕರಶೈವ, ೨೧) ವಿಭೂತಿಶೈವ, ೨೨) ದೀಕ್ಷಾಶೈವ, ೨೩) ಮಂತ್ರಶೈವ, ೨೪) ಆಚಾರಶೈವ, ೨೫) ಜಾತಿಶೈವ, ೨೬) ಕ್ರಿಯೋಪಾಧಿಶೈವ, ೨೭) ಭೋಗಶೈವ ಮತ್ತು ೨೮) ಮಹಾತ್ಮ್ಯಶೈವ ಎಂಬ ಭೇದಗಳು ಶಿವ ಸಮಯ, ಶಿವಾಚಾರ, ಶಿವಪಥಗಳೆನಿಸಿವೆ.[೩೭]

ಎಲ್ಲ ಆಗಮಗಳಿಗಿಂತ ಹೆಚ್ಚು ಶೈವಪ್ರಭೇದಗಳನ್ನು ತಿಳಿಸುವ 'ವೀರಾಗಮ' ಅದು ಅನ್ವರ್ಥಕವಾಗಿ, ವೀರಶೈವಾಗಮವಾಗಿ ಕೀರ್ತಿತವಾಗಿದೆ. ಇಪ್ಪತ್ತೆಂಟು ಶಿವಾಗಮಗಳಲ್ಲಿ ವೀರಶೈವಾಚಾರವನ್ನು ಪ್ರತಿಪಾದಿಸುವ ಪೂರ್ವಭಾಗಗಳು ಈಗ ನಮಗೆ ದೊರೆಯುತ್ತಿಲ್ಲ. ಕಿರಣ–ಕಾರಣ–ಸೂಕ್ಷ್ಮ ಮಕುಟ, ಪಾರಮೇಶ್ವರ, ಚಂದ್ರಜ್ಞಾನಾಗಮ, ವಾತುಲ ಮತ್ತು ವೀರಾಗಮಗಳ ಉತ್ತರ ಭಾಗಗಳು ನಮಗೆ ದೊರಕುತ್ತವೆ. ಅಲ್ಲೂ ಶೈವಭೇದಗಳನ್ನು ಸಕ್ರಮವಾಗಿ ವಿವರಿಸಿಲ್ಲ. ಕೆಲವು ಆಗಮಗಳು ಸಾಂದರ್ಭಿಕವಾಗಿ ಹೇಳುತ್ತವೆ.

## ಪುರಾಣಗಳಲ್ಲಿ ಶೈವಪ್ರಭೇದಗಳು :

ಶಿವಪುರಾಣ, ಸ್ಕಾಂದಪುರಾಣ ಹಾಗೂ ಲಿಂಗಪುರಾಣಗಳಲ್ಲಿ ಶೈವ ಪ್ರಭೇದಗಳ ಪ್ರಸ್ತಾಪವಿಲ್ಲ. ಆದರೆ ಕೂರ್ಮಪುರಾಣದಲ್ಲಿ 'ವೈದಿಕ, ತಾಂತ್ರಿಕ ಹಾಗೂ ಮಿಶ್ರವೆಂದು ಮೂರು ಪ್ರಕಾರದ ಉಲ್ಲೇಖವಿದೆ. ವಾಮನ ಪುರಾಣದಲ್ಲಿ ಶೈವ, ಪಾಶುಪತ, ಕಾಳಾಮುಖ, ಕಾಪಾಲವೆಂದು ನಾಲ್ಕು ಶೈವಪ್ರಭೇದಗಳ ವಿವರಣೆ ಇದೆ. ಮಹಾಭಾರತದ ಶಾಂತಿಪರ್ವದಲ್ಲಿ ''ಸಾಂಖ್ಯಂ ಯೋಗಂ ಪಾಂಚರಾತ್ರಂ ವೇದಾಃ ಪಾಶುಪತಸ್ತಥಾ'' ಎನ್ನುವ ಉಕ್ತಿಯನ್ನು ಗಮನಿಸಿದಾಗ ಐದು ಪ್ರಭೇದಗಳ ವಿಚಾರ ತಿಳಿದುಬರುತ್ತದೆ. ಶೈವಶಾಖೆಯ 'ಪಾಶುಪತ'ದ ಹೆಸರು ಇಲ್ಲಿ ಬರುವುದರಿಂದ ಶೈವಶಾಖೆಗಳಲ್ಲಿ ಇದು ಪ್ರಾಚೀನವೆಂದು ತಿಳಿದು ಬರುತ್ತದೆ.[೩೮]

---

೩೭. ಶೈವಾಗಮಗಳಲ್ಲಿ ವೀರಶೈವ, ಪುಟ–೧೬೫–೧೬೬.

೩೮. ''ಹಿಂದುತ್ವ'', ರಾಮದಾಸಗೌಡ, ವಾರಾಣಸಿ, ಪುಟ–೬೮೮–೬೯೨.

ಶಾಸನಗಳಲ್ಲಿ ಶೈವಪ್ರಭೇದಗಳು :

ಕ್ರಿ.ಶ. ೧೨೬೧ರ ಆಂಧ್ರದ ಮಲ್ಕಾಪುರದ ಶಾಸನಗಳಲ್ಲಿ ಪಾಶುಪತ, ಶಾಲನಲ, ಶಿವಶಾಸನ, ಶೈವ ಎಂಬ ಪ್ರಭೇದಗಳ ಉಲ್ಲೇಖವಿದ್ದರೆ, ತ್ರಿಪುರಾಂತಕ ಶಾಸನ (ಕ್ರಿ.ಶ. ೧೨೪೦) ವೀರವ್ರತ, ಮಹೇಶ್ವರ, ಶೈವ, ಪಾಶುಪತ, ಮಹಾವ್ರತ, ಕಾಳಾಮುಖ, ವಿಮಲ, ಭೈರವ, ಕಾಪಾಲಿಕವೆಂಬ ಒಂಬತ್ತು ಪ್ರಭೇದಗಳನ್ನು ತಿಳಿಸುತ್ತದೆ.[೩೯]

ವಚನವಾಙ್ಮಯದಲ್ಲಿ ಶೈವಪ್ರಭೇದಗಳು :

ಕನ್ನಡದ ವಚನಕಾರರು, ಶೈವಪ್ರಭೇದಗಳನ್ನು ಬೇರೊಂದು ರೀತಿಯಲ್ಲಿ ತಿಳಿಸುತ್ತಾರೆ. ಅಕ್ಕಮಹಾದೇವಿ ಜಾತಿಶೈವ–ಅಜಾತಿಶೈವರೆಂದು ಎರಡು ಬಗೆಗಳನ್ನು ಹೆಸರಿಸುತ್ತಾಳೆ. ಇಲ್ಲಿ ಜಾತಿಶೈವರು ಫಲಕಾಮರಾಗಿ ಪೂಜೆ ಮಾಡುತ್ತಾರೆ. ಅಜಾತಿಶೈವರು ಗುರು–ಲಿಂಗ–ಜಂಗಮಕ್ಕೆ ತನು–ಮನ–ಧನಗಳನ್ನು ಅರ್ಪಿಸುತ್ತಾರೆ. ಅಂದರೆ ಅಜಾತಿಶೈವರು ವೀರಶೈವರನ್ನು, ಜಾತಿಶೈವರು ಉಳಿದ ಶೈವರನ್ನು ಸೂಚಿಸುತ್ತದೆ.[೪೦] ಈ ಜಾತಿಶೈವರನ್ನು ಚನ್ನಬಸವಣ್ಣ ಭವಿಶೈವರೆಂದು ಕರೆದಿದ್ದಾನೆ.[೪೧] ಮೋಳಿಗೆ ಮಾರಯ್ಯ ಶುದ್ಧಶೈವ ; ಪೂರ್ವಶೈವ ; ಮಾರ್ಗಶೈವ ಮತ್ತು ಆದಿಶೈವಗಳನ್ನು ಹೇಳುತ್ತಾನೆ.[೪೨] ಆದಯ್ಯನು ಶುದ್ಧ–ಮಿಶ್ರ–ಸಂಕೀರ್ಣ–ಪೂರ್ವ–ಮಾರ್ಗಶೈವಗಳನ್ನು ಹೆಸರಿಸುತ್ತಾನೆ. ಈ ಶೈವಮತಗಳು ಕರ್ಮ ಭಕ್ತಿಯನ್ನು ಹೇಳುತ್ತವೆ. ನಿರ್ಮಲ ಭಕ್ತಿಯನ್ನಲ್ಲ ಎನ್ನುತ್ತಾನೆ.

ದೇಹದ ಮೇಲಿನ ಲಿಂಗವನ್ನು ಕೆಲವೊಮ್ಮೆ ಧರಿಸಿ, ಮತ್ತೆ ಕೆಲವು ವೇಳೆ ತೆಗೆದಿರಿಸುವವನು ಶುದ್ಧಶೈವ. ಬ್ರಹ್ಮ–ವಿಷ್ಣು–ರುದ್ರರನ್ನು ಒಂದೇ ಎಂದು ಭಾವಿಸುವವನು ಮಿಶ್ರಶೈವ. ಶಿವನನ್ನೇ ಶ್ರೇಷ್ಠನೆಂದು ಭಾವಿಸಿದರೂ ಇತರ ದೈವಗಳನ್ನು ಪೂಜಿಸುವವನೇ 'ಸಂಕೀರ್ಣಶೈವ'. ದೂರದಿಂದ ನಮಸ್ಕರಿಸಿ,

೩೯. ವಿಶ್ವಪ್ರಭೆ ಮೂರು ಸಾವಿರ ಮಠ, ಹುಬ್ಬಳ್ಳಿ, ಪುಟ–೭೬

೪೦. ಅಕ್ಕನ ವಚನಗಳು, ಎಲ್. ಬಸವರಾಜು, ವಚನ–೨೪೮

೪೧. ಚನ್ನಬಸವಣ್ಣನವರ ವಚನಗಳು, ಆರ್. ಸಿ. ಹಿರೇಮಠ ವಚನ–೪೬೬

೪೨. ಮೋಳಿಗೆಮಾರಯ್ಯ, ರಾಣಿ ಮಹಾದೇವಿ ವಚನಗಳು–ಉತ್ತಂಗಿ ಚನ್ನಪ್ಪ ಪುಟ–೪೭

ನೈವೇದ್ಯ ಮಾಡಿದರೂ ಶೇಷವನ್ನು ಭುಂಜಿಸದಿರುವವನು 'ಪೂರ್ವಶೈವ'ನೆಂದು ವಿವರಣೆ ನೀಡುತ್ತಾನೆ. ಇಲ್ಲಿ ಮೊದಲು ನಾಲ್ಕು ಪ್ರಭೇದಗಳ ವಿವರಣೆ ನೀಡಿ, ಮಾರ್ಗಶೈವದ ಬಗ್ಗೆ ಏನೂ ತಿಳಿಸುವುದಿಲ್ಲ. ಕಾರಣ ತಿಳಿಯದು.[೪೩]

ಚೆನ್ನಬಸವಣ್ಣ ಶೈವ–ಜಡಶೈವ–ಭವಿಶೈವ–ಶುದ್ಧಶೈವ ಎಂದು ನಾಲ್ಕು ಶಾಖೆಗಳನ್ನು ತಿಳಿಸುತ್ತಾನೆ. ಪ್ರಸಾದಿ ಭೋಗಣ್ಣ 'ಶೈವನಾರು ವೀರಶೈವ ಮೂರು' ಎಂದು ಹೇಳುತ್ತಾನೆ. ಶೈವ ಆರು ಯಾವುವು ? ಮೂರು ವೀರಶೈವ ಯಾವುವು ? ಅವುಗಳ ವಿವರಣೆ ಕೊಟ್ಟಿಲ್ಲ. ಅರಿವಿನ ಮಾರಿತಂದೆಯ ವಚನವೊಂದರಲ್ಲಿ ಶೈವಪ್ರಭೇದಗಳ ಶಾಖೆಗಳಿಗೆ ಗುರುವಾದವನು ಅನುಸರಿಸಬೇಕಾದ ನಿಯಮವನ್ನು ತಿಳಿಸುವ ವಿಚಾರವಿದೆ. ೧) ವೀರಶೈವ ಗುರುವಾಗಿ ಶುದ್ಧಶೈವಕ್ಕೆ ಹೊರಗಾಗಿರಬೇಕು, ೨) ಶುದ್ಧಶೈವ ಗುರುವಾಗಿ ಮಾರ್ಗಶೈವಕ್ಕೆ ಹೊರಗಾಗಿರಬೇಕು, ೩) ಮಾರ್ಗಶೈವ ಗುರುವಾಗಿ ಪೂರ್ವಶೈವಕ್ಕೆ ಹೊರಗಾಗಿರಬೇಕು. ಇಂತೀ ಶೈವಂಗಳಲ್ಲಿ ಸನ್ನದ್ಧವಾಗಿ ತಿಳಿದು, ಅಂಗ–ಲಿಂಗ ಆತ್ಮದಲ್ಲಿ ನಿಂದು ಸಂಯೋಗ ಮಾಡಬೇಕು. ಮಾಡಿದಲ್ಲಿ ಕೂಡಿದ ಕಾರಣ, ವೀರಶೈವವೆಂಬ ಹೆಸರಾಯಿತ್ತೆ ಸದಾಶಿವಲಿಂಗವನರಿತಲ್ಲಿ. ೧೨ನೇ ಶತಮಾನದ ಆಂಧ್ರದ ಶಾಸನಗಳಲ್ಲಾಗಲೀ, ವಚನಕಾರರಾಗಲಿ, ಪುರಾಣಗಳಲ್ಲಾಗಲೀ, ಶೈವಾಗಮಗಳಲ್ಲಿ ಕಂಡಬರುವ ಶೈವಶಾಖೆಗಳನ್ನೇ ಅಲ್ಪ–ಸಲ್ಪ ನಾಮಾಂತರಗಳಿಂದ ಉಲ್ಲೇಖಿಸಿದ್ದಾರೆಂದು ಭಾವಿಸಬಹು ದಾಗಿದೆ.

ಕೊನೆಯದಾಗಿ ಧರ್ಮ ಒಂದು ಭೌತಿಕ ವಸ್ತುವಲ್ಲ. ಅದು ಭಾವನೆಗಳ ಸಮುದಾಯ ನಂಬಿಕೆ, ಆಚಾರ ವಿಚಾರಗಳ ಕಂತೆ. ಇದು ಎಲ್ಲ ಕಾಲಕ್ಕೂ ಒಂದೇ ರೀತಿಯಾಗಿರುವುದಿಲ್ಲ. ಕಾಲಕಾಲಕ್ಕೆ ಸನ್ನಿವೇಶ–ಸಂದರ್ಭಕ್ಕನುಗುಣವಾಗಿ ಬದಲಾಗುತ್ತಿರುತ್ತದೆ. ಒಂದು ಕಾಲಕ್ಕೆ ಧರ್ಮಕ್ಕೊಂದು ಹೆಸರು ಅಂಕಿತವಾಗಿ ಬರುತ್ತದೆ. ಅನ್ವರ್ಥಕವಾಗಿಯೂ ಬರಬಹುದು; ಮುಂದೆ ಆ ಧರ್ಮದ ಸ್ವರೂಪ ಬದಲಾದಾಗಲೂ, ವಿಕೃತವಾದಾಗಲೂ ಅದೇ ಹೆಸರು ಮುಂದುವರಿಯುತ್ತದೆ. ಇದು ಜಗತ್ತಿನ ಎಲ್ಲ ಧರ್ಮಗಳಿಗೂ ಅನ್ವಯಿಸುವ ಮಾತು.

---

೪೩. ಆದಯ್ಯ ವಚನಗಳು, ಉತ್ತಂಗಿ ಚೆನ್ನಪ್ಪ ಪುಟ–೪೫–೪೬.

ಶೈವಸಂಪ್ರದಾಯದ ಅನೇಕ ಶಾಖೋಪಶಾಖೆಗಳು (Divisions and Subdivisions) ಈಗ ನಾಮಾವಶೇಷವಾಗಿವೆ. ಶಿವಲಿಂಗ ಪೂಜೆಯ ಕೆಲವು ಪದ್ಧತಿಗಳು ಈಗ ಪ್ರಚಲಿತವಾಗಿಲ್ಲ, ಲುಪ್ತವಾಗಿವೆ. ಆರು ಹೊತ್ತು ಪೂಜೆ ಮಾಡುವ ಇಷ್ಟಲಿಂಗಪೂಜಾ ವ್ರತದ ಮಾರ್ಗಶೈವರು ಈಗ ಕಂಡು ಬರುವುದಿಲ್ಲ. ಮದುವೆಯಾಗದ ಕನ್ಯೆಯಿಂದ ಹುಟ್ಟಿದವರು ಸಮಾಜದಲ್ಲಿ ದೇವಾಲಯಗಳಲ್ಲಿ ಅವರ ಸ್ಥಾನಮಾನಗಳನ್ನು ತಿಳಿಸುವ ಪೂರ್ವ 'ಶೈವಪದ್ಧತಿ' ಎಲ್ಲೂ ಕಂಡುಬರುವುದಿಲ್ಲ. ಆದರೆ ಇವೆಲ್ಲ ಇಂದು ಒಂದು ಧರ್ಮದ ಇತಿಹಾಸ, ಸಮಾಜಶಾಸ್ತ್ರ, ನಂಬಿಕೆ–ನಡವಳಿಕೆ, ಪೂಜಾಪದ್ಧತಿಯ ದೇವತಾಶಾಸ್ತ್ರಗಳ ಅಧ್ಯಯನದ ವಿಷಯಗಳಾಗುತ್ತವೆ. ಆಗಮಗಳಲ್ಲಿ ಅನೇಕ ಶೈವಪ್ರಭೇದಗಳ ಸಮಗ್ರ ವಿವರಣೆ ಕಂಡುಬರುವುದಿಲ್ಲ. ಕೇವಲ ಹೆಸರುಗಳು ಮಾತ್ರ ಇವೆ. ಸೋಮ–ಲಾಕುಳ ಪ್ರಭೇದಗಳ ಸ್ಪಷ್ಟ ವಿವರಣೆ ಕಂಡುಬರುವುದಿಲ್ಲ. ಬ್ರಾಹ್ಮಣ – ಕ್ಷತ್ರಿಯ – ವೈಶ್ಯ – ಶೂದ್ರರೂ ಹಾಗೂ ಇತರರು ಲಿಂಗಧಾರಣೆಯಿಂದ ಶೈವ (ವೀರಶೈವ)ರಾಗುವ ಅವಕಾಶ ಶೈವಧರ್ಮದಲ್ಲಿದೆ.

(ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಯೇಚಾನ್ಯಜಾತಯಃ ಲಿಂಗಧಾರಣ ಮಾತ್ರೇಣ ಶಿವ ಏವ ನ ಸಂಶಯಃ.)

ಸಾಮಾಜಿಕವಾಗಿ ಹಿಂದುಳಿದ ಕೀಳುಜಾತಿಯವರನ್ನು ಶಿವಭಕ್ತರನ್ನಾಗಿ ಮಾಡುವ, ಅವರೆಲ್ಲ ಪವಿತ್ರಾತ್ಮರಾಗಿ ಸರ್ವಸಮಾನತೆಯಿಂದ ಬಾಳುವ ಅಧಿಕಾರ, ಆತ್ಮಗೌರವ, ಶೈವಧರ್ಮದಲ್ಲಿದೆ. ಇದೇ ಮಾತು ವೀರಶೈವಕ್ಕೂ ಅನ್ವಯವಾಗುತ್ತದೆ. ಇಷ್ಟಲಿಂಗಧಾರಿಯಾಗಿ ಶಿವಭಕ್ತನಾದರೂ ಸಾಕು ಯಾರೇ ಆಗಲಿ ಅವನು ಅನಾಯಾಸವಾಗಿ ಭವಸಾಗರ ದಾಟುತ್ತಾನೆ. (''ಭಕ್ತಿಮಾತ್ರೇಣ ದುಃಖಾಂಬುಧಿಂ ತರೇತ್'' ಪಾರಮೇಶ್ವರಾಗಮ).

ಶಿವಸಾಯುಜ್ಯದಾಯಕವಾದ ಅಲ್ಪಕ್ರಿಯಾ, ಬಹುಫಲದಾಯಕವಾದ ವೀರಶೈವ ಧರ್ಮಕ್ಕೆ ಸಮಾನವಾದ ಧರ್ಮ ಜಗತ್ತಿನಲ್ಲಿಯೇ ಇಲ್ಲವೆಂದು (ನ ವೀರಶೈವ ಸದೃಶಂ ಮತಮಸ್ತಿ ಜಗತ್ರಯೇ) ವೀರಶೈವಧರ್ಮದ ವೈಶಿಷ್ಟ್ಯ ವನ್ನು ಪಾರಮೇಶ್ವರಾಗಮವೇ ಸಾರಿ ಹೇಳುತ್ತದೆ.

## ಸಹಾಯಕ ಸಾಹಿತ್ಯ


೧. ಚಂದ್ರಜ್ಞಾನಾಗಮ – ಸೂಕ್ಷ್ಮಾಗಮ – ಪಾರಮೇಶ್ವರಾಗಮ– ಕಿರಣಾಗಮ – ಮಕುಟಾಗಮಗಳು. ಶೈವಭಾರತೀ ಶೋಧ ಪ್ರತಿಷ್ಠಾನಮ್, ಜಂಗಮವಾಡೀಮಠ, ವಾರಾಣಸಿ.

೨. ಶೈವಾಗಮಗಳಲ್ಲಿ ವೀರಶೈವ ಸಂ: ಡಾ. ಎಂ. ಶಿವಕುಮಾರ ಸ್ವಾಮಿ.

೩. ಶಿವಾಗಮ ಸೌರಭ ಸಂ: ಎಂ. ಜಿ. ನಂಜುಂಡಾರಾಧ್ಯ.

೪. ವೀರಶೈವಾಗಮ ಪ್ರಯೋಗರತ್ನಂ ಸಂ: ಎಂ. ಜಿ. ನಂಜುಂಡಾರಾಧ್ಯ.

೫. ವೈಷ್ಣವ–ಶೈವ ಔರ್ ಅನ್ಯಧಾರ್ಮಿಕಮತ (ಹಿಂದಿ) : ರಾಮಕೃಷ್ಣ ಗೋಪಾಲ ಭಂಡಾರಕರ.

೬. ಭಾರತೀಯ ಸಂಸ್ಕೃತಿ ದರ್ಶನ ಸಂ : ಅ. ನ. ಕೃಷ್ಣರಾಯ.

೭. ದರ್ಶನ–ದಿಗ್ದರ್ಶನ (ಹಿಂದಿ) ರಾಹುಲ ಸಾಂಕೃತ್ಯಾಯನ

೮. ಯುಗಯಾತ್ರಿ ಭಾರತೀಯ ಸಂಸ್ಕೃತಿ (ಸಂ–೪)

೯. ವಚನಗಳಲ್ಲಿ ಶೈವ ಹಾಗೂ ವೀರಶೈವ ಡಾ. ಜಯಶ್ರೀ ದಂಡೆ

೧೦. ವೀರಶೈವ ಉಗಮ ಮತ್ತು ಪ್ರಗತಿ –ಟಿ. ಎನ್. ಮಲ್ಲಪ್ಪ

೧೧. ಕಲ್ಯಾಣ 'ಶಿವಾಂಕ' –ಗೋರಖಪುರ

೧೨. ವಿಶ್ವಪ್ರಭೆ –ಸಂ : ಜಿ. ಹೆಚ್. ಹನ್ನೆರಡುಮಠ

೧೩. The Saivagamas- M. Arunachalam.

೧೪. 'ಹಿಂದುತ್ವ' (ಹಿಂದಿ) ರಾಮದಾಸಗೌಡ, ವಾರಣಾಸಿ.

೧೫. An out line of history of Saiva Philosophy- Kanti Chandra Panday.

೧೬. ಆಗಮ ಪರಿಜ್ಞಾನ – ವಿದ್ಯಾವಾಚಸ್ಪತಿ ಶಂಭುಲಿಂಗ ಶಿವಾಚಾರ್ಯ.


■■

## ಶೈವಾಗಮ ಹಾಗೂ ವಚನ ವಾಙ್ಮಯದಲ್ಲಿ ಗುರು–ಶಿಷ್ಯ ಸಂಬಂಧದ ಪರಿಕಲ್ಪನೆ

ಭಾರತೀಯ ಸಂಸ್ಕೃತಿಯಲ್ಲಿ ಗುರುವಿಗೆ ಪ್ರಥಮ ಸ್ಥಾನವಿದೆ. ಜಗತ್ತಿನ ಎಲ್ಲ ಧರ್ಮಗಳಲ್ಲೂ ಗುರುವಿಗೆ ಮಹೋನ್ನತವಾದ ಗೌರವವಿದೆ. ಭಾರತದಲ್ಲಂತೂ ಗುರು, ಬ್ರಹ್ಮ–ವಿಷ್ಣು–ಮಹೇಶ್ವರ ಸ್ವರೂಪನಾಗಿದ್ದಾನೆ. ಅಷ್ಟೇ ಅಲ್ಲ, ಸಾಕ್ಷಾತ್ ಪರಬ್ರಹ್ಮನೆನ್ನುವ ಉದಾತ್ತ ಪರಿಕಲ್ಪನೆಯಿದೆ. ಗುರುಗಳಲ್ಲಿ ಎರಡು ವಿಧ ಎಂದು ಹೇಳುತ್ತಾರೆ. ಜ್ಞಾನಗುರು ಹಾಗೂ ಆಧ್ಯಾತ್ಮ ಗುರು. ಜ್ಞಾನಗುರು ಜ್ಞಾನ ಕ್ಷೇತ್ರದಲ್ಲಿ ನಮ್ಮನ್ನು ಪರಿಣತರನ್ನಾಗಿ ಮಾಡಿದರೆ, ಆಧ್ಯಾತ್ಮ ಗುರು ಜೀವನದ ಕಲೆಯನ್ನು ಕಲಿಸುತ್ತಾರೆ. ''ಆಧ್ಯಾತ್ಮ ವಿದ್ಯಾ ವಿದ್ಯಾನಾಂ''–ಎಂದು ಗೀತೆ ಹೇಳುತ್ತದೆ. ಜೀವನವನ್ನು ದೋಷರಹಿತ ವನ್ನಾಗಿ ಮಾಡುವುದು ಆಧ್ಯಾತ್ಮ ಗುರುವಿನ ಕೆಲಸ.

ಯುದ್ಧ ಶಾಸ್ತ್ರವನ್ನು ಯೋಧರಿಂದ ಕಲಿಯುವುದು ಸಾಧ್ಯ. ಆದರೆ ನಮ್ಮ ಅಂತರಂಗದ ಕಾಮ–ಕ್ರೋಧ–ಮದ–ಮತ್ಸರಗಳೆಂಬ ವೈರಿ ಗಳೊಂದಿಗೆ ಕಾದಾಡಲು ಆಧ್ಯಾತ್ಮ ಗುರು ಕಲಿಸುತ್ತಾರೆ. ಜಗತ್ತಿನ ಎಲ್ಲ ಧರ್ಮಗಳಲ್ಲೂ ಗುರುವಿಗೆ ಅಗ್ರಸ್ಥಾನ. ಭಾರತೀಯರ ಪ್ರಾಚೀನ ಸಾಹಿತ್ಯ ವಾದ ಋಗ್ವೇದದಲ್ಲಿಯೇ ''ಆಚಾರ್ಯ ದೇವೋ ಭವ'' ಎನ್ನುವ ಉಕ್ತಿ ಯನ್ನು ಕಾಣುತ್ತೇವೆ. ತೈತ್ತಿರೀಯ ಉಪನಿಷತ್ತು– ''ಆಚಾರ್ಯ ಪೂರ್ವ ರೂಪಂ, ಅಂತೇವಾ ಉತ್ತರರೂಪಂ'' ಅಂದರೆ ಆಚಾರ್ಯ ಪೂರ್ವರೂಪ, ಶಿಷ್ಯ ಉತ್ತರರೂಪ'' –ಇಬ್ಬರ ಅನುಸಂಧಾನ ಆತ್ಮವಿದ್ಯೆ ಎಂದು ತಿಳಿಸುತ್ತದೆ.

ಗೃ–ನಿಗರಣೆ ಎಂಬ ಧಾತುವಿನಿಂದ ನಿಷ್ಪನ್ನವಾದ ಗುರು ಶಬ್ದಕ್ಕೆ ಬೃಹಸ್ಪತಿಯಿಂದ ಹಿಡಿದು ಆಚಾರ್ಯ, ಉಪಾಧ್ಯಾಯ, ಸಂಪ್ರದಾಯ ಪ್ರವರ್ತಕ, ಉಪದೇಶಕ, ಆತ್ಮವಿದ್ಯೋಪದೇಶಕ, ಪೂಜ್ಯ, ತಂದೆ, ಭಾರವಾದ, ದೊಡ್ಡದಾದ, ಒಂದು ಗ್ರಹ, 'ಪುಷ್ಯ' ನಕ್ಷತ್ರ, 'ಪುರೋಹಿತ'

ಹಾಗೂ 'ಪರಮಾತ್ಮ' ಇತ್ಯಾದಿ ಸುಮಾರು ಇಪ್ಪತ್ತಕ್ಕಿಂತ ಹೆಚ್ಚು ಅರ್ಥಚ್ಛಾಯೆಗಳನ್ನು ಶಬ್ದಾರ್ಥ ಕೌಸ್ತುಭ ನಿಘಂಟು (ಭಾಗ-II, ಪು. ೩೫೩) ತಿಳಿಸುತ್ತದೆ. 'ಗು'–ಕಾರ ಅಜ್ಞಾನದ ಕತ್ತಲೆಯನ್ನು 'ರು'–ಕಾರ ಎಂದರೆ ಕಳೆಯುವ ಅಥವಾ ನಿವಾರಿಸುವ ಬೆಳಕು ಎನ್ನುವ ಗುರು ಶಬ್ದದ ನಿರುಕ್ತಿ ಅನ್ವರ್ಥಕವಾಗಿದೆ. (ಗುಣಾತಿ–ಉಪದಿಶತಿ–'ಗು' ಶಬ್ದೆ) ಎಂದು ನಿಘಂಟು ನಿರ್ವಚಿಸುತ್ತದೆ.

ಮನುಷ್ಯ ವರ್ಗದಲ್ಲಿ ಮಾತ್ರ ಗುರುವಿಗೆ ಮಹತ್ವದ ಸ್ಥಾನ ಮೀಸಲಾಗಿದೆ. ಪ್ರಾಣಿ ವರ್ಗದಲ್ಲಿ ಗಂಡ–ಹೆಂಡತಿ, ತಾಯಿ–ಮಕ್ಕಳ ತಾತ್ಕಾಲಿಕ ಸಂಬಂಧವನ್ನು ಕಾಣುತ್ತೇವೆ. ಆದರೆ, ಅಲ್ಲಿ ಗುರು–ಶಿಷ್ಯ ಸಂಬಂಧ ವಿಲ್ಲ. ಗುರುವೆಂದರೆ ಕೇವಲ ಶಿಕ್ಷಕನೂ ಅಲ್ಲ; ಆಚಾರ್ಯನೂ ಅಲ್ಲ. ಶಿಕ್ಷಕರಾಗಲೀ, ಆಚಾರ್ಯರಾಗಲೀ ಒಂದು ವಿಶಿಷ್ಟವಾದ ಜ್ಞಾನವನ್ನು ಮಾತ್ರ ಕೊಡುತ್ತಾರೆ. ಆದರೆ ಗುರು ಜ್ಞಾನದೊಡನೆ, ನಮ್ಮನ್ನು ಬೆಸೆಯುತ್ತಾನೆ. ''ಗುರೋಸ್ತು ಮೌನಂ ವ್ಯಾಖ್ಯಾನಂ'' ಆಗಿ ಶಿಷ್ಯನ ಸಂಶಯ ನಿವಾರಣೆಯಾಗುತ್ತದೆ. ಗುರು ಸಾನ್ನಿಧ್ಯದಲ್ಲಿ ಮಾತನಾಡದೆಯೇ ಗುರುಗಳು ಕಲಿಸುತ್ತಾರೆ–ಶಿಷ್ಯ ಅರಿತುಕೊಳ್ಳುತ್ತಾನೆ. ''ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ'' ಜ್ಞಾನವನ್ನು ಪ್ರಣಾಮದಿಂದ, ಪ್ರಶ್ನಿಸುವುದರಿಂದ ಸೇವೆಯಿಂದ ಪಡೆದುಕೊಳ್ಳಬೇಕಾಗುತ್ತದೆ. ಶಿಕ್ಷಣದಿಂದ ದೊರೆಯುವ ಜ್ಞಾನ ಪರಿಶ್ರಮದಿಂದ ಮಾತ್ರ ಸಾಧ್ಯ. ಗುರುವಿನಿಂದ ಪಡೆಯುವ ಜ್ಞಾನಕ್ಕೆ ವಿನಯ ಹಾಗೂ ಶ್ರದ್ಧೆ ಜ್ಞಾನ ಪಿಪಾಸೆ ಅತ್ಯಾವಶ್ಯಕ. ಬಾವಿಯಲ್ಲಿ ಬೇಕಾದಷ್ಟು ನೀರಿದೆ, ಆದರೆ ಕೊಡವು ಬಾಗದಿದ್ದರೆ ನೀರಿನ ಒಂದು ಹನಿಯೂ ಕೊಡವನ್ನು ಸೇರುವುದಿಲ್ಲ. ಅಂದರೆ ಜ್ಞಾನವನ್ನು ಪಡೆಯಲು ವಿನಯ ವಿಧೇಯತೆಗಳು ಅನಿವಾರ್ಯ.

ಗುರುಗಳೆಂದರೆ ಅನಂತಜ್ಞಾನವನ್ನು ಪಡೆಯುವ ವಿಧಾನವನ್ನು ತಿಳಿಸಿಕೊಡುವವರು. ಜ್ಞಾನ ಅನಂತ ಸಾಗರ ''ನನ್ನ ಜ್ಞಾನ ಸಿಂಧುವಿನಲ್ಲಿ ಒಂದು ಬಿಂದುವಿನಷ್ಟು ಇದೆ'' ಎಂದು ನ್ಯೂಟನ್ ಹೇಳಿದರೆ, ''ನನಗೆ ಏನೂ ತಿಳಿಯುವುದಿಲ್ಲ ಇದಿಷ್ಟೇ ನನಗೆ ತಿಳಿದಿದೆ'' ಎಂದು ಸಾಕ್ರಟಿಸ್ ಹೇಳುತ್ತಾನೆ. ಗುರು ಎನ್ನುವ ವಸಂತ ಸುಳಿದಾಗ ಪ್ರಕೃತಿಯಲ್ಲಿ ದೈವೀಪ್ರಭಾವ ಹರಡುತ್ತದೆ. ಯಾರ ಹೃದಯದಲ್ಲಿ ದ್ವೇಷಗಳಿಲ್ಲವೋ, ಯಾರ ಹೃದಯದಲ್ಲಿ ಆಶೆ–

ಆಮಿಷಗಳಿಲ್ಲವೋ, ಅವನೇ ಮಹಾಗುರು. ಗುರು ನಮ್ಮ ಬದುಕಿನಲ್ಲಿ ಪ್ರವೇಶಿಸಿದರೆ, ದೈವೀಚಿಂತನ, ಅನುಸಂಧಾನ ಆರಂಭವಾಗುತ್ತದೆ. ನಮ್ಮ ದೇಶದಲ್ಲಿ ಅಷ್ಟೇ ಅಲ್ಲ, ಪಾಶ್ಚಿಮಾತ್ಯ ರಾಷ್ಟ್ರಗಳಲ್ಲೂ ವಿಶೇಷವಾಗಿ ಗ್ರೀಸ್ ದೇಶದಲ್ಲಿಯೂ, ಗುರುವಿಗೆ ತುಂಬಾ ಗೌರವವಿರುವುದನ್ನು ಕಾಣುತ್ತೇವೆ.

ಅಲೆಗ್ಸಾಂಡರ್ ಬಹಳ ಶೂರ. ಸಮಸ್ತ ಜಗತ್ತನ್ನು ಗೆಲ್ಲುವ ಆಕಾಂಕ್ಷೆ ಹೊಂದಿದ್ದ. ಒಂದು ದಿನ ಅವನನ್ನು ಒಬ್ಬಾತ ಪ್ರಶ್ನಿಸಿದ–''ಅಲೆಗ್ಸಾಂಡರ್ ಪ್ರಭುಗಳೇ, ನಿಮ್ಮ ಗುರುಗಳಾದ ಅರಿಸ್ಟಾಟಲ್‌ರಿಗೆ ಅಷ್ಟೊಂದು ಗೌರವ ಕೊಡುತ್ತಿರಲ್ಲ. ಏಕೆ ? ನಿಮ್ಮ ತಂದೆ (ಫಿಲಿಪ್ಸ್) ಮಹಾರಾಜರು ಆದರೂ ನಿಮ್ಮ ಗುರುವಿಗೇಕೆ ಅಷ್ಟೊಂದು ಗೌರವ ? ಎಂದು. ಅದಕ್ಕೆ ಅಲೆಗ್ಸಾಂಡರ್ ಹೇಳುತ್ತಾನೆ–

"I obtained from my father a body, a life perishable but from my preceptor I obtained the life imperishable. My father brought me to the earth from the heaven and my preceptor Aristotle took me from this earth to the heaven"–ಎಂದು. (ಶರೀರಮೇವಾಸ್ಯ ಮಾತಾ ಪಿತರೌ ಜನಯತ । ಆಚಿಮನಃ ಬ್ರಹ್ಮಸ್ಸೋ ರೂಪಂ) (ಆಪಸ್ತಂಭ ಧರ್ಮಸೂತ್ರ)

''ತಂದೆಗಿಂತಲೂ ಗುರುವನ್ನು ಗೌರವಿಸಲು ಎರಡು ಕಾರಣಗಳಿವೆ. ತಂದೆಯಿಂದ ನಶ್ವರವಾದ ದೇಹವನ್ನು ಪಡೆದೆ. ಗುರು ಅರಿಸ್ಟಾಟಲ್‌ರಿಂದ ಅಮರ ಜೀವನವನ್ನು ಪಡದೆ. ನನ್ನ ತಂದೆ ಆಕಾಶದಿಂದ ಭೂಮಿಗೆ ನನ್ನನ್ನು ತಂದಿಟ್ಟ. ನನ್ನ ಗುರು ನನ್ನನ್ನು ಭೂಮಿಯಿಂದ ಆಕಾಶದೆತ್ತರಕ್ಕೆ ಏರಿಸಿಬಿಟ್ಟ. ಯಾರಿಗೆ ಪೂಜ್ಯಸ್ಥಾನ ಕೊಡಬೇಕು ನೀನೇ ಹೇಳು''–ಎಂದು.

ನಮ್ಮ ಬದುಕಿನಲ್ಲಿ ಅಮೃತಭಾವ ತುಂಬುವವರು ಗುರುಗಳು. ಆದದರಿಂದಲೇ–''ವರಾನ್ ಪ್ರಾಪ್ಯ ನಿಬೋಧತ'', ''ಆಚಾರ್ಯವಾನ್ ಪುರುಷೋಭವ'' ಎಂಬ ಅಪರೂಪದ ಆದೇಶಗಳಿವೆ. ಗುರು–ಶಿಷ್ಯರ ಸಂಬಂಧ ಎಂದೆಂದಿಗೂ ಇರುವುದು. ಗುರು ಉರಿಯುತ್ತಿರುವ ಪಂಜಿನಂತೆ ಇರಬೇಕು. ಶಿಷ್ಯ ಒಣಗಿದ ಸೌದೆಯಂತಿರಬೇಕು. ಅಂದರೆ ಇಷ್ಟೇ ಅರ್ಥ– ಗುರುವಿನ ಜ್ಞಾನ ಎಂಬ ಬೆಂಕಿ ಸ್ಪರ್ಶವಾದಾಗ ಅವನು (ಶಿಷ್ಯ)

ಹತ್ತಿಕೊಳ್ಳುತ್ತಾನೆ. ಶಿಷ್ಯನಿಗೆ ಗುರುವಿನ ಬಗ್ಗೆ ಅಚಲ–ಹಿಮಾಚಲ ಶ್ರದ್ಧೆ ಇರಬೇಕು. ಗುರುವಿಗೆ ಅಹೇತುಕ ಪ್ರೀತಿಯಿರಬೇಕು. ಈ ಸೇತುವೆ ಬಹಳ ಮುಖ್ಯ. ಗುರು ಕೇವಲ ಜ್ಞಾನವನ್ನು ಮಾತ್ರ ಕೊಡುವುದಿಲ್ಲ. ಶಿಷ್ಯನಿಗೆ ಸಾಕ್ಷಾತ್ಕಾರದ ಶಕ್ತಿಯನ್ನು ದಾನ ಮಾಡುತ್ತಾನೆ. ಉಪನಿಷತ್ತು ಮತ್ತು ಆಗಮಗಳಲ್ಲಿ ಬರುವ ಗುರು–ಶಿಷ್ಯ ಸಂಬಂಧ ಪವಿತ್ರವಾದ ಸಂಬಂಧ. ಗುರುವಿನ ಸಮೀಪದಲ್ಲಿ ಕುಳಿತು ಕೇಳಿದ್ದು ಎಂಬುದೇ ಉಪನಿಷತ್ ಶಬ್ದದ ಅರ್ಥ. ''ಗುರು ಪಾರಂಪರ್ಯಾಗತಂ ಶಾಸ್ತ್ರಂ''–ಗುರು ಪರಂಪರೆಯಿಂದ ಹರಿದುಬಂದ ಜ್ಞಾನರಾಶಿ ಆಗಮ.

ಮಗ ಕೇವಲ ನಮ್ಮ ರಕ್ತಮಾಂಸಗಳನ್ನು ಹಂಚಿಕೊಂಡು ಹುಟ್ಟುತ್ತಾನೆ. ಅವನು ತಂದೆಯ ಆಸ್ತಿ–ಪಾಸ್ತಿಗಳಿಗೆ ಹಕ್ಕುದಾರನಾಗಬಹುದು. ಆದರೆ ತಂದೆಯ ಜ್ಞಾನ–ಆದರ್ಶಗಳಿಗೆ ಹಕ್ಕುದಾರನಾಗುತ್ತಾನೆಂದು ಹೇಳಲಿಕ್ಕೆ ಬರುವುದಿಲ್ಲ. ಯೋಗ್ಯನಾದ ಶಿಷ್ಯ ಮಾತ್ರ ಹಕ್ಕುದಾರನಾಗುತ್ತಾನೆ.

ಗುರು ಬಯಸುವುದು ತಾನು ಕಲಿತ ವಿದ್ಯೆ, ತನ್ನ ನಂತರವೂ ಮಾನವ ಕೋಟಿಯ ಕಲ್ಯಾಣಕ್ಕೆ ಇರಬೇಕು ಎಂದು. ಹಾಗೆ ಅದು ಇರಬೇಕಾದರೆ ಯೋಗ್ಯ ಶಿಷ್ಯನ ಮೂಲಕ ಮಾತ್ರ. ನಾವು ಕಲಿಯುವುದು ನಮಗಾಗಿ ಅಲ್ಲ; ಇತರರಿಗಾಗಿ. ಕಲಿಸುವುದಕ್ಕಾಗಿಯೇ ಕಲಿಯಬೇಕು. ಆಧ್ಯಾತ್ಮಿಕ ವಿದ್ಯೆಯನ್ನು ಕೊಡಬೇಕಾದರೆ ಸ್ವೀಕರಿಸುವವನು ಯೋಗ್ಯನಾಗಿರಬೇಕು. ಅಪಾತ್ರನಿಗೆ ನೀಡಿದರೆ ವಿದ್ಯೆಗೂ ಗುರುವಿಗೂ ಅಪಮಾನವಾಗುತ್ತದೆ. ''ಪರಮ ಸತ್ಯ ವ್ಯರ್ಥವಾಗದಂತೆ ನೋಡಿಕೊಳ್ಳುವುದು ಗುರುವಿನ ಜವಾಬ್ದಾರಿ''. ಹೀಗಾಗಿ ಗುರುವು ಹಲವು ವಿಧದಲ್ಲಿ ಶಿಷ್ಯನನ್ನು ಪರೀಕ್ಷಿಸಬೇಕಾಗುತ್ತದೆ.

ಗುರುವಿಗೆ ಶಿಷ್ಯ ಕೊಡುವ ಕಾಣಿಕೆ ಏನು ? ಮನುಸ್ಮೃತಿಯಲ್ಲಿ ಒಂದು ಮಾತಿದೆ ''ನಿಮ್ಮ ಬಳಿಯಲ್ಲಿ ಕೊಡಲು ಏನಿಲ್ಲದಿದ್ದರೆ ಒಂದು ಆವಿಗೆಯ ಜೋಡನ್ನಾದರೂ ಗುರುವಿಗೆ ಅರ್ಪಿಸಿರಿ. ಒಂದು ಮಣ್ಣಿನ ಕೊಡವನ್ನಾದರೂ ನೀರು ತುಂಬಿ ಕೊಡಿರಿ. ಅದೂ ಆಗದಿದ್ದರೆ ಒಂದು ಹೂವನ್ನಾದರೂ ಕೊಡಿರಿ. ಶಿಷ್ಯ ಏನು ಕೊಟ್ಟಿದ್ದಾನೆಂದು ಗುರುವು ನೋಡುವುದಿಲ್ಲ; ನೋಡ ಬಾರದು. ಆದರೆ ಕೊಟ್ಟಿದ್ದರಲ್ಲಿ ಕೃತಜ್ಞತೆಯ ಸಾಗರವೇ ತುಂಬಿರುತ್ತದೆ.

ಗುರುವಿನ ಬಗ್ಗೆ ಅತಿಶಯಯವಾದ ಭಕ್ತಿ–ಗೌರವಗಳ ಉಲ್ಲೇಖವನ್ನು ನಮ್ಮ ಸಾಹಿತ್ಯ ಹಾಗೂ ಶಾಸ್ತ್ರಗ್ರಂಥಗಳಲ್ಲಿ ಕಾಣುತ್ತೇವೆ.

ಪಿತುರ್ದಶಗುಣಾಮಾತಾ ಗೌರವೇಣೇತಿ ನಿಶ್ಚಿತಮ್ ।
ಮಾತುಃ ಶತಗುಣಾಃ ಪೂಜ್ಯೋ ಜ್ಞಾನದಾತಾ ಗುರುಃ ಪ್ರಭೋ ॥

(ತಂತ್ರಸಾರ)

ಅಂದರೆ ತಂದೆಗಿಂತ ಗುಣಗೌರವದಲ್ಲಿ ಹತ್ತು ಪಟ್ಟು ತಾಯಿ, ತಾಯಿಗಿಂತ ನೂರು ಪಟ್ಟು ಜ್ಞಾನದಾತನಾದ ಗುರು ಪೂಜ್ಯನಾಗುತ್ತಾನೆಂದು ತಂತ್ರಸಾರ ತಿಳಿಸುತ್ತದೆ. ಮಹಾಕವಿ ಬಾಣ ತನ್ನ ಕಾದಂಬರಿಯಲ್ಲಿ ಒಂದು ಕಡೆ ಹೀಗೆ ಹೇಳುತ್ತಾನೆ–ಗುರುವಚನ–ಮಮಲಮಪಿ ಸಲಿಲಮಿವ । ಮಹದುಪ ಜನಯತಿ ಶ್ರವಣಸ್ಥಿತಂ ಶೂಲಮಭವ್ಯಸ್ಯ । ಅಂದರೆ ತಿಳಿ ನೀರಿನಂತೆ ಸ್ವಚ್ಛವಾದ ಗುರುವಿನ ಮಾತು ಕಿವಿಯಲ್ಲಿ ಬಿದ್ದರೆ, ಅವು ಅಮಂಗಲವನ್ನು ನಾಶಪಡಿಸುವ ಶೂಲದಂತೆ ವರ್ತಿಸುತ್ತದೆ ಎಂದು. ಮತ್ತೆ ಆ ಕವಿಯೇ ತನ್ನ ಕಾದಂಬರಿಯಲ್ಲಿ ಇನ್ನೊಂದು ಮಾತನ್ನು ಗುರುವಿನ ಬಗೆಗೆ ಅರ್ಥಪೂರ್ಣವಾಗಿ ಹೇಳುತ್ತಾನೆ. ಗುರೂಪದೇಶಶ್ಚ ನಾಮ ಪುರುಷಾಣಾಮಖಿಲಮಲಪ್ರಕ್ಷಾಲನಕ್ಷಮಮಜಲಂ ಸ್ನಾನಂ । ಅಂದರೆ ಗುರುವಿನ ಉಪದೇಶವೆಂದರೆ, ಎಲ್ಲಾ ಕೊಳೆಯನ್ನು (ಮನುಷ್ಯನ) ತೊಳೆಯುವ ಸಾಮರ್ಥ್ಯವಿರುವ ನೀರಿಲ್ಲದ ಸ್ನಾನ ಎಂದು.

ಮಹಾಕವಿ ಬಾಣ ಗುರುವಿನ ಮಹೋನ್ನತವಾದ ಸ್ಥಾನವನ್ನು ನಿರ್ದೇಶನ ಮಾಡುತ್ತಾನೆ. ಧರ್ಮ ವಿರುದ್ಧವಾದರೂ ಸರಿ, ಗುರುವಿನ ಆಜ್ಞೆಯನ್ನು ಮೀರಬಾರದು ಎನ್ನುವ ಮಾತು ಬೃಹಸ್ಪತಿ ನೀತಿಸೂತ್ರದಲ್ಲಿದೆ–

ಗುರುಶಾಸನಂ ಕಾರ್ಯಮೇವ ಧರ್ಮೇಣ ।
ವಿರುದ್ಧಮಪಿ ಪಾಂಡವವಿವಾಹ ಇವ,
ಅರ್ಜುನಸಂನ್ಯಾಸ ಇವ, ವ್ಯಾಸವಿಧವಾಗಮನಂ ಇವ,
ಕರ್ಣೋತ್ಪಾದನಂ ಇವ ರಾಮಮಾತೃವಧ ಇವ॥

(ಬೃಹಸ್ಪತಿ ನೀತಿಸೂತ್ರ)

ಅಂದರೆ ಪಾಂಡವರ ವಿವಾಹದಂತೆ, ಅರ್ಜುನನ ಸಂನ್ಯಾಸದಂತೆ, ವ್ಯಾಸರು ವಿಧವಾಗಮನ ಮಾಡಿದಂತೆ, ಕರ್ಣನನ್ನು ಹುಟ್ಟಿಸಿದಂತೆ, ಪರಶುರಾಮನು

ತಾಯಿಯನ್ನು ಕೊಂದಂತೆ ಗುರುವಿನ ಆಜ್ಞೆಯು ಧರ್ಮವಿರುದ್ಧವಾದರೂ ಅದನ್ನು ನೆರವೇರಿಸಬೇಕು ಎನ್ನುವ ಎಚ್ಚರಿಕೆಯ ಮಾತುಗಳಿವೆ-ಅಂದರೆ ಗುರುವಿನ ಆಜ್ಞೆಯೆಂದರೆ ಉಚ್ಚ ನ್ಯಾಯಾಲಯದ ತೀರ್ಪಿನಂತೆ.

ಹೀಗೆ ಹೇಳುವ ಬೃಹಸ್ಪತಿ ನೀತಿಸೂತ್ರ ''ಗುರುವು ನೀತಿವಂತನಾಗಿರಬೇಕು, ನೀತಿಬಾಹಿರನನ್ನು ಹೊರದೂಡಬೇಕು'' ಎಂದೂ ಎಚ್ಚರಿಸಿದೆ. (''ಗುರುಮಪಿ ನೀತಿ ವಿಮುಕ್ತಂ ನಿರಾಸಯೇತ್'') 'ಶಾತ್ತೀತಿ ಶಾಸ್ತ್ರಂ' ಯಾವುದೇ ಶಾಸನವನ್ನು ಮಾಡಬೇಕಾದರೂ ಗುರುವೇ ಮಾಡಬೇಕು ಇದು ಶಾಸ್ತ್ರ ನಿಯಮ. ಇಂತಹ ಗುರುವಿಗೆ ಶಿಷ್ಯನ ಆದರ್ಶಗಳ ಬಗೆಗೂ ಉಲ್ಲೇಖಗಳಿವೆ, ಶಿಷ್ಯನು ಗುರುವಿನ ಹಿತವನ್ನು ಬಯಸಬೇಕು, ಗುರುವು ಹೇಳದಿದ್ದರೂ ತನ್ನ ವ್ಯಾಸಂಗದಲ್ಲಿ ಆಸಕ್ತನಾಗಿರಬೇಕು. ಗುರುವಿನ ವಿಷಯದಲ್ಲಿ ತ್ರಿಕರಣ ಶುದ್ಧಿಯಿಂದಿರಬೇಕು. ಗುರುವಿನ ಎದುರಿಗೆ ಯಾವ ಆಡಂಬರವನ್ನು ತೋರಿಸಬಾರದು. ಗುರುಗಳ ಎದುರಿಗೆ-ಮನಬಂದಂತೆ ಕುಳಿತುಕೊಳ್ಳಬಾರದು, (ಗುರುಣಾ ಪುರತಃ ನಯಥೇಷ್ಟುಮಾಸಿತವ್ಯಂ) (ಸೋಮದೇವನ ನೀತಿಸೂತ್ರ), ಗುರುವನ್ನು ದೂಷಿಸಬಾರದು, ಗುರುವಿನ ಹೆಸರನ್ನು ಹಿಡಿದು ಕರೆಯಕೂಡದು, ಗುರುವಿನಲ್ಲಿ ಭಯಭಕ್ತಿ ವಿನಯದಿಂದ ನಡೆದುಕೊಳ್ಳಬೇಕು. ಗುರುನಿಂದೆಯು ನಡೆದಲ್ಲಿ ಅದನ್ನು ಕಿವಿಗೊಟ್ಟು ಕೇಳಬಾರದು. ಇಲ್ಲವೇ ಆ ಸ್ಥಳವನ್ನು ಬಿಟ್ಟು ಹೋಗಬೇಕು (ಗುರೋರ್ಯತ್ರ) ಪರೀವಾದೋ, ನಿಂದವಾಪಿ ಪ್ರವರ್ತತೇ ಕರ್ಣೌ ತತ್ರ ಪಿಧಾತವ್ಯೌ, ಗಂತವ್ಯಂವಾತತೋನ್ಯತಃ-(ಮನುಸ್ಮೃತಿ)

ಹೀಗೆ ಭಾರತೀಯ ಸಾಹಿತ್ಯ ಹಾಗೂ ಧರ್ಮಗ್ರಂಥಗಳಲ್ಲಿ ಆದರ್ಶ ಗುರು-ಶಿಷ್ಯರ ಲಕ್ಷಣಗಳನ್ನು (Character) (ಗುಣಮೌಲ್ಯಗಳನ್ನು) ತಿಳಿಸಿ ಗುರುವಿಗೆ ಅತ್ಯಂತ ಗೌರವವಾದ ಸ್ಥಾನವನ್ನು ಕೊಡಲಾಗಿದೆ. (ಗುರುಗೀತಾ-ತಂತ್ರರಾಜ-ಕಲಾರ್ಣವತಂತ್ರ-ಪಂಚದಶಿ-ಸೂತಸಂಹಿತೆ-ಆಗಮ-ಶಿವರಹಸ್ಯ-ಉಪನಿಷತ್-ಸ್ಮೃತಿ) ಇತ್ಯಾದಿ ಗ್ರಂಥಗಳಲ್ಲಿ.

**ಸೂಕ್ಷ್ಮಾಗಮದಲ್ಲಿ ಗುರು-ಶಿಷ್ಯ ಸಂಬಂಧದ ಪರಿಕಲ್ಪನೆ :**

ವೀರಶೈವಧರ್ಮ ಜಾಗತಿಕ ಧರ್ಮಗಳಲ್ಲಿ ವಿಶಿಷ್ಟವಾದ ಧರ್ಮ. ಜಗತ್ತಿನ ಪುರಾತನ ಶೈವಧರ್ಮದ ಒಂದು ಪ್ರಭೇದ. ಶೈವಧರ್ಮದಷ್ಟೇ

ಪ್ರಾಚೀನ. ವೀರಶೈವಧರ್ಮದ ಮೂಲ ಆಕರ ಸಾಹಿತ್ಯ ಶಿವಾಗಮಗಳು. ಭಾರತೀಯ ಧಾರ್ಮಿಕ ಸಾಹಿತ್ಯದ ಮೈಲುಗಲ್ಲು ಆಗಮ ಸಾಹಿತ್ಯ. ವೀರಶೈವ ತತ್ತ್ವವನ್ನು ಪ್ರತಿಪಾದಿಸುವ ಎಲ್ಲ ಆಗಮಗಳಲ್ಲೂ ಗುರುವಿಗೆ ಅತ್ಯುನ್ನತ ಗೌರವ ಸ್ಥಾನವನ್ನು ಕಲ್ಪಿಸಲಾಗಿದೆ. ಆದರ್ಶ ಗುರು-ಶಿಷ್ಯರು ಅವರ ಆಧ್ಯಾತ್ಮಿಕ ಸಂಬಂಧದ ಪರಿಕಲ್ಪನೆ ಆದರ್ಶಪ್ರಾಯವಾಗಿದೆ. ಪ್ರಸ್ತುತ ಸೂಕ್ಷ್ಮಾಗ್ರಮದಲ್ಲಿ ಕ್ರಿಯಾಪಾದದ ೫ನೆಯ ಪಟಲ ಗುರು-ಶಿಷ್ಯರ ವಿಚಾರಕ್ಕೆ ಮೀಸಲಾಗಿದೆ.

ಸೂಕ್ಷ್ಮಾಗ್ರಮ ಶಿವಾಗಮಗಳಲ್ಲಿ ಏಳನೆಯದು. ಬೃಹತ್ತಿನಲ್ಲಿ ಕಾಮಿಕಾ ಗಮವನ್ನು ಬಿಟ್ಟರೆ, ಎರಡನೆಯ ಸ್ಥಾನ ಇದಕ್ಕೆ ಮೀಸಲಾಗಿದೆ. ಇದು ಸರ್ವಾ ಗಮಸಾರವೆಂದು ಖ್ಯಾತಿ ಪಡೆದಿದೆ.

ಪರವಸ್ತುವೊಂದನ್ನು ತೋರಿಸುತ್ತ, ಅಂತರಂಗದ ಕತ್ತಲೆಯನ್ನು ಕಳೆಯುವುದು, ಆತ್ಮಜ್ಞಾನದ ಹಸಿವನ್ನು ಹಿಂಗಿಸಿ, ಅಂತರಂಗದಲ್ಲಿ ಇಷ್ಟ-ಪ್ರಾಣ-ಭಾವ ಲಿಂಗಗಳ ಶಿವಯೋಗ ಸಾಧನೆಯಿಂದ ಸ್ವಸ್ವರೂಪ ದರ್ಶನ ವನ್ನು ಮಾಡಿಸುವ ಶಿವಯೋಗ ವಿಜ್ಞಾನದ ವಿಧಾನ ಈ ಆಗಮದಲ್ಲಿದೆ. ಇದು ವೀರಶೈವ ದರ್ಶನದ ದಾರಿದೀಪ : ಶಿವಯೋಗ ಸಾಧಕನ ಕೈದೀವಿಗೆ.

ಸಾಧಕ ಮೈ-ಮನಗಳನ್ನು ಮರೆತು ಭಾವ-ನಿರ್ಭಾವವಾಗಿ, ನಿರಾಳವಾಗಿ, ನಿರಾಲಂಬವಾಗಿ, ಲಿಂಗಾರ್ಚನ, ಲಿಂಗಾರ್ಪಣ, ಲಿಂಗಾನು ಭೂತಿಯಾಗಿ ಲಿಂಗಾನಂದದಲ್ಲಿ ಲೀನನಾಗುತ್ತಾನೆ. ಇದು ವೀರಶೈವ ಸಾಧನೆಯ ಲಕ್ಷ್ಯದ ಲಕ್ಷಣ. ಶಿವಯೋಗದ ಪರಮ ಮಾನಸಶಾಸ್ತ್ರ, ಇದರ ವಿಶಿಷ್ಟ ನಿರೂಪಣೆ, ಈ ಆಗಮದಲ್ಲಿದೆ. ಶಿಷ್ಯನೇ ಅಂಗವಾಗಿ, ಗುರುವೇ ಲಿಂಗವಾಗಿ, ಅವಿಭಕ್ತರಾಗುತ್ತಾರೆ. ಅವಿಮುಕ್ತರಾಗುತ್ತಾರೆ. ಸ್ಥೂಲ ಭಾವವಳಿದು, ಸೂಕ್ಷ್ಮಕ್ಕೆ ಆಗಮಿಸುವುದು, ಸೂಕ್ಷ್ಮದಲ್ಲಿ ಸಂಗಮಿಸುವುದು ಕುರುಹು, ಅರುಹಿನಲ್ಲಿ ಮರೆಯಾಗಿ, ಅನುಭವ ಆನಂದದಲ್ಲಿ ಸಮರಸ ಗೊಳ್ಳುವುದು ಇದು ಸೂಕ್ಷ್ಮಾಗಮದ ಸೂಕ್ಷ್ಮ ವಿಚಾರಸಾರ.

ಈ ಆಗಮದಲ್ಲಿ ಗುರು-ಶಿಷ್ಯ ಸಂಬಂಧದ ಪರಿಕಲ್ಪನೆಯನ್ನು ಕುರಿತು ವಿಚಾರಿಸುವುದು ಪ್ರಸ್ತುತ ಪ್ರಬಂಧದ ಆಶಯವಾಗಿದೆ. ಸೂಕ್ಷ್ಮಾಗಮದಲ್ಲಿ ಆದರ್ಶ ಗುರುವಿನ ಲಕ್ಷಣ ಹೀಗಿದೆ :

ಸತ್ಕಲಾಂ ಪ್ರಜಪನ್ ಶಾಂತಃ ಸತ್ಯವಾಗನಹಂಕೃತಿಃ ।
ನಿರ್ಮತ್ಸರೋ ನಿರುತ್ಸೇಕಃ ಕಾಮಾದಿ ಗುಣವರ್ಜಿತಃ ॥ ॥ ೪ ॥
ಸ್ತ್ರೀಸಂಗರಹಿತೋ ದಾಂತಃ ಸಮಸ್ತಾಗಮಪಾರಗಃ ।
ವಾಗ್ಮೀ ಗಂಭೀರಃ ಸಂತುಷ್ಟಃ ಪ್ರಗಲ್ಭಃ ಕರುಣಾಸ್ಪದಃ ॥ ೫ ॥
ಅಧೀತ ವೇದ ವೇದಾಂಗಃ ಸರ್ವಸ್ಮೃತಿಷು ಕೋವಿದಃ ।
ಪುರಾಣಸಂಹಿತಾ ವಕ್ತಾ ತದರ್ಥಪ್ರತಿಪಾದಕಃ ॥ ೬ ॥

ಮಹಾಮಂತ್ರವನ್ನು ಜಪಿಸುವವನು, ಶಾಂತನು, ಸತ್ಯವಂತನು, ನಿರಹಂಕಾರನು, ಮತ್ಸರವಿಲ್ಲದವನು, ದೋಷರಹಿತನು, ಕಾಮಾದಿ ಗುಣವರ್ಜಿತನು. ಸ್ತ್ರೀಸಂಗ ರಹಿತನು, ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡವನು, ಸಮಸ್ತ ಆಗಮಗಳನ್ನು ಬಲ್ಲವನು, ಗಂಭೀರ ಸ್ವಭಾವದವನು ಸಂತುಷ್ಟ, ಕರುಣಾಳು. ವೇದ-ವೇದಾಂಗಗಳನ್ನು ಬಲ್ಲವನು, ಸ್ಮೃತಿಗಳನ್ನು ತಿಳಿದವನು, ಪುರಾಣ ಸಂಹಿತೆಗಳನ್ನು ಪ್ರವಚನ ಮಾಡತಕ್ಕವನು ಮತ್ತು ಅವುಗಳ ಅರ್ಥವನ್ನು ತಿಳಿಸಿ ಹೇಳುವವನು. ಮಂತ್ರದ ವಿಧಿ-ವಿಧಾನ ಬಲ್ಲವನು. ಶಿವಧ್ಯಾನಿ, ಶಿವನಲ್ಲಿ ನಿಷ್ಠೆಯುಳ್ಳವನು, ಶಿವಲಿಂಗಾರ್ಚನಪರನು, ಸಂಪ್ರದಾಯ ಪರಂಪರೆ ಅರಿತವನು, ಶಿವಭಕ್ತರಿಗೆ ಪ್ರೀತಿಪಾತ್ರನು, ಸದಾಚಾರಿ, ಸಮದರ್ಶಿ ಇತ್ಯಾದಿ ಗುಣವೌಲ್ಯಗಳುಳ್ಳ ಶ್ರೀಗುರುವನ್ನು ಈ ಆಗಮ ಸಾಕ್ಷಾತ್ ದೇವರೆಂದು ಭಾವಿಸಬೇಕೆಂದು ಸ್ಪಷ್ಟಪಡಿಸುತ್ತದೆ.

ಗುರುದೇವೋ ಮಹಾದೇವಃ ಸಾಕ್ಷಾತ್‌ಸರ್ವಜಗತ್ಪ್ರಭುಃ ।
ಅನ್ಯಥಾ ತಂ ನ ಜಾನೀಯಾತ್ ಪರತತ್ತ್ವಬೋಧಕಂ ॥ ೧೦ ॥

ಗುರುವೇ ಮಹಾದೇವ, ಸಮಸ್ತ ಜಗತ್ತಿಗೆ ಒಡೆಯ. ಪರತತ್ತ್ವವನ್ನು ಬೋಧಿಸುವ ಗುರುವನ್ನು ಸಾಕ್ಷಾತ್ ದೇವರೆಂದು ಭಾವಿಸಬೇಕು ಮತ್ತು ಎಲ್ಲ ತತ್ತ್ವಗಳಿಗೆ ಏಕಮಾತ್ರ ಆಶ್ರಯವಾದ, ಎಲ್ಲಕ್ಕೆ ಆಧಾರವಾದ, ಹೋಲಿಕೆ ಇಲ್ಲದ, ಷಡ್ಭಾವರಹಿತವಾದ ದಿವ್ಯಸ್ವರೂಪವೇ ಶ್ರೀಗುರುವೆಂದು ಗುರುವಿನ ಮಹತ್ವವನ್ನು ಬಣ್ಣಿಸುತ್ತದೆ.

ಗುರುಗಳಲ್ಲಿ ಎರಡು ವಿಧ : ದೀಕ್ಷಾ ಗುರು-ಶಿಕ್ಷಾಗುರು. ಇವರಿಬ್ಬರೂ ಶರಣಾಗತರಾದ ಭಕ್ತರನ್ನು ಭವಸಾಗರದಿಂದ ಪಾರು ಮಾಡುತ್ತಾರೆ. ಇಂತಹ

ಗುರುಗಳ ಪಾದಯುಗಲವನ್ನು ಮೂರು ಲೋಕಗಳು ಆಶ್ರಯಿಸಿವೆ ಎಂದು ಗುರುವಿನ ಮಹಿಮೆಯನ್ನು ತಿಳಿಸಿ, ಇಂತಹ ಗುರುವಿಗೆ ದ್ರೋಹ ಮಾಡ ಬಾರದು ಎಂದು ಸೂಕ್ಷ್ಮಾಗಮ ಎಚ್ಚರಿಕೆ ನೀಡುತ್ತದೆ (೧೦-೧೬).

**ಸಕಲ ತೀರ್ಥಗಳ ಸಂಗಮ ಗುರು :**

ಪಾದಾಂಗುಷ್ಠೇ ಸಮಸ್ತಾನಿ ತೀರ್ಥಾನಿ ನಿವಸಂತಿ ಹಿ ।
ಗುಲ್ಫೇ ತಸ್ಯ ಮಹಾದೇವಿ ತಿಷ್ಠಂತಿ ಗಣತಾರಕಾಃ ॥ ೧೭ ॥

ಶ್ರೀಗುರು ಸಾಮಾನ್ಯನಲ್ಲ. ಆತನ ಪಾದಾಂಗುಷ್ಠದಲ್ಲಿ ಎಲ್ಲಾ ತೀರ್ಥಗಳು ನೆಲಸಿವೆ. ಹಿಮ್ಮಡಿಯ ಗಂಟಿನಲ್ಲಿ ಗಣದೇವತೆಗಳು ತಾರಾಮಂಡಲಗಳಿವೆ. ಪಾದದಡಿಯಲ್ಲಿ ಎಲ್ಲಾ ಸಮುದ್ರಗಳಿವೆ. ಪಾದದ ಮೇಲ್ಭಾಗದಲ್ಲಿ ಕುಲ ಪರ್ವತಗಳಿವೆ. ಅವನ ಮೊಳಕಾಲುಗಳೆರಡರಲ್ಲಿ ಮೂವ್ವತ್ತಾರು ತತ್ತ್ವಪುಂಜ ಗಳಿವೆ ಎಂದು ಶ್ರೀಗುರು ಪಾದವನ್ನು ಅದರ ವಿರಾಟ್ ಸ್ವರೂಪವನ್ನು ಪ್ರತಿಮಾ ವಿಧಾನದಲ್ಲಿ ಬಣ್ಣಿಸಿದೆ. ಪಾಶಬದ್ಧನಾದ ಜೀವನು ಪಾಶಮುಕ್ತನಾಗ ಬೇಕಾದರೆ ಶಿವನ ಅನುಗ್ರಹ ಬೇಕು. ಅದಕ್ಕಾಗಿ ಗುರುವನ್ನು ಆಶ್ರಯಿಸ ಬೇಕು. ಆಗ ಜೀವನು ಮೋಕ್ಷವನ್ನು ಪಡೆಯಲು ಸಮರ್ಥನಾಗುತ್ತಾನೆಂದು ಗುರುವಿನ ಅಗತ್ಯವನ್ನು ಈ ಆಗಮ ಎತ್ತಿ ಹೇಳುತ್ತದೆ ಮತ್ತು ಸುಂದರ ದೃಷ್ಟಾಂತಗಳಿಂದ ಗುರುವಿನ ಮಹತ್ವವನ್ನು ಸಾರಿ ಹೇಳುತ್ತದೆ. ಸೂರ್ಯನ ಉದಯದಿಂದ ಕತ್ತಲೆಯು ಕಳೆಯುವಂತೆ ಗುರುದರ್ಶನದಿಂದ ಸಮಸ್ತ ಪಾಪಗಳು ನಾಶವಾಗುತ್ತವೆ. ಶ್ರೀಗುರುವಿನ ಕೃಪಾಕಟಾಕ್ಷದ ಅಮೃತಧಾರೆ ಯಿಂದ ಶಿಷ್ಯನ ಸಂಸಾರವೆಂಬ ಕಾಡುಗಿಚ್ಚಿನ ಜ್ವಾಲೆಯು ತಣ್ಣಗಾಗುತ್ತದೆ.

ಅಂಧೋ ಯಥಾರ್ಥಜಾತಂ ಚ ದ್ರಷ್ಟುಂ ಸಮಭಿಕಾಂಕ್ಷತಿ ।
ಗುರುಂ ವಿನಾ ತಥಾ ಮುಕ್ತಿಂ ಪ್ರಾಪ್ತುಮಿಚ್ಛತಿ ಮೂಢಧೀಃ ॥ ೨೬ ॥

ಕುರುಡನಿಗೆ ವಸ್ತುಗಳನ್ನು ನೋಡಬೇಕೆನ್ನುವ ಬಯಕೆ ಹೇಗೆ ವ್ಯರ್ಥವೋ ಹಾಗೆಯೇ ಶ್ರೀಗುರುವನ್ನು ಬಿಟ್ಟು ಮುಕ್ತಿ ಪಡೆಯಬೇಕೆನ್ನುವುದು ಮೂಢತನ ವಾಗುತ್ತದೆ.

ಸಾಮಾನ್ಯಗುರುಮಾಶ್ರಿತ್ಯ ಜ್ಞಾನಮಿಚ್ಛತಿ ಮೂಢಧೀಃ ।
ಭಿನ್ನನಾವಾಶ್ರಿತಃ ಸೋಽಪಿ ಮಹಾಬ್ಧಿಂ ಸಂಚರಿಷ್ಯತಿ ॥ ೨೭ ॥

ಸಾಮಾನ್ಯ ಗುರುವನ್ನು ಆಶ್ರಯಿಸಿ, ಜ್ಞಾನವನ್ನು ಪಡೆಯಬಯಸುವ ಮೂಢನು, ಒಡೆದ ದೋಣಿಯಲ್ಲಿ ಕುಳಿತು ಮಹಾಸಾಗರವನ್ನು ದಾಟಲು ಬಯಸಿದಂತಾಗುತ್ತದೆಂದು ಸುಂದರ ಉಪಮಾನಗಳಿಂದ ಮನುಷ್ಯನಿಗೆ (ಸಾಧಕನಿಗೆ) ಗುರುವಿನ ಅವಶ್ಯಕತೆ ಹಾಗೂ ಅನಿವಾರ್ಯತೆಗಳನ್ನು ಸ್ಪಷ್ಟಪಡಿಸಿದೆ.

ಕುಟುಂಬಕ್ಕೊಬ್ಬನೇ ಗುರು :

ಪಿತೃ ಭ್ರಾತೃ ಕಲತ್ರಾಣಾಂ ಪುತ್ರಾದೀನಾಂ ತಥೈವ ಚ
ದೀಕ್ಷಾ–ಶಿಕ್ಷಾ ವಿಧಾನಾರ್ಥಮೇಕ ಏವ ಗುರುರ್ಭವೇತ್ ॥ ೨೯ ॥

ತಂದೆ–ಸಹೋದರ, ಹೆಂಡತಿ–ಮಕ್ಕಳು, ಮನೆಯವರಿಗೆಲ್ಲ, ಶಿಕ್ಷೆ–ದೀಕ್ಷೆಗಳನ್ನು ಪಡೆಯಲು ಒಬ್ಬನೇ ಗುರುವನ್ನು ಆಶ್ರಯಿಸಬೇಕು.

ಭಾರ್ಯಾದ್ವಯಂ ಭರ್ತೃನಿಪಾತಹೇತುಃ ಗುರುದ್ವಯಂ
ಶಿಷ್ಯನಿಪಾತಹೇತುಃ, ಸೂದದ್ವಯಂ ಪಾಕನಿಪಾತಹೇತುಃ

ಎನ್ನುವ ಅನುಭವದ ಸುಭಾಷಿತ ಸೂಕ್ತಿಯಂತೆ, ಒಂದು ಕುಟುಂಬದಲ್ಲಿ ಗುರುಗಳು ಬೇರೆ ಬೇರೆ ಆದರೆ ಅಲ್ಲಿ ಆಚಾರ, ಭೇದ ಭಾವಗಳು ಉಂಟಾಗುತ್ತವೆ. ಕುಟುಂಬದ ಶಿಷ್ಯರು ಯಾರನ್ನು ಅನುಸರಿಸಬೇಕೆಂಬ ಸಂದೇಹದಲ್ಲಿ ಸಿಲುಕಿ, ದಾರಿ ತಪ್ಪುವ ಸಾಧ್ಯತೆ ಆಗುತ್ತದೆ. ಧರ್ಮದ ಆಚಾರನಿಷ್ಠೆ ಶಿಥಿಲವಾಗುತ್ತದೆ ಎಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಕುಟುಂಬಕ್ಕೆ (Family) ಒಬ್ಬನೇ ಗುರುವಿರುವುದು ಭಾವನಾತ್ಮಕ ದೃಷ್ಟಿಯಿಂದ ಹಾಗೂ ಆಚಾರನಿಷ್ಠೆಯಿಂದ ಸೂಕ್ತವೆಂದು ಸೂಕ್ಷ್ಮಾಗಮ ನಿರ್ಣಯಿಸಿದೆ.

ಇದುವರೆಗೆ ಗುರುವಿನ ಆದರ್ಶ ಗುಣಗಳನ್ನು ತಿಳಿಸಿದ ಈ ಆಗಮ, ಆದರ್ಶ ಶಿಷ್ಯನ ಲಕ್ಷಣಗಳನ್ನು ವಿವರಿಸಿದೆ :

ಶಿಷ್ಯನ ಲಕ್ಷಣ :

ಶುಚಿಃ ಸುಶೀಲೋ ಧರ್ಮಿಷ್ಠಃ ಸತ್ಯವಾಗ್ವಿಜಿತೇಂದ್ರಿಯಃ ।
ಅಹಂಕಾರವಿನಿರ್ಮುಕ್ತೋ ರಾಗದ್ವೇಷಾದಿವರ್ಜಿತಃ ॥ ೩೦ ॥

ದೈಹಿಕ ಹಾಗೂ ಮಾನಸಿಕವಾಗಿ ಶುದ್ಧನೂ, ಶೀಲಸಂಪನ್ನನೂ, ಧರ್ಮಿಷ್ಠ–ಸತ್ಯವಾದಿ, ಜಿತೇಂದ್ರಿಯ, ನಿರಹಂಕಾರಿ, ರಾಗ–ದ್ವೇಷಾದಿಗಳಿಲ್ಲದವನೂ

ಆಗಿರಬೇಕು ಮತ್ತು ಗುರುಗಳಲ್ಲಿ ಭಕ್ತಿ ಉಳ್ಳವನು, ಕ್ರೋಧವಿಲ್ಲದವನು, ಗುರುವಿನ ಆಜ್ಞಾಪಾಲಕನು, ವಿಷಯಾಸಕ್ತಿರಹಿತನು ಹಾಗೂ ಅಷ್ಟಮದ ಗಳಿಲ್ಲದವನು ಅಂದರೆ (ಕುಲ–ಶೀಲ–ಧನ–ರೂಪ–ಯೌವನ–ವಿದ್ಯೆ–ತಪ–ರಾಜಮದ) ಆಗಿರಬೇಕು. ಮತ್ತು ತನ್ನ ಬಾಳಿನ ಗುರಿ ಏನು ? ಬದುಕಿನ ಸಾರ್ಥಕತೆ ಏನು ? ಎಂದು ಹಗಲಿರುಳು ಚಿಂತಿಸುವವನಾಗಬೇಕು. ಶಿಷ್ಯ ಹೀಗಿರಬೇಕೆಂದು–ಒಬ್ಬ ಆದರ್ಶ ವ್ಯಕ್ತಿಯ (Ideal man) ಚಿತ್ರವನ್ನು ನಮ್ಮ ಕಣ್ಣುಮುಂದೆ ಇರಿಸುತ್ತದೆ. ಇಂತಹ ಶಿಷ್ಯನು ದೊರಕಿದ ಮೇಲೂ ಶ್ರೀಗುರು ದೇವನು ಆದರದಿಂದ ಪರೀಕ್ಷಿಸಿ, ಆತನ ಚಿತ್ತ ನಿರ್ಮಲವಾಗುವಂತೆ ಬೋಧಿಸಬೇಕು ಎಂದು ಸಲಹೆ ನೀಡುತ್ತದೆ (೩೨–೩೩).

ಸಂಸ್ಕಾರ :

ಅನಂತರ ಶ್ರೀಗುರುವು ಶಿಷ್ಯನ ಹಣೆಗೆ ವಿಭೂತಿ ಧರಿಸಿ ಶಿವಾಚಾರ ವನ್ನು ಉಪದೇಶಿಸಬೇಕು. ಅನಂತರ ಬಂದ ಭಕ್ತರಿಗೆ ಗಂಧ–ಪುಷ್ಪ, ಅಕ್ಷತೆ–ವಿಭೂತಿ, ಯಥಾಶಕ್ತಿ ತಾಂಬೂಲ ವಸ್ತ್ರಾದಿಗಳನ್ನು ಶಿಷ್ಯನು ಕೊಡಬೇಕು. ಶ್ರೀಗುರುವು ಶಿಷ್ಯನ ಸರ್ವಾಂಗಗಳಿಗೆ ಭಸ್ಮವನ್ನು ಲೇಪಿಸಿ, ತಲೆ–ಕತ್ತು–ಕೈಗಳಿಗೆ ಶಾಸ್ತ್ರೋಕ್ತವಾಗಿ, ಶಿವಜ್ಞಾನ ಸಾಧನಗಳಾದ ರುದ್ರಾಕ್ಷಿಗಳನ್ನು ಧರಿಸಬೇಕು. ಅನಂತರ ಪಂಚಬ್ರಹ್ಮ ಮಂತ್ರಗಳಿಂದ ಮಂತ್ರಿತವಾದ ಪಂಚಕಲಶೋದಕಗಳನ್ನು ಶಿಷ್ಯನ ಮೇಲೆ ಸಿಂಪಡಿಸಬೇಕು. ಶ್ರೀಗುರು ಪೂರ್ವಕ್ಕೆ ಮುಖಮಾಡಿ ಕುಳಿತು ತರುವಾಯ ಎಲ್ಲ ವಿಧದ ನ್ಯಾಸಗಳ ನ್ನಾಚರಿಸಿ (ಅಂಗನ್ಯಾಸ–ದೇಹನ್ಯಾಸ–ಷಡಂಗನ್ಯಾಸ) ಷಡಕ್ಷರ ಮಹಾ ಮಂತ್ರವನ್ನು ಉಪದೇಶ ಮಾಡಬೇಕು. (೩೪–೪೧) (ಕ್ರಿಯಾದೀಕ್ಷೆ)

ದೀಕ್ಷಾ – ಸಂಸ್ಕಾರ :

ಶ್ರೀಗುರು ಶಿಷ್ಯನಿಗೆ ಮಹಾಮಂತ್ರವನ್ನು ಉಪದೇಶಿಸಿ ಶಿಷ್ಯಾಂಗವನ್ನು ಶಿವಾಂಗವೆಂದು ಭಾವಿಸಿ, ಲಿಂಗಸಂಸ್ಕಾರ ಮಾಡಬೇಕು. ಶ್ರೀಗುರು ಶಿಷ್ಯನಿಗೆ ಅನುಗ್ರಹಿಸಬೇಕಾದ ಲಿಂಗವನ್ನು ತನ್ನ ಹಸ್ತದಲ್ಲಿ ಹಿಡಿದು ಭಾವದೃಷ್ಟಿಯಿಂದ ಶಿಷ್ಯನ ಮಸ್ತಕದಲ್ಲಿರುವ ಚಿತ್‌ಕಳೆಯನ್ನು ಲಿಂಗದಲ್ಲಿ ಸ್ಥಾಪಿಸಬೇಕು (ಇದು ವೇಧಾದೀಕ್ಷೆ). ಲಿಂಗದಲ್ಲಿ ಪ್ರಾಣವನ್ನಿರಿಸಿ, ಪ್ರಾಣದಲ್ಲಿ ಲಿಂಗವನ್ನಿರಿಸಿ, ಆ

ಲಿಂಗವನ್ನು ಏಕಭಾವದಿಂದ ಧ್ಯಾನಿಸಿ ಶಿಷ್ಯನ ಕೈಯಲ್ಲಿ ಆ ಲಿಂಗವನ್ನು ಸ್ಥಾಪಿಸಬೇಕು (ಇದು ಮನುದೀಕ್ಷಾ). ವೀರಮಾಹೇಶ್ವರಾಚಾರ ನಿಷ್ಠೆ, ಪರಮ ದುರ್ಲಭವಾದುದ್ದು ಎನ್ನುವ ವಿಚಾರವನ್ನು ಶಿಷ್ಯನಿಗೆ ನಿರೂಪಿಸಬೇಕು.

(೪೨-೪೪)

**ದೀಕ್ಷೆ ಪಡೆದ ಶಿಷ್ಯನಿಗೆ ಗುರೂಪದೇಶ :**

ಈ ಇಷ್ಟಲಿಂಗವನ್ನು ನಿನ್ನ ದೇಹದಿಂದ ಅಗಲಿಸಬೇಡ. ಇದನ್ನು ನಿನ್ನ ಪ್ರಾಣದಂತೆ ರಕ್ಷಿಸು. ಈ ಲಿಂಗವನ್ನು ನಿನ್ನ ಶಿರಸ್ಸು, ಕೊರಳು, ರಟ್ಟೆ, ಎದೆ, ಕರಸ್ಥಲ ಇವುಗಳಲ್ಲಿ ಒಂದರಲ್ಲಿ ನಿತ್ಯಸಾವಧಾನವಾಗಿ ಧರಿಸು. ಇದು ಪ್ರಮಾದದಿಂದ ಕೆಳಗೆ ಬಿದ್ದರೆ, ಭಿನ್ನವಾದರೆ, ಕಳ್ಳರು ಕದ್ದರೆ, ಪೀಠದಿಂದ ಭಿನ್ನವಾದರೆ, ಕೂಡಲೇ ಪ್ರಾಣವನ್ನು ಬಿಡು. ನಾನು ಉಪದೇಶಿಸಿದ ಆಚಾರ ದಲ್ಲಿ, ಪ್ರಸಾದದಲ್ಲಿ, ಪಾದೋದಕದಲ್ಲಿ, ಜಂಗಮರಲ್ಲಿ, ನಿಜಲಿಂಗೈಕ್ಯದಲ್ಲಿ ಎಚ್ಚರದಿಂದ ವರ್ತಿಸು. ಯಾವ ಕಾರಣದಿಂದಾಗಲೀ ವೀರಶೈವಾಚಾರಕ್ಕೆ ಲೋಪ ಬಂದರೆ ಆದಕ್ಕೆ ಪ್ರಾಣತ್ಯಾಗವೇ ಪ್ರಾಯಶ್ಚಿತ್ತವೆಂದೇ ತಿಳಿ, ಇದು ಶ್ರೀಗುರುವಿನ ಉಪದೇಶ ಶಿಷ್ಯ ಇದರಂತೆ ನಡೆದುಕೊಳ್ಳಬೇಕು. (೪೬-೪೯)

**ಶಿಷ್ಯನ ಕರ್ತವ್ಯ (ಧರ್ಮಾಚರಣೆ) :**

ಶಿಷ್ಯನು ಗುರುವಿನ ಆಜ್ಞೆ ಮೀರಬಾರದು. ಗುರುವಿಗೆ ತನು-ಮನ-ಧನ ಗಳನ್ನು ಸರ್ವಾತ್ಮಭಾವದಿಂದ ಅರ್ಪಿಸಬೇಕು. ಲಿಂಗಧಾರಿಗಳನ್ನು, ವಿಭೂತಿ, ರುದ್ರಾಕ್ಷಿ ಉಳ್ಳವರನ್ನು ಹಾಗೂ ಶಿವಭಕ್ತರನ್ನು ಕಂಡಕೂಡಲೇ ನಮಸ್ಕರಿಸ ಬೇಕು. ಅವರನ್ನು ಉಪಚರಿಸಬೇಕು, ಅರ್ಚಿಸಬೇಕು. ಊಟ-ಹೊದಿಕೆಗಳ ನ್ನಿತ್ತು ಸಂತಸಗೊಳಿಸಬೇಕು. ಗುರುವಿನ ಅಪ್ಪಣೆಯನ್ನು ಪರಿಪಾಲಿಸಬೇಕು. ಅಂದರೆ ಶಿಷ್ಯನಿಗೆ ಇಹ-ಪರದಲ್ಲಿ ದುರ್ಲಭವಾದ ಆನಂದ ದೊರೆಯುತ್ತದೆ. (ಪಟಲ-೫, ಶ್ಲೋಕ-೫೨-೫೫)

**ಧರ್ಮಾಚರಣೆಯ ಫಲ :**

ವೀರಶೈವಾಚಾರವನ್ನು ನಿಷ್ಠೆಯಿಂದ ಶಿಷ್ಯನು ಪರಿಪಾಲಿಸಿದಲ್ಲಿ ಅನೇಕ ಜನ್ಮಗಳಿಂದ ಬಂದ ಆಗಾಮಿ-ಸಂಚಿತ-ಪ್ರಾರಬ್ಧ ಕರ್ಮಗಳು ಕ್ಷಣದಲ್ಲಿಯೇ ನಾಶವಾಗುತ್ತವೆ. ಅಲ್ಲದೆ ಬ್ರಹ್ಮರಾಕ್ಷಸ, ಬೇತಾಳ, ಪಿಶಾಚಿಗಳು, ವೀರ

ಮಾಹೇಶ್ವರರನ್ನು ನೋಡಿದರೆ ಓಡಿಹೋಗುತ್ತವೆ. ಆದ್ದರಿಂದ ಶ್ರೀ ಗುರುವಿನಿಂದ ಪಡೆದ ಲಿಂಗವನ್ನು ಪೂಜಿಸಿ, ಬೋಧಿಸಿದ ಮಂತ್ರವನ್ನು ಜಪಿಸಿ, ವೀರಶೈವನಾದವನೇ ಜಗತ್ತಿನಲ್ಲಿ ಧನ್ಯನು ಎಂದು ಸೂಕ್ಷ್ಮಾಗಮದ ಆಶಯವಾಗಿದೆ. ಹೀಗೆ ಸೂಕ್ಷ್ಮಾಗಮದ ೫ನೆಯ ಪಟಲದಲ್ಲಿ ಗುರು–ಶಿಷ್ಯರ ಸ್ವರೂಪ, ಆದರ್ಶ ಗುರು–ಶಿಷ್ಯರ ಲಕ್ಷಣ, ಪ್ರಭಾವ, ಪಾಶಬದ್ಧನಾದ ಜೀವಿಗೆ ಗುರುವಿನ ಆಶ್ರಯ ಅನಿವಾರ್ಯ ಹಾಗೂ ಕುಟುಂಬಕ್ಕೆ ಒಬ್ಬನೇ ಗುರು ಇರಬೇಕು. ಇಬ್ಬರು ಇರಬಾರದು ಎನ್ನುವ ಉಪಯುಕ್ತ ಸೂಚನೆ ಇದೆ. ಶಿಷ್ಯನಿಗೆ ದೀಕ್ಷಾಸಂಸ್ಕಾರ ನೀಡಿ, ಅವನನ್ನು ಆಧ್ಯಾತ್ಮ ಪಥದಲ್ಲಿ ಮುನ್ನಡೆಸುವ ಮಾರ್ಗಸೂಚಕವಾದ, ಶ್ರೀಗುರುವಿನ ಮೌಲಿಕ ಉಪದೇಶ ಅರ್ಥಪೂರ್ಣವಾಗಿದೆ. ಹೀಗೆ ಸೂಕ್ಷ್ಮಾಗಮದಲ್ಲಿ ಗುರು–ಶಿಷ್ಯ ಸಂಬಂಧದ ಪರಿಕಲ್ಪನೆ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಸಂಬಂಧವಾಗಿ, ಉಜ್ವಲವಾಗಿ ಚಿತ್ರಿತವಾಗಿದೆ. "Religion is man making" ಎನ್ನುವ ಮಾತಿದೆ. ಆದರ್ಶ ವ್ಯಕ್ತಿಯ ನಿರ್ಮಾಣವೇ 'ಧರ್ಮ' ಎನ್ನುವುದಾದರೆ ವೀರಶೈವ ಧರ್ಮದಲ್ಲಿ ಶ್ರೀಗುರು ವ್ಯಕ್ತಿಯ ಭವಿತನ ಕಳೆದು, ದೀಕ್ಷಾ ಸಂಸ್ಕಾರ ನೀಡಿ, ಸಾಧನಾ ಪಥದಲ್ಲಿ ಮುನ್ನಡೆಸಿ, ಆಧ್ಯಾತ್ಮಿಕವಾಗಿ ಮಾರ್ಗದರ್ಶನ ನೀಡುತ್ತಾ ನಿಯಂತ್ರಿಸುತ್ತಾನೆ. ಈ ಪ್ರಕ್ರಿಯೆ, ಈ ಬಂಧ, ಸಂಬಂಧಗಳು ರಕ್ತಸಂಬಂಧವಲ್ಲ; ಭಾವ ಸಂಬಂಧ, ಆಧ್ಯಾತ್ಮಿಕ ಸಂಬಂಧ, ನರನನ್ನು ಹರನನ್ನಾಗಿಸುವ, ಮನುಷ್ಯನನ್ನು ಮಹಾದೇವನನ್ನಾಗಿಸುವ, ಅಂಗವನ್ನು ಲಿಂಗನ್ನಾಗಿಸುವ ಈ ಕ್ರಿಯೆ ಪವಿತ್ರ ಸಂಬಂಧದ್ದು. ಇದು ನಿತ್ಯನೂತನ ಹಾಗೂ ಚಿರಂತನ ಸಂಬಂಧ.

**ತೌಲನಿಕ ಅಧ್ಯಯನ : ಇತರ ಆಗಮಗಳು–ಸಿದ್ಧಾಂತ ಶಿಖಾಮಣಿ ಹಾಗೂ ವಚನ ಸಾಹಿತ್ಯ :**

ಎಲ್ಲ ಆಗಮಗಳಲ್ಲೂ ಗುರು–ಶಿಷ್ಯ ಸಂಬಂಧದ ಪರಿಕಲ್ಪನೆ ಆದರ್ಶ ಗುರು–ಶಿಷ್ಯರ ಗುಣಶೀಲಗಳನ್ನು ಕುರಿತು ಒಂದೇ ಅಭಿಪ್ರಾಯವಿದೆ. ಪಾರಮೇಶ್ವರಾಗಮದಲ್ಲಿ ಗುರುವಿನ ಗುಣಮೌಲ್ಯ ಈ ರೀತಿ ಉಕ್ತವಾಗಿದೆ :

ಸರ್ವಲಕ್ಷಣಸಂಪನ್ನಂ ಸರ್ವಜ್ಞಂ ಸರ್ವಸಂಮತಮ್ ।
ಸದಾಚಾರರತಂ ಶುದ್ಧಂ ಶಿವಭಕ್ತಮಲೋಲುಪಮ್ ॥

(ಪ. ೭–ಶ್ಲೋಕ–೭೩)

ಗುರುವಾದವನು ಸರ್ವಲಕ್ಷಣ ಸಂಪನ್ನ, ಸರ್ವಜ್ಞ, ಎಲ್ಲರ ಗೌರವಕ್ಕೆ ಪಾತ್ರನು, ಸದಾಚಾರದಲ್ಲಿ ನಿರತನು, ಶುದ್ಧನು, ಶಿವಭಕ್ತನು ಹಾಗೂ ಚಂಚಲತೆ ಇಲ್ಲದವನು, ಇತ್ಯಾದಿ ಇನ್ನು, ಆದರ್ಶ ಶಿಷ್ಯನ ಲಕ್ಷಣವನ್ನು ಈ ರೀತಿಯಾಗಿ ವಿವರಿಸಿದೆ :

ಕುಶಲಂ ಶ್ರೀಗುರೋರ್ಭಕ್ತಂ ಶ್ರೀಗುರೋಃ ಪ್ರಿಯಕಾರಣಂ ।
ಕರ್ಮಣಾ ಮನಸಾ ವಾಚಾ ಛಾಯೇವಾನುಚರಂ ಸದಾ ॥

(ಪ. ೭-ಶ್ಲೋಕ-೭೦)

ಕುಶಲ, ಶ್ರೀಗುರುವಿನ ಭಕ್ತ, ಶ್ರೀಗುರುವಿಗೆ ಪ್ರಿಯವಾದುದನ್ನೇ ಮಾಡುವವನು, ಕಾಯಾ-ವಾಚಾ-ಮನಸ್ಸಿನಿಂದ ಸದಾ ಗುರುಗಳನ್ನು ನೆರಳಿನಂತೆ ಹಿಂಬಾಲಿಸುವವನು, ಇತ್ಯಾದಿ ಗುರುವಿನ ಗುಣಮೌಲ್ಯಗಳನ್ನು ವಿವರಿಸಿ, ಯೋಗ್ಯ ಶಿಷ್ಯನು ಪಾಲಿಸಬೇಕಾದ ನಿಯಮಗಳನ್ನು ಪಾರಮೇಶ್ವರಾಗಮ ಸೂಚಿಸುತ್ತದೆ.

ಗುರುವಿನ ನೆರಳನ್ನು ಶಿಷ್ಯ ದಾಟಬಾರದು ಅಷ್ಟೇ ಅಲ್ಲ; ತನ್ನ ನೆರಳು ಗುರುವಿನ ಮೇಲೆ ಬೀಳದಂತೆ ನೋಡಿಕೊಳ್ಳಬೇಕು. ಗುರುವಿನ ಆಸನಕ್ಕಿಂತ ಎತ್ತರದ ಆಸನದಲ್ಲಿ ಕೂಡಬಾರದು. ಗುರುವಿನ ಎದುರಿಗೆ ಎತ್ತರದ ಧ್ವನಿಯಲ್ಲಿ ಮಾತನಾಡಬಾರದು (ಪ. ೭, ಶ್ಲೋಕ ೭೭-೭೮). ಗುರುವಿನ ಸನ್ನಿಧಿಯಲ್ಲಿ ಮಲಗಬಾರದು. ಕೊಡು-ಕೊಳ್ಳುವ ವ್ಯವಹಾರ ಇಟ್ಟುಕೊಳ್ಳಬಾರದು (೨-೭೯-೮೦). ಭಕ್ತನು ಗುರುವಿನ ಬಳಿಗೆ ಹೋಗುವಾಗ ಬರಿಗೈಯಲ್ಲಿ ಹೋಗಬಾರದು. ಭಕ್ತಿಪೂರ್ವಕ ಸಾಷ್ಟಾಂಗ ನಮಸ್ಕಾರ ಮಾಡಬೇಕು. (೨-೬೭) ಗುರುರೂಪದ ಶಿವನಾದ ನಿನಗೆ ನಮಸ್ಕಾರ. ಶಿಷ್ಯನಾದ ನನಗೆ ಇಷ್ಟಾರ್ಥ ಸಿದ್ಧಿಗಳನ್ನು ಕೊಡುವ, ವೀರಶೈವ ದೀಕ್ಷೆಯನ್ನು ಅನುಗ್ರಹಿಸು ಎಂದು ಪ್ರಾರ್ಥಿಸಿಕೊಳ್ಳಬೇಕು. ಶಿಷ್ಯನ ಪ್ರಾರ್ಥನೆಯನ್ನು ಗುರುವು ಅಂಗೀಕರಿಸಿ ದೀಕ್ಷೆಯನ್ನು ಕೊಡಲು ಮನಸ್ಸು ಮಾಡಿದರೆ, ಆ ಶಿಷ್ಯನನ್ನು ಮೂರು ವರ್ಷಗಳ ಕಾಲ ಪರೀಕ್ಷಿಸಿ ಜ್ಞಾನಿಯಾದ ಗುರುವು ಅವನಿಗೆ ದೀಕ್ಷೆಯನ್ನು ಕೊಡಬೇಕೆಂದು ಪಾರಮೇಶ್ವರಾಗಮ ಮೌಲಿಕ ಸೂಚನೆಯನ್ನು ಕೊಡುತ್ತದೆ (೨,೬೮-೭೦). ಸೂಕ್ಷ್ಮಾಗಮದಲ್ಲಿ ಶಿಷ್ಯನ ಪರೀಕ್ಷೆಯನ್ನು

ಸೂಚ್ಯವಾಗಿ ತಿಳಿಸಿದೆ. ಆದರೆ ಅವಧಿಯನ್ನು ತಿಳಿಸಿಲ್ಲ. ಬೇರೊಂದು ಆಗಮ ಚತುರ್ವರ್ಣದವರಿಗೆ ಪ್ರತ್ಯೇಕ ಅವಧಿಯನ್ನು ಗೊತ್ತು ಮಾಡಿದೆ.

ಬ್ರಾಹ್ಮಣಂ ತ್ರೀಣಿ ವರ್ಷಾಣಿ ಷಡಬ್ದಂ ಕ್ಷತ್ರಿಯಂ ತಥಾ ।
ವೈಶ್ಯಂ ನವಾಬ್ದಮಾಖ್ಯಾತಂ ಶೂದ್ರಂ ದ್ವಾದಶ ವರ್ಷಕಂ ॥

ಎನ್ನುವ ಪ್ರಾಚೀನ ಆಗಮ ಉಕ್ತಿಯನ್ನು ತಮ್ಮ ವಚನದಲ್ಲಿ ಉಲ್ಲೇಖಿಸಿ, ಚನ್ನಬಸವಣ್ಣನವರು– ಈ ವಿಚಾರವನ್ನು ಸಂಪೂರ್ಣವಾಗಿ ಅನುಮೋದಿಸುತ್ತಾರೆ (ಚ.ಬ.ವ. ೧೬೭೫, ಪುಟ ೬೨೪). ಗುರು–ಶಿಷ್ಯ ಸಂಬಂಧದ ಕಲ್ಪನೆಯಂತೂ ಎಲ್ಲ ಆಗಮಗಳಿಗಿಂತ ಚಂದ್ರಜ್ಞಾನಾಗಮದಲ್ಲಿ ವಿಸ್ತಾರವಾಗಿ ನಿರೂಪಿತವಾಗಿದೆ.

ಯೋ ಗುರುಃ ಸ ಶಿವಃ ಪ್ರೋಕ್ತೋ ಯಃ ಶಿವಃ ಸ ಗುರುಸ್ಮೃತಃ ।
ಗುರುರ್ವಾ ಶಿವ ಏವಾಥ ವಿದ್ಯಾಕಾರೇಣ ಸಂಸ್ಥಿತಃ ॥

(ಕಿ.ಪಾ–೨, ಶ್ಲೋಕ ೩)

ಯಾರು ಗುರುವೋ ಅವನೇ ಶಿವ, ಶಿವನೇ ಗುರು (ಭೇದವಿಲ್ಲ). ಗುರುವಾಗಲಿ, ಶಿವನಾಗಲಿ ವಿದ್ಯೆಯ ಸ್ವರೂಪವೆಂದು ತಿಳಿಸಿ, ಗುರು–ಶಿವರಲ್ಲಿ ಅಭೇದ ಕಲ್ಪನೆಯನ್ನು ತಿಳಿಸುತ್ತದೆ. ಗುರುವೇ ಶಿವ, ಶಿವನೇ ಗುರು ಎನ್ನುವ ತಾದಾತ್ಮ್ಯ ಭಾವವನ್ನು ರೂಪಕಾಲಂಕಾರದ ಮೂಲಕ ಸ್ಪಷ್ಟಪಡಿಸುತ್ತದೆ. ಮತ್ತು ಗುರುವೆಂದರೆ ಗುಣವಂತ, ಪರಮಜ್ಞಾನಿ, ಪರಮಾನಂದದ ಅನುಭವವನ್ನು ಮಾಡಿಸುವವನು, ತತ್ತ್ವಜ್ಞಾನಿ, ಮುಕ್ತಿದಾತನೆಂದು ಗುರುವಿನ ಗರಿಮೆಯನ್ನು ಬಗೆಬಗೆಯಾಗಿ ಬಣ್ಣಿಸಿದೆ. ಅಲ್ಲದೆ, ಶಿಷ್ಯನ ಮನಸ್ಸನ್ನು ಆಧ್ಯಾತ್ಮಿಕದೆಡೆಗೆ ಆಕರ್ಷಿಸುವ ಗುರುಗಳು ಅತಿ ವಿರಳವೆನ್ನುವ ಸತ್ಯವನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಚಂದ್ರಜ್ಞಾನಾಗಮದ ಈ ಮಾತು ಇಂದಿಗೂ ಪ್ರಸ್ತುತವೆನಿಸುತ್ತದೆ.

ಗುರವೋ ಬಹವಃ ಸಂತಿ ಶಿಷ್ಯವಿತ್ತಾಪಹಾರಕಾಃ ।
ದುರ್ಲಭೋಯಂ ಗುರುರ್ಲೋಕೇ ಶಿಷ್ಯಹೃತ್ತಾಪಹಾರಕಾಃ ॥

(ಕ್ರಿ. ಪಾ. ೨ ; ಶ್ಲೋಕ–೩೪)

ಹೃತ್ತಾಪಹಾರಕ ಗುರುಗಳಿಗಿಂತ ಚಿತ್ತಾಪಹಾರಕ ಗುರುಗಳು ಬಹಳ ಎನ್ನುವ ಈ ಹಿಂದಿನ ಸಾಮಾಜಿಕ ಅನುಭವದ ಮಾತು ಇಂದಿಗೂ ಹೆಚ್ಚು ಸತ್ಯವಾಗಿ ಕಾಣುತ್ತದೆ.

ಆದರ್ಶ ಗುರುವಿನ ಲಕ್ಷಣವನ್ನು ತಿಳಿಸಿದ ಚಂದ್ರಜ್ಞಾನಾಗಮ ಆದರ್ಶ ಶಿಷ್ಯನ ಗುಣಮೌಲ್ಯಗಳನ್ನು ವಿವರಿಸಿದೆ :

ಗುರುವಿನಲ್ಲಿ ಭಕ್ತಿ, ಗುರುಸೇವೆಯಲ್ಲಿ ನಿಷ್ಠೆ, ಗುರುಗಳ ಆಜ್ಞಾಪರಿಪಾಲನೆ, ಗುರುವು ಬೈದರೂ, ಹಂಗಿಸಿದರೂ, ಹೊಡೆದರೂ, ಶಿಷ್ಯ ಕೋಪಿಸಿಕೊಳ್ಳಬಾರದು. ಇಂತಹ ಸಹನಾಮೂರ್ತಿ ಶಿಷ್ಯನಿರಬೇಕೆಂದು ತಿಳಿಸುತ್ತದೆ. (ಕ್ರಿ. ಪಾ. ೨ನೇ ಪ. ೭೭-೭೮)

ಶಿಷ್ಯ ಪರೀಕ್ಷೆಯ ಅವಧಿ ವಿಚಾರದಲ್ಲಿ ಆಗಮಗಳಲ್ಲಿ ತುಸು ಭಿನ್ನಾಭಿಪ್ರಾಯವಿರುವುದು ಕಂಡುಬರುತ್ತದೆ. ಚಂದ್ರಜ್ಞಾನಾಗಮ ಶಿಷ್ಯನ ಪರೀಕ್ಷಾ ಅವಧಿ ಬಗ್ಗೆ ಈ ರೀತಿ ತಿಳಿಸುತ್ತದೆ.

"ಗುರುಸ್ತು ಸ್ವಾಶ್ರಿತಂ ಶಿಷ್ಯಂ ಪರೀಕ್ಷೇತ್ ವರ್ಷಮೇಕಕಮ್ ।
ಬ್ರಾಹ್ಮಣಂ, ಕ್ಷತ್ರಿಯಂ, ವೈಶ್ಯಂ ದ್ವಿತ್ರಿವರ್ಷಕಮೇವವಾ ॥

(ಕ್ರಿ. ಪಾ. ೨, ಪ. ೭೬)

ಬ್ರಾಹ್ಮಣನಿಗೆ ಒಂದು ವರ್ಷ, ಕ್ಷತ್ರಿಯನಿಗೆ ಎರಡು ವರ್ಷ, ವೈಶ್ಯನಿಗೆ ಮೂರು ವರ್ಷದವರೆಗೆ ಪರೀಕ್ಷಿಸಿ ದೀಕ್ಷೆ ಕೊಡಬೇಕೆಂದು ಸೂಚಿಸುತ್ತದೆ.

ಗುರುತ್ವ ಯಾರಿಗೆ ಸಫಲವಾಗುತ್ತದೆ? ಎನ್ನುವ ವಿಚಾರವನ್ನು ಚಂದ್ರಜ್ಞಾನಾಗಮ ಸ್ಪಷ್ಟಪಡಿಸಿದೆ.

ಗುರು ಗೃಹಸ್ಥ ಏವಸ್ಯಾನ್ನಕದಾಚಿದ್ಯತಿರ್ಗುರುಃ ।
ವಾನಪ್ರಸ್ಥಯತೀನಾಂ ತು ಗುರುತ್ವಂ ನಿಷ್ಫಲಂ ಭವೇತ್ ॥

(ಪ-೨, ಶ್ಲೋಕ-೫೩)

ಗೃಹಸ್ಥನು ಮಾತ್ರ ಗುರುವಾಗುತ್ತಾನೆ. ಸಂನ್ಯಾಸಿ (ವಿರಕ್ತ) ಎಂದೂ ಗುರುವಾಗುವುದಿಲ್ಲ. ಕಾರಣ, ಇದೇ ರೀತಿಯಾಗಿ ವಾನಪ್ರಸ್ಥ ಸಂನ್ಯಾಸಿಗಳ ಗುರುತ್ವವೂ ನಿಷ್ಫಲವಾಗುತ್ತದೆ. ಗೃಹಸ್ಥನಿಗೆ ತನ್ನ ಕುಟುಂಬ ಸಂರಕ್ಷಣೆಯೊಂದಿಗೆ ಸಾಮಾಜಿಕ ಜವಾಬುದಾರಿ ಇರುತ್ತದೆ. ನಿರಾಭಾರಿಯಾದ ವಿರಕ್ತ

ಅಥವಾ ಸಂನ್ಯಾಸಿಗೆ ಸಾಮಾಜಿಕ ಜವಾಬುದಾರಿ ಇರುವುದಿಲ್ಲ. ಆತ ಚರಮೂರ್ತಿಯಾಗಿ ಸಂಚರಿಸುತ್ತಾನೆ ಈ ದೃಷ್ಟಿಯಿಂದ ಗುರುತ್ವ ಅವನಿಗೆ ಸಿದ್ಧಿಸುವುದಿಲ್ಲ. ಮೊದಲು ಅಂದರೆ ಪ್ರಾಚೀನ ಕಾಲದಲ್ಲಿ ಗುರುಗಳು ಉಪನಿಷತ್ತಿನ ಕಾಲದ ಋಷಿಗಳಂತೆ ಗೃಹಸ್ಥರಾಗಿರುತ್ತಿದ್ದರೆಂದು ಕಾಣುತ್ತದೆ. ಪರಮಜ್ಞಾನಿಗಳೂ, ಪವಿತ್ರ ಚರಿತ್ರರೂ ಆಗಿದ್ದ ಗುರುಗಳಿಗೆ ಗೃಹಸ್ಥ ಜೀವನ ಅಪವಿತ್ರವಾಗಿರಲಿಲ್ಲ, ಅಡ್ಡಿಯೂ ಆಗಿರಲಿಲ್ಲ. ಕಾಲ ಕಳೆದಂತೆ ಜೈನ-ಬೌದ್ಧ ಸಂನ್ಯಾಸಿಗಳ ಪ್ರಭಾವದಿಂದ ವಿಶೇಷವಾಗಿ ಗುರುಗಳು ಬ್ರಹ್ಮಚಾರಿಗಳಾಗಿರಬೇಕು ಎನ್ನುವ ಪರಿಕಲ್ಪನೆ ಸಮಾಜದಲ್ಲಿ ಬೆಳೆದು ಬಂದಿರಬೇಕೆಂದು ತೋರುತ್ತದೆ. ಚಂದ್ರಜ್ಞಾನಾಗಮವು ಹೊಸ ವಿಚಾರಗಳನ್ನು ತಿಳಿಸುತ್ತ ಆದರ್ಶ ಗುರು-ಶಿಷ್ಯರ ಲಕ್ಷಣ, ಶಿಷ್ಯರ ಧರ್ಮಾಚರಣೆ, ಗುರು-ಶಿಷ್ಯರ ಪವಿತ್ರ ಆಧ್ಯಾತ್ಮ ಸಂಬಂಧವನ್ನು ವಿಸ್ತಾರವಾಗಿ ಚಿತ್ರಿಸಿದೆ. ಇನ್ನು ಸಿದ್ಧಾಂತ ಶಿಖಾಮಣಿ ಸರ್ವಾಗಮಸಾರ, ಅದು ಆಗಮಗಳ ಅಭಿಪ್ರಾಯವನ್ನೇ ಎತ್ತಿಹಿಡಿಯುತ್ತದೆ.

ಅಪ್ರತ್ಯಕ್ಷೋ ಮಹಾದೇವಃ ಸರ್ವೇಷಾಮಾತ್ಮಮಾಯಯಾ ।
ಪ್ರತ್ಯಕ್ಷೋ ಗುರುರೂಪೇಣ ವರ್ತತೇ ಭಕ್ತಿಸಿದ್ಧಯೇ ॥

(ಪ. ೯-೫೩)

"ಮಾಯೆಯ ಪ್ರಭಾವದಿಂದಾಗಿ ಶಿವನು ಅಗೋಚರನಾಗಿದ್ದಾನೆ. ಆದರೆ ಅವನೇ ಗುರುರೂಪದಲ್ಲಿ ಪ್ರತ್ಯಕ್ಷವಾಗಿ ಕಾಣುತ್ತಾನೆ. ಶಿವ-ಗುರು ಬೇರೆಯಲ್ಲ ಎನ್ನುವ ವಿಚಾರವನ್ನು ತಿಳಿಸುತ್ತದೆ. ಮತ್ತು ಶಿಷ್ಯನ ಲಕ್ಷಣವನ್ನು ಈ ರೀತಿಯಾಗಿ ಸೂತ್ರರೂಪದಲ್ಲಿ ವಿವರಿಸುತ್ತದೆ." ಸಿದ್ಧಿಯನ್ನು ಬಯಸುವ ವಿವೇಕಿ, ಗುರುವಿನ ಆಜ್ಞೆಯನ್ನು ಮೀರಬಾರದು. ಮೀರಿದರೆ ಸಿದ್ಧಿ ದೊರಕದು ಎಂದು, ಎಚ್ಚರದ ಸೂಚನೆ ನೀಡುತ್ತದೆ. ಮತ್ತು ಯಾರು ಮನೋವಾಕ್ಕರ್ಮಗಳಿಂದ ಶಿವನನ್ನು ಭಜಿಸುತ್ತಾರೋ, ಶಿವನಿಗೆ ತನ್ನನ್ನು ಸಮರ್ಪಣೆ ಮಾಡಿಕೊಂಡವರು ಶಿವಭಕ್ತರು ಎಂದು ಆದರ್ಶ ಶಿಷ್ಯನ ಲಕ್ಷಣವನ್ನು ತಿಳಿಸುತ್ತದೆ.

ಗುರೋಃ ಕಟಾಕ್ಷವೇಧೇನ ಶಿವೋ ಭವತಿ ಮಾನವಃ ।
ರಸವೇಧಾದ್ಯಥಾ ಲೋಹೋ ಹೇಮತಾಂ ಪ್ರತಿಪದ್ಯತೇ ॥

(೧೭-೭೬)

ಗುರುವಿನ ಕೃಪಾದೃಷ್ಟಿಯಿಂದ ಮಾನವ ಶಿವನಾಗುತ್ತಾನೆ. ಹೇಗೆ, ತಾಮ್ರವು ಪಾದರಸದ ಸಂಬಂಧದಿಂದ ಸುವರ್ಣವಾಗುವಂತೆ ಎಂದು ಸುಂದರ ಉಪಮಾನದೊಂದಿಗೆ ಗುರುವಿನ ಮಹತ್ವವನ್ನು ಸಾರುತ್ತದೆ. ಹಾಗೂ ಶಿಷ್ಯ ಸಂಬಂಧ, ಆಧ್ಯಾತ್ಮಿಕ ಸಂಬಂಧ, ಪವಿತ್ರ ಸಂಬಂಧ–ನಿಷ್ಕಾಮಪೂರ್ಣ–ಅಹೇತುಕ ನಿರ್ಮಲ ಸಂಬಂಧ. ಜ್ಯೋತಿ–ಬತ್ತಿಯನ್ನು ಸ್ಪರ್ಶಿಸಿ–ಜ್ಯೋತಿಯನ್ನಾಗಿಸುವ ಆಧ್ಯಾತ್ಮ ಬೆಳಕಿನ ಸಂಬಂಧ, ಶಿವಾನಂದ ಪ್ರಕಾಶ, ಶಿವ–ಜೀವೈಕದ, ಲಿಂಗಾಂಗ ಸಾಮರಸ್ಯದ ಜ್ಞಾನ. ''ಪರೀಕ್ಷಿತೇಭ್ಯೋ ದಾವತಮಂ ಶಿಷ್ಯೇಭ್ಯೋ ನಾನ್ಯಥಾ ಕ್ವಚಿತ್'' ಯೋಗ್ಯ ಶಿಷ್ಯನಿಗೆ ಇದನ್ನು ಬೋಧಿಸಬೇಕಲ್ಲದೆ ಅನಧಿಕಾರಿಗಳಿಗೆ ಅನುಗ್ರಹಿಸಬಾರದು ಎನ್ನುವ ವಿವೇಕದ ಎಚ್ಚರದ ಮಾತನ್ನು ಸಿದ್ಧಾಂತ ಶಿಖಾಮಣಿ ಬೋಧಿಸುತ್ತದೆ. ಜಗದ್ಗುರು ಶ್ರೀಗುರುಭಗವತ್ಪಾದರು ಅಗಸ್ತ್ಯ ಮಹರ್ಷಿಗಳು ಆದರ್ಶ ಗುರು–ಶಿಷ್ಯ ಸಂಬಂಧಕ್ಕೆ ಉಜ್ವಲ ಉದಾಹರಣೆಗಳಾಗಿ ನಿಲ್ಲುತ್ತಾರೆ. ಗುರು–ಶಿಷ್ಯ ಸಂವಾದರೂಪ ಸಿದ್ಧಾಂತ ಶಿಖಾಮಣಿ ಶ್ರೇಷ್ಠ ಗುರು–ಶಿಷ್ಯರ ಅನುಸಂಧಾನದ ಫಲವಾಗಿದೆ.

ವಚನ ಸಾಹಿತ್ಯದಲ್ಲಿ :

ಜಾಗತಿಕ ಧಾರ್ಮಿಕ ಸಾಹಿತ್ಯದಲ್ಲಿ ಗುರುವಿನ ಮಹತ್ವ ಪ್ರತಿಪಾದಿತವಾಗಿದೆ. ಆದರೆ ವೀರಶೈವ ಧರ್ಮದಲ್ಲಿ 'ಜಂಗಮ' ಎನ್ನುವುದು ಒಂದು ವಿಶೇಷ ಕಲ್ಪನೆ. ವಚನ ಸಾಹಿತ್ಯದಲ್ಲಿ ಗುರು–ಜಂಗಮರಿಬ್ಬರ ಬಗೆಗೂ ಶರಣರು ಅಪಾರ ಗೌರವಾದರಗಳನ್ನು ವ್ಯಕ್ತ ಮಾಡಿರುವುದು ತಿಳಿದು ಬರುತ್ತದೆ. ಆದರೂ ವಚನ ಸಾಹಿತ್ಯದಲ್ಲಿ ಗುರುವಿಗಿಂತ 'ಜಂಗಮ'ನ ಬಗ್ಗೆ ಅತಿಶಯ ಗೌರವವಿರುವುದು ಕಂಡುಬರುತ್ತದೆ. 'ಗುರುವಿನ ಗುರು ಜಂಗಮ' ಮಂತ್ರ ವೈದ್ಯ ಗುರು, ಶಸ್ತ್ರವೈದ್ಯ ಜಂಗಮ ಇತ್ಯಾದಿ ಅಭಿಪ್ರಾಯಗಳು ಅಲ್ಲಿ ಉಕ್ತವಾಗಿವೆ.

ಭಾರತೀಯ ವೇದ–ಉಪನಿಷತ್–ಆಗಮ–ಸ್ಮೃತಿ–ಪುರಾಣ ಸಾಹಿತ್ಯದಲ್ಲಿ ಗುರುವಿನ ಬಗ್ಗೆ ಅಪಾರ ಗೌರವದ ಉಲ್ಲೇಖಗಳು ಕಂಡುಬರುತ್ತವೆ. ವೀರಶೈವ ಸಂಸ್ಕೃತ ಸಿದ್ಧಾಂತ ಗ್ರಂಥಗಳಲ್ಲೂ, ಭಾಷ್ಯಗಳಲ್ಲೂ ಗುರುವಿನ

ಮಹತ್ವ ವ್ಯಕ್ತವಾಗಿದೆ. ಆದರೆ ಕನ್ನಡ ಭಾಷೆಯ ವಚನಕಾರರ ಸಂದರ್ಭದಲ್ಲಿ 'ಜಂಗಮ'ನಿಗೆ ಗುರುವಿಗಿಂತ ತುಸು ಹೆಚ್ಚು ಗೌರವವನ್ನು ನೀಡಿರುವುದು ವಚನ ಸಾಹಿತ್ಯದ ಸೂಕ್ಷ್ಮಾವಲೋಕನದಿಂದ ತಿಳಿದುಬರುತ್ತದೆ. ವಸ್ತುತಃ ಗುರು–ಜಂಗಮರು ಬೇರೆ ಅಲ್ಲ. ತಾತ್ವಿಕ ದೃಷ್ಟಿಯಿಂದ ಒಂದೇ ಆದರೂ ಧಾರ್ಮಿಕ ವ್ಯವಸ್ಥೆಯ ಕರ್ತವ್ಯ ಭೇದದಿಂದ ಸಾಮಾಜಿಕವಾಗಿ ಬೇರೆ ಬೇರೆ ಎಂದು ಕಾಣುತ್ತಾರೆ.

ಗುರು–ಶಿಷ್ಯ ಸಂಬಂಧದ ಪರಿಕಲ್ಪನೆಯ ಬಗ್ಗೆ ವಚನ ಸಾಹಿತ್ಯದಲ್ಲಿ ವಿಸ್ತಾರವಾದ ಹಾಗೂ ಉಪಯುಕ್ತವಾದ ಚರ್ಚೆ ನಡೆದಿದೆ. ಅನಂತವಾದ ಆಧ್ಯಾತ್ಮಿಕ ಅನುಭವದತ್ತ ಕರೆದೊಯ್ಯಲು ಮಾರ್ಗದರ್ಶಕ ಮಹಾಗುರು. ಅಜ್ಞಾನಾಂಧಕಾರದಲ್ಲಿ ಬೆಳಕನ್ನು ತೋರುವ–ಬೀರುವ, ದಾರೀದೀಪ ಎಂದು ಗುರುವಿನ ಬಗ್ಗೆ ವಚನಕಾರರಿಗೆ ಅಪಾರ ಗೌರವವಿದೆ.

ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀಗುರುವೇ ನಮಃ ॥

ಎನ್ನುವ ಸಂಸ್ಕೃತದ ಈ ಪ್ರಸಿದ್ಧ ಶ್ಲೋಕದ ಭಾವವನ್ನು ವಚನಕಾರ ಸಿದ್ಧರಾಮ ಅತ್ಯಂತ ಸುಂದರವಾಗಿ ಕನ್ನಡೀಕರಿಸಿ, ಗುರುವಿನ ಬಗ್ಗೆ ತನ್ನ ಅಪಾರವಾದ ಗೌರವವನ್ನು ವ್ಯಕ್ತಪಡಿಸುತ್ತಾನೆ. 'ಕಣ್ಣಿಂಗೆ ಸತ್ವ–ರಜ–ತಮವೆಂಬ ತಿಮಿರ ಕವಿದು, ಅಜ್ಞಾನ ವಶದಲ್ಲಿ ಸದ್ಗುರುವನುಪಧಾವಿಸಿ, ಔಷಧವ ಬೇಡ ಲೊಡನೆ, ಶಿವಜ್ಞಾನವೆಂಬ ಅಂಜನವ ನೆಚ್ಚಿ ಎನ್ನ ಕಣ್ಣಾ ಮುಸುಕಿದ ಅಜ್ಞಾನವೆಂಬ ಕಾಶಿಕೆಯ ಬೇರ್ಪಡಿಸಿದ' ಶ್ರೀಗುರು ಎಂದು ಹೇಳುತ್ತಾನೆ. ''ಕಂಗಳ ಕತ್ತಲೆಯ ಕೆಡಿಸಿದ ರವಿಯ ಚಂದದಂತಾಯಿತ್ತು ಎನ್ನ ಗುರುವಿನು ಪದೇಶ ಎಂದು ಅಮುಗಿದೇವಯ್ಯ ಹೇಳುತ್ತಾನೆ. ತೋಂಟದ ಸಿದ್ಧಲಿಂಗರು ತಮ್ಮ ವಚನವೊಂದರಲ್ಲಿ ಗುರುವಿನ ಮಹತ್ವವನ್ನು ಈ ರೀತಿ ಸಾರಿದ್ದಾರೆ :

ಭವ ತಿಮಿರವೆಂಬ ಅಜ್ಞಾನದಿಂದ ಮುಸುಕಿಕೊಂಡು
ಕಾಣಲಾರದೆ, ಇದ್ದಾಗ, ಕಣ್ಣಿಂಗೆ ಜ್ಞಾನವೆಂಬ ಅಂಜನವ ನೆಚ್ಚು
ಶಿವಪಥವಿದೆಂದು ತೋರಿದ ಸದ್ಗುರು ದೇವಂಗೆ
ನಮೋನಮೋ ಎಂಬೆನಯ್ಯಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ

ವೀರಶೈವ ಧರ್ಮದಲ್ಲಿ ಗುರುವಿಗೆ ಆದ್ಯಸ್ಥಾನ. ಎಲ್ಲ ಆಧ್ಯಾತ್ಮಿಕ ಸಾಧನೆಗೆ ಗುರುವೇ ಮೂಲ. ಶಿವಪಥವನರಿವೊಡೆ ಗುರುಪಥವೆ ಮೊದಲು ಎನ್ನುತ್ತಾರೆ ಬಸವಣ್ಣನವರು. ಲಿಂಗದೀಕ್ಷೆಯನ್ನಿತ್ತು ಭವಿಯನ್ನು ಭಕ್ತನನ್ನಾಗಿ ಮಾಡಿ ಸಾಧನೆಯಲ್ಲಿ ತೊಡಗಿಸುವವನು ಗುರು. ಗುರುವಿಲ್ಲದೆ ಲಿಂಗವೇ ಇಲ್ಲ.

''ಗುರುವಿಡಿದು ಕುರುಹ ಕಾಣಬೇಕು'', ''ಗುರುವಿಡಿದು ಅರುಹ ಕಾಣಬೇಕು.'' ''ಗುರುವಿಡಿದು ಆಚಾರವ ಕಾಣಬೇಕು'', ''ಗುರು ಕರುಣೆಯೇ ಸದಾಚಾರ'', ''ಗುರುಕರುಣೆಯೇ ಶಿವಾಚಾರ''. ಮುಂದೆ ಗುರು ಹಿಂದೆ ಲಿಂಗ ; ಅಂಗದಲ್ಲಿ ಆಚಾರವನ್ನು ತೋರುವವನು ಗುರು ; ಆಚಾರವೇ ಲಿಂಗ, ಎಂದರುಹುವವನು ಗುರು. ಪ್ರಾಣದಲ್ಲಿ ಆ ಅರಿವನ್ನು ನೆರೆಗೊಳಿಸುವವನು ಗುರು. ಮಾಂಸಪಿಂಡವನ್ನು ಗುರುಮಂತ್ರ ಪಿಂಡ ವನ್ನಾಗಿಸುತ್ತಾನೆ ದೀಕ್ಷೆಯಿಂದ ಎಂದು. ಇತ್ಯಾದಿ ವಚನಗಳಿಂದ ಶರಣರು ಗುರುವಿಗೆ ಅನನ್ಯ ಗೌರವವನ್ನು ನೀಡಿದ್ದಾರೆ ಮತ್ತುಗುರುವಿನ ಮಹತ್ವವನ್ನು ಕೊಂಡಾಡಿದ್ದಾರೆ.

ವೀರಶೈವ ಧರ್ಮದಲ್ಲಿ 'ದೀಕ್ಷೆ' ಎಂಬುದು ಧಾರ್ಮಿಕ ಆಚರಣೆಯ ಒಂದು ಮಹತ್ವಪೂರ್ಣವಾದ ಸಂಸ್ಕಾರ. ಜೀವನದಲ್ಲಿ ಇದು, ಒಂದು ಮಹತ್ವದ ತಿರುವು (Cross Road) ಅಷ್ಟೇ ಅಲ್ಲ; ಪುನರ್ಜನ್ಮ (ದ್ವಿಜತ್ವ) ಹೊಸ ಜೀವನ. ಧರ್ಮದ ಎಲ್ಲ ಆಚರಣೆಗಳೂ ಇದರ ಸುತ್ತ ಕೇಂದ್ರೀ ಕೃತವಾಗಿವೆ.

ದೀಯತೇ ಲಿಂಗಸಂಬಂಧಃ ಕ್ಷೀಯತೇ ಚ ಮಲತ್ರಯಂ ।
ದೀಯತೇ ಕ್ಷೀಯತೇ ಯಸ್ಮಾಃ ಸಾ ದೀಕ್ಷೇತಿ ನಿಗದ್ಯತೇ ॥
(ಅನುಭವಸೂತ್ರ)

ಶ್ರೀಗುರು ಅಂಗಕ್ಕೆ ಲಿಂಗ ಸಂಬಂಧ ಮಾಡಿ ಆಣವ-ಮಾಯಾ-ಕಾರ್ಮಿಕ ಮಲಗಳನ್ನು ಕಳೆಯಲು ಗುರು ದೀಕ್ಷೆಯನ್ನು ಮಾಡುತ್ತಾನೆ. ದೀಕ್ಷೆಯೂ ಮೂರು ವಿಧ. ವೇಧಾ-ಮನು-ಕ್ರಿಯಾ. ದೇಹ-ಬುದ್ಧಿ-ಮನಸ್ಸುಗಳಿಗೆ ಮಾಡುವ ಸಂಸ್ಕಾರಗಳನ್ನು ಇವು ಅವಲಂಬಿಸಿವೆ. ಯಾರು ನಿಜವಾದ ಗುರುವೆನ್ನುವುದಕ್ಕೆ ಶರಣರ ವಿಚಾರಧಾರೆ ಹೀಗಿದೆ: ''ಲೋಕದಲ್ಲಿಯ

ನೂರಾರು ಗುರುಗಳ ನೋಡಿ ನಾನು ಬೇಸರಗೊಂಡೆನಯ್ಯ, ವಿತ್ತಾಪಹಾರಿ ಗುರುಗಳು ನೂರಾರು, ಶಾಸ್ತ್ರಾರ್ಥ ಪೇಳುವ ಗುರುಗಳು ನೂರಾರು'' ಎಂದು ಹೇಳಿ, ಸಂಶಯಗಳನ್ನೆಲ್ಲ ಜ್ಞಾನಾಗ್ನಿಯಿಂದ ದಹಿಸಿ, ಅರುಹಿನ ಬಂಧನ ದಲ್ಲಿರಿಸಿದ ಗುರು ಮಾತ್ರ ನಿಜವಾದ ಗುರುವೆಂದು ಶರಣರ ವಿಚಾರ. ಗುರು ವಾದವನು ಸಕಲಾಗಮದ ಹೃದಯವನರಿತು ಕ್ರಿಯೆ ಮತ್ತು ಜ್ಞಾನಯುಕ್ತನಾಗಿ ತನ್ನ ತಾನರಿದು ಸರ್ವಾಚಾರ ಸಂಪನ್ನತೆ ನೆಲೆಗೊಂಡು ನಿರ್ಣಯದ ಗೊತ್ತ ನರಿದು ಉಪದೇಶ ಮಾಡಬೇಕು ಎಂದು ಗುರುವಿನ ಲಕ್ಷಣವನ್ನು ತಿಳಿಸು ತ್ತಾರೆ.

ಗುರುವಿಗೆ ತಕ್ಕ ಶಿಷ್ಯ ಸಿಗುವವುದು ಅಪರೂಪ, ಅದೊಂದು ಮಂಗಳ ಘಟನೆ. ಯೋಗ್ಯನಿಗೆ ಮಾತ್ರ ದೀಕ್ಷೆಯನ್ನು ಕೊಡಬೇಕು ಇಲ್ಲದೆ ಹೋದರೆ– ''ಕುಂಬಳದ ಕಾಯಿಗೆ ಕಬ್ಬುನವಕಟ್ಟಿ ಕೊಟ್ಟಂತಾಗುತ್ತದೆ'' ಎನ್ನುತ್ತಾರೆ ಬಸವಣ್ಣನವರು.

ಬ್ರಾಹ್ಮಣನಿಗೆ ೩ ವರ್ಷ, ಕ್ಷತ್ರಿಯನಿಗೆ ೬ ವರ್ಷ, ವೈಶ್ಯನಿಗೆ ೯ ವರ್ಷ, ಶೂದ್ರನಿಗೆ ೧೨ ವರ್ಷ ಪರೀಕ್ಷಿಸದೆ ದೀಕ್ಷೆಯನ್ನು ಕೊಡಬಾರದು (ಚ.ಬ.ವ. ೧೯೬೫ ಪುಟ–೬೩೪) ಆಚಾರ ಭ್ರಷ್ಟರಿಗೆ ಹಸ್ತಾನುಗ್ರಹವ ಮಾಡಬಾರದು ಅದು ''ಹಸನು ಮಾಡಿ ಹರಗಿದ ಹೊಲದಲ್ಲಿ ಕಸವ ಬಿತ್ತುವ ಮರುಳರಂತಾ ಗುತ್ತದೆ'' ಎಂದು ಚನ್ನಬಸವಣ್ಣನವರು ವಿಡಂಬಿಸುತ್ತಾರೆ. ಬುದ್ಧನೂ ಸಹ ಸುವರ್ಣವನ್ನು ಅಗ್ನಿಯಲ್ಲಿ ಕಾಯಿಸಿ ಪರೀಕ್ಷಿಸುವಂತೆ ನೀವೂ ಸಹ ಭಿಕ್ಷುಗಳನ್ನು ಪರೀಕ್ಷಿಸಿ ಸ್ವೀಕರಿಸಿ ಕೇವಲ ನನ್ನ ಮಾತಿಗೆ ಗೌರವ ಕೊಟ್ಟು ಸ್ವೀಕರಿಸಬೇಡಿ ಎಂದು ದೀಕ್ಷೆಗೆ ಯೋಗ್ಯತೆ ಹುಟ್ಟಿನಿಂದ ಬರುವುದಿಲ್ಲ ಲೌಕಿಕ ಆಸ್ತಿ–ಅಂತಸ್ತುಗಳಿಂದಲೂ ಅಲ್ಲ; ಅದು ಸಹಜವಾಗಿ ಬರಬೇಕಾದದ್ದು. ಅದು ಆಂತರಿಕವಾದ ''ಶಕ್ತಿಪಾತ''ದಿಂದ ಎಂದು ಶರಣರು ಹೇಳುತ್ತಾರೆ. 'ಶಕ್ತಿಪಾತ'ದ ಕಲ್ಪನೆ ಆಗಮಗಳಲ್ಲಿ ಸುಂದರವಾಗಿ ಮೂಡಿಬಂದಿದೆ. ಶಕ್ತಿಪಾತ ವೆಂದರೆ ಸರಳವಾದ ಅರ್ಥದಲ್ಲಿ 'ದೈವಕೃಪೆ' ಅಥವಾ 'ಗುರುಕರುಣೆ'. ಇದನ್ನು ಶರಣರು ಸಂಪೂರ್ಣವಾಗಿ ಅಂಗೀಕರಿಸಿದ್ದಾರೆ. 'ಶಕ್ತಿಪಾತ' ಲಭಿಸಿದ ವನು ದೀಕ್ಷೆಗೆ ಅರ್ಹನಾಗುತ್ತಾನೆಂದು ಅವರು ಅನುಮೋದಿಸುತ್ತಾರೆ. ''ಉಪಾಧಿ (ವಂಶ–ಹಣ–ಅಧಿಕಾರ ಇತ್ಯಾದಿ) ವಿಡಿದು ಉಪದೇಶ ಮಾಡು

ವವನು ಗುರುವಲ್ಲ; ಉಪಾಧಿಯಲ್ಲಿ ದೀಕ್ಷೆ ಕೊಂಬಾತ ಶಿಷ್ಯನಲ್ಲ'' ಇದು ಠಕ್ಕನ ಮನೆಗೆ ಠಕ್ಕ ಬಂದಂತೆ ಎಂದು ಚನ್ನಬಸವಣ್ಣ ಹೇಳುತ್ತಾನೆ.

''ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ
ತನ್ನ ಪ್ರಾಣಲಿಂಗವ ಕೊಟ್ಟು, ಕರ್ಣದಲ್ಲಿ ಮಂತ್ರವನಿಕ್ಷೇಪಿಸಿ
ಬಳಿಕ ಅವ ಬಂದು ಶಿಷ್ಯನ ಮನೆಯ ಹೋಗಲೊಲ್ಲದೆ, ಅಕ್ಕಿಪಡಿಯ
ತರಿಸಿಕೊಂಡು ಹೊಸ ಬಳಕೆ ಎಂದು ಮಾಡಿಸಿಕೊಂಡುಂಬು
ವಂಗೇನೆಂಬೆನಯ್ಯಾ
ಅವನ ಧನಕ್ಕೆ ತಂದೆಯಾದಲ್ಲದೆ ಅವನಿಗೆ ತಂದೆಯಾದುದಿಲ್ಲ,
ಇದು ಕಾರಣ ಕೂಡಲಚನ್ನಸಂಗಯ್ಯ ಲಿಂಗವ ಮಾರಿಕೊಂಡುಂಬ
ಭಂಗಕಾರರ ಕಂಡು ನಾಚಬೆರೆಗಾದೆನಯ್ಯ

ಎಂದು ಆ ಕಾಲದ ಗುರುಗಳ ಸಾಮಾಜಿಕ ಚಿತ್ರವನ್ನೇ ಚನ್ನಬಸವಣ್ಣ ನಮ್ಮ ಮುಂದೆ ಇಡುತ್ತಾನೆ.

ಆ ಕಾಲದ ಗುರುಗಳ ಚಿತ್ರವನ್ನು ಕೊಡುವಂತೆ, ಭಕ್ತರ ವಿಚಾರವನ್ನು ಬಸವಣ್ಣನವರು ವಿಡಂಬಿಸುತ್ತಾರೆ. ''ಗುರು–ಲಿಂಗ–ಜಂಗಮದ ಹೆಸರಿನಿಂದ ಕಾಯಕವ ಮಾಡಿ ಗುರು ಚರಣಕ್ಕೆ ವಂಚಿಸಿ, ತಂದೆ–ತಾಯಿ–ಬಂಧು–ಬಳಗ, ಹೆಂಡಿರು–ಮಕ್ಕಳು ಒಡಹುಟ್ಟಿದವರೆಂದು ಸಮಸ್ತ ಪದಾರ್ಥವ ಭಾಗವ ಮಾಡುವ, ಭಕ್ತರನ್ನು ಕಂಡು ಛೀ !'' ಎನ್ನುತ್ತಾರೆ. ಅಂದರೆ ಶರಣರು ಗುರು–ಶಿಷ್ಯರ ನೈತಿಕಾಚರಣೆಯ ಬಗ್ಗೆ ಗಮನಹರಿಸಿರುವುದು ಅವರ ವಚನಗಳಲ್ಲಿ ಕಂಡಬರುತ್ತದೆ. ''ಗುರುವಿನಲ್ಲಿ ಗುಣವನ್ನು ಹುಡುಕಬಾರದು'' ಎನ್ನುವ ಮಾತು ಶಿಷ್ಯನಲ್ಲಿ ನಿಷ್ಠೆ ಬೆಳೆಯಬೇಕು ಎನ್ನುವ ದೃಷ್ಟಿಯೇ ಹೊರತು, ಅದು ಗುರುವಿನ ಅವಗುಣಕ್ಕೆ ರಕ್ಷಣೆಯಾಗಬಾರದು. ನುಡಿಯಂತೆ ನಡೆ ಇಲ್ಲದವರ ಕಂಡು ನೀ ಸಾಕ್ಷಿಯಾಗಿ 'ಛೀ' ಎಂಬೆ ಎನ್ನುತ್ತಾರೆ ಶರಣರು.

ಗುರುವಿನ ಅನುಗ್ರಹ ಪಡೆದ ಕೂಡಲೇ ಶಿಷ್ಯನ ಭವಬಂಧನ ಹರಿದುಹೋಗುತ್ತದೆ ಎನ್ನುವ ಮಾತನ್ನು ಶರಣರು ಒಪ್ಪುವುದಿಲ್ಲ. ಗುರು ಶಿಷ್ಯನನ್ನು ತನ್ನಂತೆ ಮಾಡುತ್ತಾನೆ ನಿಜ. ಆದರೆ ಶಿಷ್ಯನ ಸಾಧನೆ ಅವಶ್ಯಕ ವೆನ್ನುತ್ತಾರೆ. ''ಆಚಾರಿಲ್ಲದ ಗುರುವು, ಆಚಾರಿಲ್ಲದ ಶಿಷ್ಯ ಇವರೀರ್ವರೂ, ಚರಿಸಿ, ಬೆಡಗಿನ ಭವಕ್ಕೆ ಗುರಿಯಾದರು ನೋಡಾ'' ಎಂಬ ಸಿದ್ಧರಾಮನ

ವಚನದಲ್ಲಿ ಗುರು-ಶಿಷ್ಯರಿಬ್ಬರ ಜವಾಬುದಾರಿಯ ಸೂಚನೆ ಇದೆ.

ಏರಿಯ ಕಟ್ಟಬಹುದಲ್ಲದೆ ನೀರ ತುಂಬಬಹುದೇ ?
ತೈದು ಕೊಡಬಹುದಲ್ಲದೆ ಕಲಿತನವ ಕೊಡಬಹುದೇ ?....
ಘನವ ತೋರಬಹುದಲ್ಲದೆ ನೆನಹನಿಲಿಸಬಹುದೇ?

ಸದ್ಗುರು ಕಾರುಣ್ಯವಾದರೂ ಸಾಧಿಸಿದವನಿಲ್ಲ ಸಕಲೇಶ್ವರಾ ಎಂದು ಸಕಲೇಶ ಮಾದರಸ ಶಿಷ್ಯನ ಸಾಧನೆಯ ಅಗತ್ಯವನ್ನು ಹೇಳುತ್ತಾನೆ. ಗುರು-ಶಿಷ್ಯ ಸಂಬಂಧಕ್ಕೆ ಗುರುವಿನ ಕಾರುಣ್ಯ ಶಿಷ್ಯನ ಶ್ರದ್ಧೆ ಇವುಗಳು ಸಂಗಮವಾದಾಗ ಗುರು- ಶಿಷ್ಯ ಭಾವ ಮರೆಯಾಗಿ ಕ್ರಮೇಣ ಸಾಮರಸ್ಯದ ನೆಲೆಗೆ ನಿಲ್ಲುತ್ತಾರೆ. ಆಗ ''ಜ್ಯೋತಿಯಿಂದೊಗೆದ ಜ್ಯೋತಿಯಂತೆ'' ''ಅಪ್ಪುವಿನ ಸಂಗದಿಂದ ಬಪ್ಪು ಅಪ್ಪುವಪ್ಪಂತೆ'' ಶ್ರೀಗುರುವಪ್ಪುದು ತಪ್ಪದು ಎನ್ನುತ್ತಾನೆ ಉರಿಲಿಂಗ ಪೆದ್ದಿ.

ಮುಖ್ಯವಾಗಿ ಗುರು-ಶಿಷ್ಯ ಸಂಬಂಧದ ಪವಿತ್ರ ಪರಿಕಲ್ಪನೆ ವೀರಶೈವ ಧರ್ಮದಲ್ಲಿ ಆಗಮ ಸಾಹಿತ್ಯದಿಂದ ವಚನ ಸಾಹಿತ್ಯದವರೆಗೂ ತೌಲನಿಕ ವಾಗಿ ವಿವೇಚಿಸಿದಾಗ, ಗುರುವು ''ತನ್ನಂತೆ ಎನ್ನನ್ನು'' ಮಾಡಿಕೊಳ್ಳುವ ಹವಣಿಕೆಯನ್ನು ಕಾಣುತ್ತೇವೆ. ಗುರುವು ಮಾಂತ್ರಿಕನಾಗಿ, ಭವರೋಗ ವೈದ್ಯ ನಾಗಿ, ಜನ್ಮಜನ್ಮಾಂತರದ ಜೀವ ಜಡ ಕಳೆದು ಜಡನಿದ್ರೆಯಿಂದ, ಜೀವಾತ್ಮ ನನ್ನು ಎಚ್ಚರಿಸಿ, ಅಂಗವನ್ನು ಲಿಂಗವನ್ನಾಗಿಸುವ, ನರನನ್ನು ಹರನನ್ನಾಗಿ ಮಾಡುವ ಮಹಾಗುರುವಾಗಿ ವಿರಾಜಿಸುತ್ತಾನೆ.

## ಪ್ರಶ್ನೋತ್ತರ

ಪ್ರಶ್ನೆ ೧ : ಭಕ್ತನ ಸ್ವರೂಪವನ್ನು ವಿವರಿಸುವಾಗ ಪುರುಷನನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು, ಪತ್ನಿ-ಪುತ್ರರು ಲೌಕಿಕವೆಂದು ಹೇಳುವುದು ಸರಿಯೆ ? ಸ್ತ್ರೀ ಭಕ್ತೆಯ ಸ್ವರೂಪವು ಬೇರೆಯೆ ?

—ಮೃತ್ಯುಂಜಯಸ್ವಾಮಿ, ಶಕ್ತಿನಗರ

ಉತ್ತರ : ಭಕ್ತನ ಸ್ವರೂಪವನ್ನು ವಿವರಿಸುವಾಗ ಪುರುಷನನ್ನು ದೃಷ್ಟಿಯಲ್ಲಿಟ್ಟುಕೊಂಡು ಪತ್ನೀ-ಪುತ್ರರು ಲೌಕಿಕವೆಂದು ಹೇಳುವಂತೆ ಸ್ತ್ರೀ-ಭಕ್ತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಪತಿ-ಪುತ್ರರು ಲೌಕಿಕವೆಂದು ಹೇಳಬಹುದು.

ಪ್ರಶ್ನೆ ೨ : ಇಂದಿನ ಸಮಾಜದಲ್ಲಿ ನಿಜವಾದ ಗುರುವು ದೊರೆಯುವುದು ಕಷ್ಟಕರ. ಇಂತಹ ಸಂದರ್ಭದಲ್ಲಿ ಒಂದು ಗ್ರಂಥ ಅಥವಾ ಗ್ರಂಥಗಳನ್ನು ಗುರುವಿನ ರೂಪದಲ್ಲಿ ಸ್ವೀಕರಿಸಬಹುದೆ ?

ಉತ್ತರ : ಒಂದು ಗ್ರಂಥ ಅಥವಾ ಗ್ರಂಥಗಳು ಗುರುವಿನ ಸ್ಥಾನವನ್ನು ಎಂದಿಗೂ ತುಂಬಲಾರವು. ಅಂತಹ ಗುರುವು ದೊರೆಯುವವರೆಗೆ ಕಾಯಬೇಕು.

ಪ್ರಶ್ನೆ ೩ : ಗುರುವಿದ್ದರೆ ಬೆಕ್ಕಿನಂತಿರಬೇಕು. ಶಿಷ್ಯನಿದ್ದರೆ ಮಂಗನ ಮರಿಯಂತಿರಬೇಕು ಎನ್ನುತ್ತಾರಲ್ಲಾ. ಹೇಗೆ ವಿವರಿಸಿ ?

–ವಿರುಪಣ್ಣಗೌಡ

ಉತ್ತರ : ಗುರುವು ಇದ್ದರೆ ಬೆಕ್ಕಿನಂತಿರಬೇಕು ಎಂದರೆ ಬೆಕ್ಕು ಹೇಗೆ ತನ್ನ ಮರಿಯನ್ನು ಹೆಜ್ಜೆ ಹೆಜ್ಜೆಗೂ ತನ್ನ ಬಾಯಲ್ಲಿ ಮೃದುವಾಗಿ ಕಚ್ಚಿಕೊಂಡು ಮುನ್ನಡೆಸಿದಂತೆ ಗುರುವು ಭಕ್ತನನ್ನು ಮುನ್ನಡೆಸಬೇಕು ಎಂದರ್ಥ. ಬೆಕ್ಕಿನ ಮರಿ ಸದಾ ತನ್ನ ತಾಯಿಯನ್ನೇ ಅವಲಂಬಿಸಿರುತ್ತದೆ. ಇದನ್ನೇ 'ಮಾರ್ಜಾಲ ಕಿಶೋರನ್ಯಾಯ' ಎಂದು ಕರೆಯುತ್ತಾರೆ. ಶಿಷ್ಯ ಇದ್ದರೆ ಮಂಗನ ಮರಿಯಂತಿರಬೇಕು ಎಂದರೆ ಹೇಗೆ ಮಂಗನ ಮರಿ ತನ್ನ ತಾಯಿಯನ್ನು ಅಪ್ಪಿಕೊಂಡು ಇರುತ್ತದೆಯೋ ಹಾಗೆ ಶಿಷ್ಯನು ಗುರುವನ್ನು ಸದಾ ಅವಲಂಬಿಸಿರಬೇಕು ಎಂದರ್ಥ. ತಾಯಿ ಮರದಿಂದ ಮರಕ್ಕೆ ಜಿಗಿಯುವಾಗ ಮರಿಯನ್ನು ಹಿಡಿದುಕೊಳ್ಳದಿದ್ದರೂ ಮರಿಯು ಮಾತ್ರ ತಾನು ಬೀಳದಂತೆ ತಾಯಿಯನ್ನು ಬಿಗಿಯಾಗಿ ಅಪ್ಪಿಕೊಂಡಿರುತ್ತದೆ. ಇದಕ್ಕೆ 'ಮರ್ಕಟಕಿಶೋರನ್ಯಾಯ' ಎಂದು ಕರೆಯುತ್ತಾರೆ. ಗುರುವು ಶಿಷ್ಯನ ಪೂರ್ಣ ಜವಾಬ್ದಾರಿಯನ್ನು ಹೊರಬೇಕು. ಶಿಷ್ಯನು ಗುರುವನ್ನು ಸಂಪೂರ್ಣವಾಗಿ ಅವಲಂಬಿಸಬೇಕು. ಎಂಬುದೇ ಈ ಎರಡೂ ಮಾತುಗಳ ಅರ್ಥ.

ಪ್ರಶ್ನೆ ೪ : ಏಕಲವ್ಯನು ದ್ರೋಣರನ್ನು ಶಿಷ್ಯನನ್ನಾಗಿ ಸ್ವೀಕರಿಸಲು ಕೇಳಿಕೊಂಡಾಗ ದ್ರೋಣನು ತಿರಸ್ಕರಿಸುತ್ತಾನೆ. ಅದೇ ಪರಿಸ್ಥಿತಿ ಇಂದು ನಮಗೆ ಒದಗಿದರೆ ನಾವೇನು ಮಾಡಬೇಕು ?

–ಹತ್ತಿ ಚನ್ನಮ್ಮ

ಉತ್ತರ : ಏಕಲವ್ಯ ಮತ್ತು ದ್ರೋಣರು ವರ್ಣಾಶ್ರಮ ಕಟ್ಟಳೆಗೆ ಅಧೀನವಾದ ಸಂಪ್ರದಾಯದಲ್ಲಿ ಅಂತಹ ಪರಿಸ್ಥಿತಿಯನ್ನು ಎದುರಿಸಬೇಕಾಯಿತು. ಅಂತಹ ಪರಿಸ್ಥಿತಿ ವೀರಶೈವರಿಗೆ ಎಂದಿಗೂ ಒದಗುವುದಿಲ್ಲ. ಆದ್ದರಿಂದ ನಾವೇನು ಮಾಡಬೇಕೆಂಬ ಪ್ರಶ್ನೆ ಉದ್ಭವಿಸದು.

ಪ್ರಶ್ನೆ ೫ : 'ಅಶ್ವತ್ಥಾಮ ಹತೋಹತಃ' ಎನ್ನುವ ಧರ್ಮರಾಜನ ಮಾತನ್ನು ನಂಬಿದ ದ್ರೋಣ ಯುದ್ಧ ತೊರೆದನಲ್ಲಾ, 'ಹರ ಕೊಲ್ಲಲು ಗುರು ಕಾಯ್ವನು' ಎಂಬ ಮಾತು ಎಲ್ಲಿಗೆ ಹೋಯಿತು.

—ಸುಮಂಗಲಾ ಮುನವಳ್ಳಿ ಮಠ

ಉತ್ತರ : ದ್ರೋಣ ಮುಂತಾದವರಲ್ಲಿ ಇದ್ದ ಕೆಲವು ವಿಶಿಷ್ಟ ಶಕ್ತಿಗಳು ಅವರನ್ನು ಅಜೇಯರನ್ನಾಗಿ ಮಾಡಿದ್ದವು. ಅಂಥವರನ್ನು ಜಯಿಸುವುದಕ್ಕಾಗಿ ಶ್ರೀಕೃಷ್ಣನ ತಂತ್ರದ ಅಂಗವಾಗಿ ಧರ್ಮರಾಜನ ಮಾತು ಮುಂತಾದವು ಮಹಾಭಾರತದಲ್ಲಿ ಬಂದಿದೆ. ಏಕೆಂದರೆ ಅದು ಯುದ್ಧದ ಸಂದರ್ಭ. ಹರಕೊಲ್ಲಲು ಗುರುಕಾಯ್ವನೆ ಎಂಬ ಪ್ರಶ್ನೆಯೇ ಉದ್ಭವಿಸದು.

ಪ್ರಶ್ನೆ ೬ : ಶಿಷ್ಯನ ಚಿತ್ಕಲೆ ಸಗುಣವೋ ? ನಿರ್ಗುಣವೋ ?

—ಡಾ. ಎಸ್. ಆರ್. ಸಿದ್ಧಲಿಂಗಪ್ಪ

ಉತ್ತರ : ಶಿಷ್ಯನ ಚಿತ್ಕಲೆ ಸಗುಣವೂ ಅಲ್ಲ ನಿರ್ಗುಣವೂ ಅಲ್ಲ. ಹಾಗೆ ವರ್ಣಿಸಲು ಬರುವುದಿಲ್ಲ. ಅದು ಜ್ಞಾನದ ಕಿಡಿ.

ಪ್ರಶ್ನೆ ೭ : ಸಾಮಾನ್ಯ ಗುರುವನ್ನಾಶ್ರಯಿಸಿದರೆ ಒಡೆದ ದೋಣಿಯ ಪ್ರಯಾಣ ಎಂದರೆ ಅದರ ಅರ್ಥವೇನು ?

—ಡಾ. ಎಸ್. ಆರ್. ಸಿದ್ಧಲಿಂಗಪ್ಪ

ಉತ್ತರ : ಸಾಮಾನ್ಯ ಗುರುವನ್ನು ಆಶ್ರಯಿಸಿದರೆ ಗುರಿಯನ್ನು ಮುಟ್ಟಲು ಸಾಧ್ಯವಿಲ್ಲ. ಒಡೆದ ದೋಣಿಯ ಪ್ರಯಾಣವೆಂದರೆ ಹಾಗೆಯೇ ಗುರಿಯನ್ನು ಮುಟ್ಟಲಾಗದು.

■■

# ಇಷ್ಟಲಿಂಗ ದೀಕ್ಷೆ

ಸಾಮಾನ್ಯ ಅರ್ಥದಲ್ಲಿ ದೀಕ್ಷೆ ಪಡೆಯುವುದು ಎಂದರೆ ಒಂದು ಒಳ್ಳೆಯ ಕೆಲಸವನ್ನು ಸಾಧಿಸಲು ದೃಢ ಸಂಕಲ್ಪ ಮಾಡುವುದು. ನಿಯಮಪಾಲನೆ ಮಾಡುವುದು, ವ್ರತ ಕೈಗೊಳ್ಳುವುದು ಇತ್ಯಾದಿ ಅರ್ಥಛ್ಛಾಯೆಗಳು ಕಾಣುತ್ತವೆ. 'ದೀಕ್ಷೆ' ಎಂದರೆ ಹಿಡಿದ ವ್ರತವನ್ನು ನಡೆಸಲು ಕೈಗೊಳ್ಳುವ ಒಂದು ಸತ್‌ಸಂಕಲ್ಪ, ಅದು ಒಂದು ಸಮ್ಯಕ್ ಸಂಸ್ಕಾರ.

ಸಮಾಜ, ಸಂಸ್ಕೃತಿ, ಸಾಹಿತ್ಯ ಹಾಗೂ ರಾಷ್ಟ್ರಕ್ಕಾಗಿ ಸೇವೆ ಸಲ್ಲಿಸಲು ಬದ್ಧ ಕಂಕಣನಾಗಿ ನಿಲ್ಲುವುದೂ ದೀಕ್ಷೆ. ಎಲ್ಲ ರೀತಿಯ ಒಳಿತಿಗಾಗಿ ತ್ರಿಕರಣ ಪೂರ್ವಕ ಸೇವೆಸಲ್ಲಿಸುವುದು, ಲೌಕಿಕಾರ್ಥದಲ್ಲಿ ದೀಕ್ಷೆ ಎನಿಸುತ್ತದೆ.

'ಇಷ್ಟಲಿಂಗ ದೀಕ್ಷೆ' ವೀರಶೈವ ಧರ್ಮದಲ್ಲಿ ಒಂದು ವಿಶೇಷ ಪ್ರಕ್ರಿಯೆ–ಒಂದು ಧಾರ್ಮಿಕ ಸಂಸ್ಕಾರವಾಗಿ, ಹೆಚ್ಚಿನ ಮಹತ್ವವನ್ನು ಪಡೆದಿದೆ. ದೀಕ್ಷೆಯಿಂದ ಅಷ್ಟಾವರಣವೇ ಅಂಗವಾಗಿ, ಪಂಚಾಚಾರವೇ ಪ್ರಾಣವಾಗಿ, ಷಟ್‌ಸ್ಥಲಗಳೇ ಆತ್ಮವಾಗಿರುವ, ವೀರಶೈವ ಸಿದ್ಧಾಂತದ ಆಚರಣೆಗೆ ಅರ್ಹನಾಗಿ, ಲಿಂಗಾಂಗ ಸಾಮರಸ್ಯದ, ಹಂತವನ್ನು ಪಡೆಯುತ್ತಾನೆ. ಅಂಗ–ಲಿಂಗವಾಗುವ, ಜೀವ–ಶಿವನಾಗುವ ಸಂಸ್ಕಾರವೇ ದೀಕ್ಷೆ. ಸಾಧಕನನ್ನು ಮೋಕ್ಷಪಥಕ್ಕೆ ಕೊಂಡೊಯ್ಯುವುದೇ 'ದೀಕ್ಷೆ'. ದೀಕ್ಷೆ ಇಲ್ಲದವನಿಗೆ ಮೋಕ್ಷ ವಿಲ್ಲ ಎನ್ನುವ ಗಾದೆಯ ಮಾತೂ ಇದೆ.

ಇಷ್ಟಲಿಂಗದೀಕ್ಷೆ, ವೀರಶೈವಧರ್ಮದ, ಒಂದು ಪ್ರಧಾನ ಸಂಸ್ಕಾರ ಅಷ್ಟೇ ಅಲ್ಲ; ವೀರಶೈವನೆಂದೆಸಿಕೊಳ್ಳುವುದೂ, ವೀರಶೈವನಾಗುವುದೂ ದೀಕ್ಷಾ ಸಂಸ್ಕಾರದಿಂದಲೇ. ಸಂಸ್ಕಾರವೆಂದರೆ ತಿದ್ದುವ, ಪರಿಷ್ಕರಿಸುವ, ಪರಿಶುದ್ಧಗೊಳಿಸುವ ಪ್ರಕ್ರಿಯೆ. ಶಿಲೆಗೆ ಸಂಸ್ಕಾರ ಕೊಟ್ಟಾಗ ವಿಗ್ರಹವಾಗುವಂತೆ, ಅಕ್ಕಿಗೆ ಸಂಸ್ಕಾರ ಕೊಟ್ಟಾಗ, ಅನ್ನವಾಗುವಂತೆ, ಹತ್ತಿಗೆ ಸಂಸ್ಕಾರ ಕೊಟ್ಟಾಗ ಬಟ್ಟೆಯಾಗುವಂತೆ, ಚಿನ್ನಕ್ಕೆ ಸಂಸ್ಕಾರ ಕೊಟ್ಟಾಗ ಒಡವೆ ಆಗು

ವಂತೆ ಮಣ್ಣಿಗೆ ಸಂಸ್ಕಾರ ಕೊಟ್ಟಾಗ ಮಡಿಕೆ ಆಗುವಂತೆ, ಮನುಷ್ಯನಿಗೆ ದೀಕ್ಷಾ ಸಂಸ್ಕಾರನೀಡಿದರೆ, ಆತನ ಮನೋವಿಕಾಸವಾಗಿ, ಸಂಸ್ಕೃತಿವಂತನಾಗುತ್ತಾನೆ.

ಜಗತ್ತಿನ ಎಲ್ಲ ಧರ್ಮಗಳಲ್ಲಿ ಧಾರ್ಮಿಕ ಸಂಸ್ಕಾರಗಳಿವೆ. ವೀರಶೈವರಲ್ಲಿ ಮುಖ್ಯವಾಗಿ ದಶವಿಧ ಸಂಸ್ಕಾರಗಳಿವೆ. ಅವುಗಳಲ್ಲಿ ಇಷ್ಟಲಿಂಗ ದೀಕ್ಷೆ ಪ್ರಮುಖವಾಗಿದೆ.

ಇದೊಂದು ಮಹಾವ್ರತ. ಜೀವನ ಪರ್ಯಂತ ಆಚರಿಸುವ ವ್ರತ.

ಗರ್ಭಾಷ್ಟಮೇ ಕೃತಾದೀಕ್ಷಾ ಮುಖ್ಯಸಾಷೋಢಶಾವಧಿ ।
ಗೌಣ ತದೂರ್ಧ್ವಮದಮಾ ವೀರಶೈವಾನ್ವಯಿನಾಂ ॥

ವೀರಶೈವ ಮಹಿಳೆಗೆ ಗರ್ಭಲಿಂಗಧಾರಣೆ ೮ನೇ ತಿಂಗಳಲ್ಲಾಗಬೇಕು (ಗರ್ಭಾಷ್ಟಮೆ ಲಿಂಗಧಾರಣ ಮುಚ್ಯತೆ) ತರುವಾಯ, ೮ನೇ ವರ್ಷದಲ್ಲಿ ಮಾಡುವ ದೀಕ್ಷೆಯು ಉತ್ತಮವಾದುದು. ೧೬ನೇ ವರ್ಷದಲ್ಲಿ ಮಾಡುವ ದೀಕ್ಷೆಯು ಮಧ್ಯಮ. ಆ ಮೇಲೆ ಮಾಡುವ 'ದೀಕ್ಷೆಯು' ಅಧಮವೆಂದು ಶಾಸ್ತ್ರಕಾರರ ಮತ.

ದೀಯತೆ ಜ್ಞಾನಸಂಬಂಧಃ
ಕ್ಷೀಯತೇಜ ಮಲತ್ತಯಂ ।
ದೀಯತೇ ಕ್ಷೀಮತೇಯಸ್ಮಾತ್
ದೀಕ್ಷೇತ್ಯೇ ನಿಬ್ಯತೆ ॥ (ಅನುಭವ ಸೂತ್ರ)

ಮನುಷ್ಯನಲ್ಲಿಯ ಆಣವ–ಮಾಯಾ–ಕಾರ್ಮಿಕವೆಂಬ ಮಲತ್ರಯಗಳು ಕಳೆದು, ಶಿವಜ್ಞಾನವನ್ನುಂಟು ಮಾಡುವುದೇ ಇಷ್ಟಲಿಂಗ ದೀಕ್ಷೆಯ ಉದ್ದೇಶ. ವ್ಯಕ್ತಿಯು ತಾನು ಅಲ್ಪಜ್ಞಾನಿ, ಅಲ್ಪಶಕ್ತಿ ಉಳ್ಳವನೆಂಬ ಅಭಿಜ್ಞಾನವನ್ನು (ಮರವೆ) ಕಳೆದು, ಪರಿಪೂರ್ಣನಾಗುವ ಅರ್ಹತೆ ಉಳ್ಳವ ಎನ್ನುವ ಅರಿವನ್ನುಂಟು ಮಾಡುವುದೇ ಈ ಸಂಸ್ಕಾರದ ಮುಖ್ಯ ಉದ್ದೇಶ. ವ್ಯಕ್ತಿಯಲ್ಲಿರುವ ಇಚ್ಛಾ–ಜ್ಞಾನ–ಕ್ರಿಯಾಶಕ್ತಿಗಳು ಕಾರಣ–ಸೂಕ್ಷ್ಮ–ಸ್ಥೂಲ ಶರೀರದಲ್ಲಿ ಅವಿಕಸಿತವಾಗಿ, ನಿಷ್ಕ್ರಿಯೆಗಳಾದಾಗ ಇವುಗಳ ವಿಕಾಸಕ್ಕಾಗಿಯೇ ದೀಕ್ಷೆ ಅವಶ್ಯಕವೆನಿಸುತ್ತದೆ. ವೀರಶೈವ ದರ್ಶನದ ಪ್ರಕಾರ, ಶಿವಯೋಗದ ಪರಿಭಾಷೆಯಲ್ಲಿ ಮೂರು ಶರೀರಗಳಿವೆ, ಸ್ಥೂಲದೇಹ ಇದು ಪಂಚಭೂತಗಳಿಂದಾಗಿದೆ.

ಸೂಕ್ಷ್ಮದೇಹದಲ್ಲಿ ಅಂತಃಕರಣ, ಮನಸ್ಸು ಬುದ್ಧಿಗಳಿವೆ, ಕಾರಣಶರೀರ ಇದು ತೀರಾಸೂಕ್ಷ್ಮವಾಗಿದ್ದು ಇಲ್ಲಿ ವಿಶ್ವಪ್ರಜ್ಞೆಯ ಬೀಜವಿದೆ. 'ಆತ್ಮ' ಇವುಗಳಿಗೆ ಅತೀತ. ಸ್ಥೂಲ–ಸೂಕ್ಷ್ಮ–ಕಾರಣ ಶರೀರಗಳನ್ನು ಯೋಗ ಶಾಸ್ತ್ರದಲ್ಲಿ ಕೋಶ ವೆಂದು ಕರೆಯುತ್ತಾರೆ. ಮಲತ್ರಯಗಳು ಆತ್ಮನಿಗೆ ಮುಸುಕಿರುವ ತೆರೆಗಳು. ಈ ಮಲಪಾಶಗಳಿಂದ ನಮ್ಮ ನಿಜವಾದ ಸ್ವಭಾವ ಮರೆತು ಹೋಗಿದೆ. ಅಂಗನ–ಲಿಂಗವಾಗುವ ಜ್ಞಾನವನ್ನು ಮುಚ್ಚಿರುವ ಅಜ್ಞಾನದ ಆವರಣಗಳು ಮಲಗಳು. ಇವುಗಳನ್ನು ದೂರಮಾಡುವ ಸಂಸ್ಕಾರವೇ ದೀಕ್ಷೆ. ಮಲತ್ರಯ ಗಳು ಉಪಾಧಿಗಳು. ಆಂತರಿಕ ಹಾಗೂ ಬಾಹ್ಯ ಸತ್ಯವನ್ನು ಮರೆಮಾಡುವ ತೆರೆಗಳು. ವ್ಯಕ್ತಿಯ–ಇಚ್ಛೆ–ಜ್ಞಾನ ಕ್ರಿಯಾ ಶಕ್ತಿಗಳ ಮೇಲೆ ಮುತ್ತಿರುವ ಕೊಳೆಗಳು, ಆತ್ಮನ ಮೇಲೆ ಮುತ್ತಿರುವ ಅಜ್ಞಾನದ ಕಿಲುಬುಗಳು. ಮನೆಯ ಕಸಗುಡಿಸುತ್ತೇವೆ. ಒಮ್ಮೆ ಕಸಗುಡಿಸಿದೆ ಎಂದು ಸುಮ್ಮನಿರುವುದಿಲ್ಲ ಮತ್ತೆ ಮತ್ತೆ ಸ್ವಚ್ಛ ಮಾಡುತ್ತೇವೆ. ಮನೆಯಲ್ಲಿ ಕಸ ಬೀಳುವಂತೆ ವ್ಯಕ್ತಿಯ ಇಚ್ಛೆ–ಜ್ಞಾನ–ಕ್ರಿಯಾ ಶಕ್ತಿಗಳ ಮೇಲೂ ಆಗಾಗ್ಗೆ ಕಸ ಬೀಳುತ್ತದೆ. ಈ ಕಸವೇ ಮಲಗಳು. ಇವು ಮನಸ್ಸನ್ನು ಮಲಿನಗೊಳಿಸುತ್ತವೆ ಇವುಗಳನ್ನು ತೊಡೆದು ಹಾಕಲು ದೀಕ್ಷೆ, ಗುರುಗಳ ಉಪದೇಶ, ಮಾರ್ಗ ದರ್ಶನ, ಎಲ್ಲಕ್ಕಿಂತ ಹೆಚ್ಚಾಗಿ ಸಾಧನೆ, ಆಧ್ಯಾತ್ಮ ಚಿಂತನೆಗಳು ಮುಖ್ಯವಾಗಿ ಬೇಕಾಗುತ್ತವೆ. ಮನಸ್ಸು ಶುದ್ಧ ವಾಗಿ ಅರಳಬೇಕು ಆಗ ನಮ್ಮ ಬಾಳು ಬೆಳಕಾಗುತ್ತದೆ. ಶಕ್ತಿಯೇ ಜೀವನ, ದೌರ್ಬಲ್ಯವೇ ಮರಣ ಎನ್ನುತ್ತಾರೆ ಸ್ವಾಮಿವಿವೇಕಾನಂದರು. ಈ ಶಕ್ತಿ ಸಂಚಯನವೇ ದೀಕ್ಷೆಯ ಪರಮೋದ್ದೇಶ.

ವೀರಶೈವ ಪರಿಭಾಷೆಯಲ್ಲಿ ದೀಕ್ಷೆ ಇದು ಪುರ್ನಜನ್ಮ, ದೀಕ್ಷೆಯಿಂದ ಭವಿ, ಭಕ್ತನಾಗುತ್ತಾನೆ, ಮಾಂಸಪಿಂಡ ಮಂತ್ರಪಿಂಡವಾಗುತ್ತದೆ. ಅಂಗನು (ಜೀವಾತ್ಮ) ಲಿಂಗದೇವನ (ಪರಮಾತ್ಮನ) ಯಾತ್ರೆಗೆ ಸಾಗುವ ಪವಿತ್ರ ಸಾಧನ ದೀಕ್ಷೆ. ವೀರಶೈವರಲ್ಲಿ ದೀಕ್ಷೆ ಪ್ರಾಚೀನ ಪದ್ಧತಿ, ವೈದಿಕರಲ್ಲಿ ಉಪನಯನವಿದ್ದಂತೆ. ಆಗಮಿಕಮಾರ್ಗದ ವೀರಶೈವರ ಇಷ್ಟಲಿಂಗ ದೀಕ್ಷೆಯ ವಿಧಿ ವಿಧಾನಗಳು ವೈಶಿಷ್ಟ್ಯಪೂರ್ಣವಾದವು.

'ಮಾನವ್ಯದ ಮಲವನ್ನು ಕಳೆದು, ಮಾನವನನ್ನು ಸುತ್ತಿರುವ ಮಾಯೆ, ಮೋಹ, ಸಂಸಾರ, ವಿಕಾರದ ವಿಕಟ ವಿಲಾಸವನ್ನೆ ಪರಿಹರಿಸಿ ತೊಳೆದು

ಸ್ವಚ್ಛವಮಾಡಿ ಶುದ್ಧಾಂಗನಾದ, ಶಿಷ್ಯ ಶಿಶುಮಗನ, ಅಂಗಾಂಗದಲ್ಲಿ ಲಿಂಗದ ಜ್ಯೋತಿಯನ್ನು ತುಂಬಿ ಹರವಿ, ನೆಲೆಗೊಳಿಸಿ, ಕತ್ತಲೆಯ ಕೂಸನ್ನು ಎತ್ತಿಕೊಂಡು ಸತ್ಯ–ಅಮೃತ–ಜ್ಯೋತಿ ಆನಂದದ ಅನಂತದ ನಾಡಿನಲ್ಲಿ ಇಳಿಸುವ ಗುರುತಂದೆ ಕೊಟ್ಟ ಲಿಂಗ ಸಂಸ್ಕಾರದ ಹವಣಿಕೆಯೇ 'ದೀಕ್ಷೆ' ಎಂದು ತುಂಬಾ ಅರ್ಥಪೂರ್ಣವಾಗಿ ಹೇಳುತ್ತಾರೆ ಅನುಭವಿಗಳಾದ ಶ್ರೀ ಸಂ. ಶಿ. ಭೂಸನೂರಮಠ ಅವರು (ವಚನ ಸಾಹಿತ್ಯ ಸಂಗ್ರಹ ಒಳಗೆ–ಪ್ರವೇಶ ಪುಟ–XIII).

ವೀರಶೈವ ಧಾರ್ಮಿಕ ಹಿನ್ನೆಲೆಯಲ್ಲಿ ದೀಕ್ಷೆ ಎಂದರೆ 'ಅನುಗ್ರಹ' ಗುರು ಕಾರುಣ್ಯ, ಪ್ರಾಕೃತತೆಯಿಂದ ಅಪ್ರಾಕೃತತೆಗೆ ರೂಪಾಂತರಿಸುವ ಪ್ರಕ್ರಿಯೇ, ಪ್ರಾಣವಿಕಾರವನ್ನು ಕಳೆದು ಪ್ರಣವಾಕರವನ್ನಾಗಿಸುವ ಪ್ರವಿಧಿ, ಶಿವಾತ್ಮ ವಿದ್ಯಾ ಗುರುದೇವನ ಚಿತ್ಕಲಾಕಾರುಣ್ಯ.

'ದೀಯಕೇಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಂ'

(ಸಿದ್ಧಾಂತ ಶಿಖಾಮಣಿಃ)

ಪಾಶ ಬಂಧನಗಳನ್ನು ಕತ್ತರಿಸಿ ಕಳೆದು ಜೀವಾತ್ಮನಲ್ಲಿ (ಅಂಗ) ಬೆಳಕನ್ನು ಚೆಲ್ಲುವುದೇ ದೀಕ್ಷೆ 'ಹೀಗೆ' ದೀಕ್ಷೆಗೆ ವ್ಯಾಪಕವಾದ ಅರ್ಥವಿಸ್ತಾರ ವಿದೆ.

'ದೀಕ್ಷೆ' ಎಲ್ಲರಿಗೂ ಬೇಕು ಇದರಿಂದ ವ್ಯಕ್ತಿಯ ತನು–ಮನ–ಭಾವ–ಬುದ್ಧಿಗಳು ಸ್ವಚ್ಛವಾಗಿ, ಬದುಕು ಸುಂದರವಾಗುತ್ತದೆ. ದೈವದೋಲುಮೆಗೆ ಪಾತ್ರವಾಗುತ್ತದೆ.

ದೀಕ್ಷೆಗಳಲ್ಲಿ ಸಾಧಾರ–ನಿರಾಧಾರ–ಸಬೀಜ–ನಿರ್ಬೀಜ, ಯಜ್ಞ–ವಿರಜಾ ಇತ್ಯಾದಿ ಹಲವಾರು ಪ್ರಭೇದಗಳುಂಟು, ಆಗಮೋಕ್ತ ವೇಧಾ–ಮನು–ಕ್ರಿಯಾದೀಕ್ಷಗಳು ಮುಖ್ಯವಾಗಿವೆ (ಸಾದೀಕ್ಷ ತ್ರಿವೀಧಾ ಪ್ರೋಕ್ತಾ ಶಿವಾಗಮ ವಿಶಾರದ್ಯೆಃ ವೇಧಾರೂಪಾ–ಮಂತ್ರರೂಪಾ ಕ್ರಿಯಾರೂಪಾಚ)

ಗುರುವು ಶಿಷ್ಯನ ಶಿಖಾಚಕ್ರದಲ್ಲಿರುವ ಚಿತ್ಕಳೆಯನ್ನು ತನ್ನ ಹಸ್ತಕ್ಕೆ ಆಕರ್ಷಿಸಿ, ಅವರ, ಹಸ್ತವನ್ನು ಶಿಷ್ಯನ ಮಸ್ತಕದ ಮೇಲೆ ಇಟ್ಟು ಅವನ ಕಾರಣ ಶರೀರದಲ್ಲಿ 'ಭಾವಲಿಂಗವನ್ನು ಸ್ಥಾಪಿಸುವುದು ವೇಧಾ ದೀಕ್ಷಾ'.

ಗುರುವು ಶಿವಪಂಚಾಕ್ಷರಿ ಮಹಾಮತ್ವವನ್ನು ಉಪದೇಶಮಾಡಿ ಶಿಷ್ಯನ ಸೂಕ್ಷ್ಮದೇಹದಲ್ಲಿ ಪ್ರಾಣಲಿಂಗವನ್ನು ಸ್ಥಾಪಿಸುವುದು 'ಮನು ದೀಕ್ಷೆ'. ಸ್ಥೂಲ ದೇಹದಲ್ಲಿ ಇಷ್ಟಲಿಂಗವನ್ನು ಸ್ಥಾಪಿಸುವುದು 'ಕ್ರಿಯದೀಕ್ಷೆ' ಎನಿಸಿಕೊಳ್ಳುತ್ತದೆ ದೀಕ್ಷೆಯಲ್ಲಿ ಲಿಂಗಸಂಸ್ಕಾರಗಳು ಕ್ರಿಯಾ ಪ್ರಧಾನವಾಗಿಯೂ ಮಂತ್ರೋಪ ದೇಶ ಜ್ಞಾನ ಪ್ರಧಾನವಾಗಿಯೂ ಇರುತ್ತದೆ.

ವೇಧಾ ದೀಕ್ಷೆಯನ್ನು ಕುರಿತು ಮೈಲಾರ ಬಸವಲಿಂಗ ಶರಣರು ತಮ್ಮ ತ್ರಿವಿಧಿಯಲ್ಲಿ ಅರ್ಥಪೂರ್ಣವಾಗಿ ಹೇಳುತ್ತಾರೆ.

ಮಸ್ತಕದ ಮೇಲೆ ಹಸ್ತವನಿಟ್ಟು ನಿಜ
ವಸ್ತವಾತೆಗೆದು ಹಸ್ತ ಪೀಠದೊಳಿಟ್ಟು
ಸ್ವಸ್ತಿ ಶ್ರೀ ಗುರುವೇ ಕೃಪೆಯಾಗು ಎಂದು

ಇದನ್ನೇ ಕೆರೆಯ ಪದ್ಮರಸ ಮನೋಜ್ಞವಾಗಿ ಹೇಳುತ್ತಾನೆ.

ನಿತ್ಯವಹ ಕಳೆಯುತ್ತಮಾಂ ದೋಳಿರಲ್ಕದಂ
ಮಸ್ತಕದಿ ಶ್ರೀ ಗುರು ಸುಹಸ್ತ ಸಂಗದೋಳದಂ
ಸೆಳೆದು ಭಾವದಿ ಮನ ದೊಳಳವಡಿಸಿ
ನಯನದೊಳು ತಿಳಿದು ದಂತಸ್ಥಲದಿ
ಯಿರಿಸಿದಂ ಲಿಂಗದೋಳ್ (ದೀಕ್ಷಾ ಬೋಧೆ–ಪುಟ–೫೯)

ತ್ರಿವಿಧ ದೀಕ್ಷೆಗಳು ವ್ಯಕ್ತಿಯ–ಆಂತರಿಕ ವಿಕಾಸಕ್ಕೆ ಕಾರಣವಾಗುತ್ತವೆ. ವೇಧಾ ದೀಕ್ಷೆಯಿಂದ ವ್ಯಕ್ತಿಯ ಅಹಂಕಾರ ಅಳಿದು ಸದುವಿನಯ ಸದಾಚಾರಗಳ ನೆಡೆ ನುಡಿಯಲ್ಲಿ ಒಡಮಾಡಿ, ನಿಜದ ಅರಿವಿನ ಜ್ಞಾನ ಉಂಟಾಗುತ್ತದೆ. ಮತ್ತು ನಾನು ಎನ್ನುವ ಅಹಂಕಾರ ನೀಗಿ, ಎಲ್ಲಲ್ಲೂ ದೇವನಿದ್ದಾನೆ ಎನ್ನುವ ಸದ್ಭಾವನೆ ಉಂಟಾಗುತ್ತದೆ. ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ, ಭಾವದಲ್ಲಿ ದಿಗಂಬರನಾಗುವಾ ಸ್ಥಿತಿ. ನಮ್ಮ ಮನಸ್ಸು ಆಸೆ, ರಾಗದ್ವೇಷ ಗಳಿಂದ ತುಂಬಿದೆ. ಮನಸ್ಸು ಮಲಿನವಾಗಿದೆ, ಇಂತಹ ಮನಸ್ಸಿನಿಂದ ನಮಗೂ, ನಮ್ಮ ಸುತ್ತ ಮುತ್ತಲಿನ ಪರಿಸರಕ್ಕೂ ಅಹಿತವಾಗುತ್ತದೆ. ಮನಸ್ಸು ಮಂತ್ರವಾದಾಗ ಮನಃ ಕಷಾಯ ಕಳೆಯುತ್ತದೆ. ಮನಸ್ಸಿಗೆ ಸಂಸ್ಕಾರ ಬೇಕೇ ಬೇಕು, ನಮ್ಮ ಎಲ್ಲ ಒಳಿತು ಕೆಡುಕಗಳಿಗೆ, ಕಾರಣವಾದದ್ದು, ಮನಸ್ಸು, ಮಾನವಿವ ಮನಷ್ಯಾಣಾಂ ಕಾರಣಾಂ ಬಂಧ ಮೋಕ್ಷಯೋಃ ಎಂದು

ಉಪನಿಷತ್ ಇದನ್ನೇ ಹೇಳಿದೆ. ಒಂದರ್ಥದಲ್ಲಿ ಮನಸ್ಸೇ ಮನುಷ್ಯ. ಮನಸ್ಸಿಗೆ ಸಂಸ್ಕಾರ ನೀಡುವುದೇ 'ಮನು ದೀಕ್ಷೆ' ಮಂತ್ರೋಪದೇಶದಿಂದ ಮನಸ್ಸಿಗೆ ದೈವಚಿಂತನೆ, ಸಮತ್ವಬುದ್ಧಿಗಳುಂಟಾಗಿ, ಬದುಕಿನಲ್ಲಿ ಅಭಿವ್ಯಕ್ತ ವಾದಾಗ ಮಂತ್ರ ದೀಕ್ಷೆ ಸಾರ್ಥಕವಾಗುತ್ತದೆ. ಇನ್ನು ಕ್ರಿಯಾದೀಕ್ಷೆಯಿಂದ, ನಾವು ಮಾಡುವ ಸಕಲಕ್ರಿಯ ಭಗವಂತನಿಗಾಗಿ ಎನ್ನುವ ಪ್ರಸಾದ ಭಾವನೆ ಉಂಟಾಗುತ್ತದೆ.

'ಯದ್ಯತ್ ಕರ್ಮಕರೋಮೀ ತತ್ತದಖಿಲಂ ಶಂಭೋತವಾರಾಧನಂ'

ನಾನು ಮಾಡುವ ಎಲ್ಲ ಕಾರ್ಯಗಳು ದೈವಾರಾಧನೆ, ಎನ್ನುವ ಅರ್ಪಣಾ ಭಾವ ಉಂಟಾಗುತ್ತದೆ. ಇದು ಕ್ರಿಯಾದೀಕ್ಷೆಯ ಫಲ.

ಚನ್ನಬಸವಣ್ಣನವರ ವಚನವೊಂದು ದೀಕ್ಷಾ ವಿವರಗಳನ್ನು ವಿಸ್ತಾರ ವಾಗಿ ತಿಳಿಸುತ್ತದೆ.

ಆಣವಮಲ, ಮಾಯಾಮಲ, ಕಾರ್ಮಿಕಮಲವೆಂಬ ಮಲತ್ರಯಂ ಗಳ ಕಳೆದು, ಆಜ್ಞಾದೀಕ್ಷೆ, ಉಪಮಾದೀಕ್ಷೆ ಸ್ವಸ್ತಿಕಾರೋಹಣ, ಕಲಶಾಭಿಷೇಕ, ವಿಭೂತಿಪಟ್ಟ, ಲಿಂಗಾಯತ, ಲಿಂಗಸ್ವಾಯತ, ಈ ಏಳನು ಕಾಯಕ್ಕು ಪದೇಶವ ಮಾಡುವುದು ಸಮಯ–ನಿಸ್ಸಂಸಾರ, ನಿರ್ವಾಣ, ತತ್ತ್ವದೀಕ್ಷೆ, ಆಧ್ಯಾತ್ಮ, ಅನುಗ್ರಹ ಶುದ್ಧವಿದ್ಯೆ ಈ ಏಳನು ಪ್ರಾಣಕ್ಕುಪದೇಶವ ಮಾಡುವುದು ಏಕಾಗ್ರ ಚಿತ್ತ, ದೃಢವ್ರತ, ಪಂಚೇಂದ್ರಿಯಾರ್ಪಿತ, ಅಹಿಂಸೆ ಮನೋಲಯ, ನಿಜಲಿಂಗ, ಸದ್ಯೋನ್ಮುಕ್ತಿ, ಈ ಏಳನು, ಮನಕ್ಕುಪದೇಶವ ಮಾಡುವುದು ಈ ಪ್ರಕಾರದ, ಉಪದೇಶ, ಕೂಡಲಚನ್ನಸಂಗಯ್ಯನಲ್ಲಿ ಸಹಜ ದೀಕ್ಷೆ. ಒಂದೊಂದಕ್ಕೆ ಏಳುಬಗೆಯ ೨೧ ಉಪದೇಶವ ಮಾಡಿ ಶ್ರೀಗುರು, ಶಿಷ್ಯನಿಗೆ ಲಿಂಗವನ್ನು ಸಂಗತಗೊಳಿಸಿ. ಇಲ್ಲಿ ಚನ್ನಬಸವಣ್ಣನವರು ಸ್ಥೂಲ–ಸೂಕ್ಷ್ಮ ಕಾರಣ ಶರೀರಕೋಶದಲ್ಲಿ ಇಷ್ಟ–ಪ್ರಾಣ–ಭಾವ ಲಿಂಗಗಳನ್ನು ಸಂಗಮಗೊಳಿಸಿ, ಸ್ಥೂಲ ಶರೀರಕ್ಕೆ ಬಾಹ್ಯ ಸಂಸ್ಕಾರದ ಕ್ರಿಯೆಯನ್ನು ಸೂಕ್ಷ್ಮ ಶರೀರದ ಪ್ರಾಣಕ್ಕೆ ಆಧ್ಯಾತ್ಮ ಹಾಗೂ ಶುದ್ಧ ವಿದ್ಯೆಯ ಉಪದೇಶದ ಕ್ರಿಯೆಯನ್ನು ಕಾರಣ ಶರೀರದಲ್ಲಿರುವ ಮನಸ್ಸಿಗೆ, ಏಕಾಗ್ರ ಚಿತ್ತ, ಇಂದ್ರಿಯ ಸಂಯಮನ, ದೃಢ ವ್ರತಗಳನ್ನು ಕುರಿತು ಉಪದೇಶ ಮಾಡುವ

ವಿಷಯವನ್ನು ತಿಳಿಸುತ್ತಾರೆ. ಈ ದೀಕ್ಷಾ ಕ್ರಮದಿಂದ ವ್ಯಕ್ತಿಗೆ ಬಾಹ್ಯ ಹಾಗೂ ಆಂತರಿಕ ಸಂಸ್ಕಾರಗಳು ದೊರೆಯುತ್ತವೆ.

ಇಂತಹ ಆದ್ಯಾತ್ಮದ ಸಂಸ್ಕಾರ ನೀಡಲು ವೀರಶೈವ ಧರ್ಮದಲ್ಲಿ ಗುರುವಿನ ಪಾತ್ರ ಮಹತ್ವದ್ದಾಗಿದೆ. ಶಿವಪಥವ ನರಿವೊಡೆ ಗುರು ಪಥವೆ ಮೊದಲು ಎನ್ನುತ್ತಾರೆ ಬಸವಣ್ಣನವರು. ಕಾರಣ, ಲಿಂಗದೀಕ್ಷೆಯನ್ನು ನೀಡಿ, ಅಧ್ಯಾತ್ಮದ ಉಪದೇಶ ಮಾಡಿ, ಸಾಧನೆಯಲ್ಲಿ ತೊಡಗಿಸುವವನು ಗುರು, ಆದ್ದರಿಂದ ಭಾರತೀಯ ಸಾಹಿತ್ಯದಲ್ಲಿ ಗುರುಬ್ರಹ್ಮ-ಗುರುವಿಷ್ಣುಃ, ಗುರು ದೇವೋ, ಮಹೇಶ್ವರಃ ಎಂದು ಅಗ್ರಸ್ಥಾನ ನೀಡಿದ್ದಾರೆ, ವಚನ ಸಾಹಿತ್ಯದಲ್ಲಿ ಶರಣರು ಗುರುವಿನ ಮಹತ್ವವನ್ನು ಅರ್ಥಪೂರ್ಣವಾಗಿ ತಿಳಿಸುತ್ತಾರೆ. 'ಗುರು ವಿಡಿದು ಕುರುಹಕಾಣಬೇಕು. ಗುರುವಿಡಿದು ಅರುಹಕಾಣಬೇಕು, ಗುರು ವಿಡಿದು ಆಚಾರವಕಾಣಬೇಕು, ಗುರುವಿನಿಂದ ಲಿಂಗ-ಜಂಗಮರನ್ನು ಕಾಣ ಬೇಕು, ಮುಂದೆ-ಗುರು-ಹಿಂದೆ ಲಿಂಗ'ವೆಂದು ಗುರುವೇ ಸರ್ವಸ್ವ ಎನ್ನುವ ವಿಚಾರವನ್ನು ತಿಳಿಸುತ್ತಾರೆ.

'ಎನ್ನ ಕರಸ್ಥಳ ಮಧ್ಯದಲ್ಲಿ ಪರಮನಿರಂಜನ ಕುರುಹುದೋರಿದ.'

ಆ ಕುರುಹಿನ ಮಧ್ಯದಲ್ಲಿ ಅರುಹಿನಕಳೆ ತೋರಿದ, ಆಕಳೆಯ ಮಧ್ಯದಲ್ಲಿ ಮಹಾಜ್ಞಾನದ ಬೆಳಕು ತೋರಿದ, ಆ ಬೆಳಕಿನ, ನಿಲುವಿನೊಳಗೆ ಎನ್ನ ತೋರಿದ ಎನ್ನೊಳಗೆ ತನ್ನ ತೋರಿದ ತನ್ನೊಳಗನ್ನು ಇಂಬಿಟ್ಟಿ ಕೊಂಡ ಮಹಾಗುರುವಿಗೆ ನಮೋ ನಮೋ ಎನ್ನುತ್ತಿದ್ದೆನಯ್ಯ ಅಖಂಡೇಶ್ವರ ಎಂದು ಗುರುವಿನ ಮಹತ್ವವನ್ನು ಕೊಂಡಾಡುತ್ತಾರೆ ಷಣ್ಮುಖ ಶಿವಯೋಗಿಗಳು.'

ಇನ್ನೊಂದು ವಚನದಲ್ಲಿ:

ಅಂಗಕ್ಕೆ ಲಿಂಗವ ಕೊಟ್ಟವ ಆಚಾರ್ಯನಾದ, ಮನಕ್ಕೆ ಅರುಹ ತೋರಿದಾತ ಶಿಕ್ಷಾ ಗುರುವಾದ, ಮೋಕ್ಷ ವಿಮೋಕ್ಷವಾಗಿ ಉಭಯದ ಗೊತ್ತ ತೋರಿ ಕಾಯದಕರ್ಮವ ಕೆಡಿಸಿ, ಜೀವನ ಭವವ ಛೇಧಿಸಿ ತದ್ರೂಪವ ತೋರಿದಾತ ಜ್ಞಾನಗುರು. ಆತ ಪರಮಪ್ರಕಾಶ, ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವು ತಾನೇ ಎಂದು ಹೀಗೆ ಶರಣರು ಗುರು ತ್ರಿಮುಖ ನಾಗಿ ಸಾಧಕನನ್ನು ಕೈಹಿಡಿದು ನೆಡೆಸುತ್ತಾನೆ ಎಂದು ಅರ್ಥಪೂರ್ಣವಾಗಿ ತಿಳಿಸುತ್ತಾರೆ.

'ಅಪ್ರತ್ಯಕ್ಷೋ ಮಹಾದೇವಃ ಪ್ರತ್ಯೇಕ್ಷೋ ಗುರು ರೂಪೇಣ ವರ್ತತೆ' ಎಂದು ಸಿದ್ಧಾಂತ ಶಿಖಾಮಣಿಯಲ್ಲಿ ಕಣ್ಣಿಗೆ ಕಾಣಲಾರದ ದೇವನು ಗುರು ರೂಪದಲ್ಲಿ ಕಾಣುತ್ತಾನೆಂದು ಗುರುವಿನ ಮಹತ್ವ ಉಕ್ತವಾಗಿದೆ. ಗುರುವಿನ ಲಕ್ಷಣವನ್ನು ಸೂಕ್ಷ್ಮಾಗಮ ಅರ್ಥಪೂರ್ಣವಾಗಿ ಬಣ್ಣಿಸುತ್ತದೆ.

ಶಿವೈಕಾಹಿತ ಚಿತ್ತಚ್ಚ ಶಿವಲಿಂಗಾರ್ಚನ ಪರಃ
ಸದಾಚಾರೈಕ ನಿರತಃ ಸರ್ವತ್ರಸಮದರ್ಶನಃ ।
ಶಿವಭಕ್ತ, ಶಿವಚಿಂತಕ, ಇಷ್ಟಲಿಂಗಾರ್ಚಕ, ಸದಾಚಾರನಿರತ ॥

ಹಾಗೂ ಸರ್ವತ್ತ ಸಮದರ್ಶಿಯಾದ ಗುರುವನ್ನು ಈ ಆಗಮ 'ಸಾಕ್ಷಾತ್ ಸರ್ವಜಗತ್ಪ್ರಭುಃ' ಎಂದು ಗುರುವಿನ ಆಗ್ಗಳಿಕೆಯನ್ನು ಸಾರುತ್ತದೆ. ವೀರಶೈವ ಸಿದ್ಧಾಂತ ಗ್ರಂಥವಾದ ಸಿದ್ಧಾಂತ ಶಿಖಾಮಣಿಯಲ್ಲಿ, ಗುರುಗಳಲ್ಲಿ ಮೂರು ವಿಧವೆಂದು ಹೇಳಿದೆ. ದೀಕ್ಷಾಗುರು–ಶಿಕ್ಷಾಗುರು–ಜ್ಞಾನಗುರು ಅಥವಾ ಮೋಕ್ಷಗುರು ಎಂದು. ಮೋಳಿಗೆಯ ಮಾರಯ್ಯನ ವಚನವೊಂದು ಹೀಗಿದೆ.

'ಕರ್ಮ ಕ್ರೀ ಆಚಾರ ಸಂಬಂಧವ ಸಂಬಂಧಿಸಿ ಮಾಡುವಲ್ಲಿ ದೀಕ್ಷಾ ಗುರು ಆ ಕ್ರಿತಪ್ಪಿದಲ್ಲಿ ಬಂಧನವ ಮಾಡುವಲ್ಲಿ ಶಿಕ್ಷಾಗುರು ಇಷ್ಟ ಹಾಗೂ ಇಷ್ಟಕಾಮ–ಮೋಕ್ಷಂಗಳ ಹೊತ್ತಿಗೆಡಿಸಿ ನಿಶ್ಚಯಿಸಿ ಮಾಡುವಲ್ಲಿ ಮೋಕ್ಷಗುರು ಇಂತೀ ಭೇದವ ನರಿಯ ಬಲ್ಲಡೆ ಪರಮಗುರು' ಎನ್ನುತ್ತಾನೆ. ಗುರು ನಿರ್ವಹಿಸ ಬೇಕಾದ ಮೂರು ಮುಖ್ಯಕಾರ್ಯಗಳನ್ನು ಈ ವಚನ ಸೂಚಿಸುತ್ತದೆ. ಗುರು ಹೇಗಿರಬೇಕು ? ಎಂಥವನಿಗೆ ದೀಕ್ಷೆ ಮಾಡಬಾರದು ಎನ್ನುವ ವಿಚಾರವನ್ನು ತೋಂಟದ ಸಿದ್ಧಲಿಂಗರು ಮಾರ್ಮಿಕವಾಗಿ ತಿಳಿಸಿದ್ದಾರೆ.

ಗುರುವೆಂಬಾತನು ಸಕಲಾಗಮದ ಹೃದಯವನ್ನರಿತು, ಕ್ರಿಯೆ ಮತ್ತು ಜ್ಞಾನಯುಕ್ತನಾಗಿ, ತನ್ನತಾನರಿದು ಸರ್ವಾಚಾರ ಸಂಪನ್ನತೆ ನೆಲೆಗೊಂಡು, ನಿರ್ಣಯದ ಗೊತ್ತನರಿದು ಉಪದೇಶ ಮಾಡಬೇಕು ಶಿಷ್ಯನ ಯೋಗ್ಯತೆ ಯನ್ನು ಪರೀಕ್ಷಿಸಬೇಕು, ಆತ–ಕಾಯ–ಜೀವ–ಮನಗಳನ್ನು, ಶುದ್ಧ ಮಾಡ ಬೇಕು, ಆಚಾರ ಭ್ರಷ್ಟರಿಗೆ, ಹಸ್ತಾನುಗ್ರಹ ಮಾಡಬಾರದು. ಗುರುವಿಗೆ ತಕ್ಕಶಿಷ್ಯ ಆಧ್ಯಾತ್ಮ ಕ್ಷೇತ್ರದಲ್ಲಿ ಸಿಗುವುದು ಒಂದು ಮಂಗಳದ ಘಟನೆ. ಅನರ್ಹನಿಗೆ ನೀಡುವ ದೀಕ್ಷೆ ಹಸನ ಮಾಡಿ ಹರಡಿದ ಹೊಲದಲ್ಲಿ ಕಸವನ್ನು

ತುಂಬುವ ಮರುಳತನವಾಗುತ್ತದೆ ಎಂದು ತೋಂಟದ ಸಿದ್ಧಲಿಂಗರು ಉಚ್ಚರಿಸಿದ್ದಾರೆ. ಸದ್ಗುರು ಉರಿಯುವ ಪಂಜಿನಂತೆ, ಯೋಗ್ಯನಾದ ಶಿಷ್ಯ ಒಣಗಿದ ಸೌದೆಯಂತಿರಬೇಕು, ಒಣಗಿದ ಸೌದೆ ಬೆಂಕಿ ಸ್ಪರ್ಶವಾದ ಕೂಡಲೇ ಹತ್ತಿಕ್ಕೊಳ್ಳುತ್ತದೆ ಹಸೀ ಸೌದೆಯಾದರೆ ಹತ್ತುವುದಿಲ್ಲ. ಹಾಗೆಯೇ ಶಿಷ್ಯ ಒಣ ಸೌದೆಯಂತಿರಬೇಕು ಅಂದರೆ ಗುರುವಿನ ಉಪದೇಶ ಎನ್ನುವ ಜ್ಞಾನದ ಕಿಡಿ ಅವನಲ್ಲಿ ಹೊತ್ತಿಕೊಳ್ಳುತ್ತದೆ. ಗುರುಗಳಿಗೂ ಶಿಷ್ಯನ ಬಗ್ಗೆ ಅಹೇತುಕ ಪ್ರೇಮ ಭಾವನೆ ಇರಬೇಕು. ಶಿಷ್ಯನಿಗೆ, ಗುರುವಿನ ಬಗ್ಗೆ ಅಚಲ ಹಿಮಾಚಲದ ಶ್ರದ್ಧೆ ಇರಬೇಕು. ಧಾರ್ಮಿಕ ಕ್ಷೇತ್ರದಲ್ಲಿ ಗುರು-ಶಿಷ್ಯರ ಸಂಬಂಧ ಅನ್ಯೋನ್ಯವಾಗಿರಬೇಕು ಇಲ್ಲದೆ ಹೋದರೆ ಇಬ್ಬರಿಗೂ ಹಾನಿ ಯಾಗುತ್ತದೆ.

ಜ್ಞಾನಾ-ಜ್ಞಾನದಲ್ಲಿ ಅರಿವಿಲ್ಲದ ಗುರುವು
ಆಚಾರಿಲ್ಲದ ಶಿಷ್ಯ ಇವರೀರ್ವರೂ ಚರಿಸಿ

ಬೆಡಗಿನ ಭವನಕ್ಕೆ ಗುರಿಯಾದರು ನೋಡಾ ಎನ್ನುತ್ತಾನೆ ಸಿದ್ಧರಾಮ. ಇಲ್ಲಿ ಗುರುಶಿಷ್ಯರ ಜವಾಬುದಾರಿಯನ್ನು ತಿಳಿಸುತ್ತಾರೆ. ಮತ್ತೊಂದು ವಚನ ದಲ್ಲಿ-

ಶಿಲಾಲಿಖಿತವ ಕಳೆದು
ಕಳಾಭೇದವ ನರಿದು ಕಳೆಯ ತುಂಬಿ

ಕೊಡಬಲ್ಲರೆ, ಗುರುವೇ, ಕೊಂಬಾತ ಶಿಷ್ಯನೆಂಬೆನಯ್ಯ ಎಂದು ಗುರುಶಿಷ್ಯರ ಅರ್ಹತೆಯನ್ನು ಅರಹುತ್ತದೆ. ಬ್ರಾಹ್ಮಣನಾಗಲಿ, ಕ್ಷತ್ರಿಯ ನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ, ಆವ ಜಾತಿಯಲ್ಲಿ ಹುಟ್ಟಿದಾತ ನಾದರೂ, ಆಗಲಿ, ಗುರುಪುಣ್ಯವ ಪಡೆದು, ಅಂಗದ ಮೇಲೆ ಲಿಂಗಧರಿಸಿ ದವನು, ಆಚಾರಸಂಪನ್ನ ಸತ್‌ಕ್ರಿಯನಾದ, ಮಹಾತ್ಮನೇ ದೀಕ್ಷೆಗೆ, ಅರ್ಹ ನೆಂದು ಷಣ್ಮುಖ ಶಿವಯೋಗಿಗಳು ತಿಳಿಸುತ್ತಾರೆ 'ಜಾತಿ-ಅಧಿಕಾರ ಅಂತಸ್ತು ಮೊದಲಾದ ಉಪಾಧಿವಿಡಿದು ಉಪದೇಶಮಾಡುವವನು ಗುರುವಲ್ಲ ಉಪಾಧಿಯಲ್ಲಿ ದೀಕ್ಷೆ ಕೊಂಬಾತ ಶಿಷ್ಯನು ಇದು ಠಕ್ಕನ ಮನೆಗೆ ಠಕ್ಕ ಬಂದಂತೆ. ಎಂದು ಚನ್ನಬಸವಣ್ಣನವರು ನಿಖರವಾಗಿ ತಿಳಿಸುತ್ತಾರೆ. ದೀಕ್ಷೆಗೆ ಅರ್ಹತೆ ಜಾತಿ ಅಂತಸ್ತು ಅಧಿಕಾರದಿಂದ ಬರುವುದಿಲ್ಲ ಅದು ಸ್ವಭಾವತಃ

ಆಧ್ಯಾತ್ಮಿಕ ಒಲವಿನಿಂದ ಬರಬೇಕಾದದ್ದು. ದೀಕ್ಷಾ ಸಂದರ್ಭದಲ್ಲಿ ಶಕ್ತಿ ಪಾತದ ಕಲ್ಪನೆ ಅಮೂಲ್ಯವಾದದ್ದು ಗುರು ಕೃಪೆಗೆ ಪಾತ್ರನಾದವನು ದೀಕ್ಷೆಗೆ ಅರ್ಹ ತಾನಾಗುತ್ತಾನೆ.'

ಎಲ್ಲರ ದೀಕ್ಷೆಯ ಪರಿಯಂತಲ್ಲ
ಎಮ್ಮಯ್ಯನ ದೀಕ್ಷೆ
ನಡೆ–ನಾಡಿ ಶುದ್ಧವಾದವರಿಗಲ್ಲದೆ
ಅನುಗ್ರಹಿಸ ನೋಡಾ

ಎಂದು ಚೆನ್ನಬಸವಣ್ಣನವರು ಶಿಷ್ಯನ ಅರ್ಹತೆಯನ್ನು ಸೂಚಿಸುತ್ತಾರೆ. ಗುರುವಿನ ಕಾರುಣ್ಯವಾದರೂ, ಗುರುವಿನ ಉಪದೇಶವನ್ನು ಪಾಲಿಸುವ ಸಾಧಿಸುವ ಶ್ರದ್ಧೆ–ನಿಷ್ಠೆ ಅವಧಾನಗಳು ಶಿಷ್ಯನಲ್ಲಿ ಇರಬೇಕಾಗುತ್ತದೆ. ದೀಕ್ಷೆಯಿಂದ ಶಿಷ್ಯನಿಗೆ ಧರ್ಮದರ್ಶನ, ಗುರುಕರುಣೆ ಲಭಿಸುತ್ತದೆ. ಇಷ್ಟರಲ್ಲೇ ಪ್ರಯೋಜನವಿಲ್ಲ. ಗುರುವಿನ ಉಪದೇಶವನ್ನು ಶಿಷ್ಯನೂ ಜೀವನದುದ್ದಕ್ಕೂ ವ್ರತದಂತೆ ಅನುಷ್ಠಾನಕ್ಕೆ ತರಬೇಕು. ಶಿಷ್ಯನ ಸಾಧನ ಬಲ–ಪ್ರಯತ್ನಗಳು ಅತ್ಯವಶ್ಯಕ.

ಆಧ್ಯಾತ್ಮಿಕ ದಾರಿ, ಅದು ಸಾಹಸದ ದಾರಿ. ಆದರ್ಶಗಳನ್ನು ಪಾಲಿಸಬೇಕಾದರೆ ಅವಿಶ್ರಾಂತ ಕ್ರಿಯೆ ಬೇಕು, ತಾಳ್ಮೆ ಬೇಕು, ಜೀವನ ಮೌಲ್ಯಗಳನ್ನು ಅರ್ಥಮಾಡಿಕೊಂಡು, ಅನುಷ್ಠಾನ ಮಾಡಿದರೆ ಜೀವನ ಪವಿತ್ರವಾಗುತ್ತದೆ.

ವಿಜ್ಞಾನವನ್ನು ಪ್ರಯೋಗ ಶಾಲೆಯಲ್ಲಿ ಪರೀಕ್ಷೆ ಮಾಡುವಂತೆ ಗುರುವಿನೋಪದೇಶವನ್ನು ಸಾಧನೆಯ ಪ್ರಯೋಗ ಶಾಲೆಯಲ್ಲಿ ಪರೀಕ್ಷೆ ಮಾಡಬೇಕು.

ದೀಕ್ಷೆ ದುರ್ಬಲರಿಗೆ, ಹೇಡಿಗಳಿಗೆ, ಸೋಮಾರಿಗಳಿಗೆ ಸಲ್ಲದು. ದೀಕ್ಷೆಯ ಸಫಲತೆ–ಗುರೋಪದೇಶವನ್ನು ಶಿಷ್ಯನು ಜೀವನದಲ್ಲಿ ಅಳವಡಿಸಿಕೊಂಡಾಗ ಮಾತ್ರ, 'ಕೈದುವ ಕೊಡಬಹುದಲ್ಲದೆ ಕಲಿತನವ ಕೊಡಬಹುದೆ ?'......

'ಸದ್ಗುರು ಕಾರುಣ್ಯವಾದರೂ, ಸಾಧಿಸಿದವನಿಲ್ಲ ಸಕಲೇಶ್ವರಾ' ಎಂದು ಸಕಲೇಶ ಮಾದರಸ, ಸಾಧನೆಯ ಮಹತ್ವವನ್ನು ಎತ್ತಿಹೇಳುತ್ತಾನೆ.

## ದೀಕ್ಷಾಕಾಲದಲ್ಲಿ ಗುರುಗಳ ಉಪದೇಶ

ಓ ॥ ಶಿಷ್ಯನೆ ನಿನ್ನನ್ನು ಹೆತ್ತ(ಕರುಣಿಸಿದ) ಶ್ರೀ ಗುರುವನ್ನು ಎಂದಿಗೂ ಮರೆಯದಿರು. ಶ್ರೀ ಗುರುವಿನ ವಚನವನ್ನು ಮೀರಬೇಡ. ಗುರುವಾಜ್ಞೆಗಿಂತ ಹಿರಿದಾದ ಅಮೃತವಿಲ್ಲ ಧರೆಯಲ್ಲಿ ನರಜನ್ಮಕ್ಕಿಂತ ಮಿಗಿಲಾದ ಮತ್ತೊಂದು ಜನ್ಮವಿಲ್ಲ. ಕರಣ ವಿಜಯಕ್ಕಿಂತ ಕಲಿತನವಿಲ್ಲ. ಇಷ್ಟಲಿಂಗ ಪೂಜೆಯಿಂದ ಬೇರೆ ಪೂಜೆಯಿಲ್ಲ.

ಅಭಕ್ಷ್ಯ ಭಕ್ಷಣ ಮಾಡದಿರು. ಅಪೇಯಪಾನ ಬಿಟ್ಟು ಬಿಡು. ಸಾತ್ವಿಕ ಆಹಾರವನ್ನು ಸೇವಿಸು. ಶಾಖಾಹಾರವನ್ನು ಭುಂಜಿಸು. ಅತಿಯಾಗಿ ಉಣ ಬೇಡ, ಅನೇಕವೇಳೆ ಉಣ್ಣಬೇಡ. ಓಗರ ಸೇವಿಸುವಾಗ ಅಲ್ಲ ಸಲ್ಲದುದನ್ನು ನೆನೆಯದಿರು. ಅವಾಚ್ಯ ವಾಕ್ಯಗಳ ನುಡಿಯದಿರು, ಲಿಂಗಕ್ಕೆ ನಿವೇದಿಸದಿರ ಬೇಡ. ಹುಟ್ಟು–ಮುಪ್ಪು–ಸಾವುಗಳಿಗೆ ಅಳುಕಬೇಡ, ಜೀವನದಲ್ಲಿ ಬರುವ ಕಷ್ಟ–ನಷ್ಟಗಳಿಗೆ ಅಂಜಬೇಡ. ನಿನ್ನ ನೆರೆಹೊರೆಯವರಿಗೂ ನೆರವಾಗು ಹೊರೆಯಾಗಬೇಡ. ಅನ್ಯಾಯಕ್ಕೆ ಅನಾಚಾರಕ್ಕೆ ದುಡುಕದಿರು, ದೀನದುಃಖಿತ ರಲ್ಲಿ ದಯವುಳ್ಳವನಾಗಿರು. ಅನ್ಯಾಯಕ್ಕೆ ಮಣಿಯದಿಹ ಮನವಿರಲಿ ಒಳಿತನ್ನು ಸಾಧಿಸುವ ಹಟವಿರಲಿ. ನಿಜದ ನೇರಕೆ ನಡೆವೆ ದೃಢಸಂಕಲ್ಪವಿರಲಿ. ಅನೀತಿಗೆ ಎಂದೆಂದಿಗೂ ತಲೆಬಾಗದಿರುವ ಎಚ್ಚರವಿರಲಿ. ದಿಟ್ಟವನಾಡು. ದಿಟದಲ್ಲಿ ನಡೆ ಮಂಗಳರೂಪಗಳ ನೋಡು ಮಂಗಳ ಶಬ್ದ ಕೇಳು. ಮಂಗಳ ಪದಗಳ ಹಾಡು. ಪವಿತ್ರ ಸ್ಥಳಗಳಿಗೆ ಹೋಗು. ಸತ್ಪುರುಷರಿಗೆ ತಲೆಬಾಗು. ಕಾರ್ಪಣ್ಯ ವರ್ಗಕ್ಕೆ ಒಳಗಾಗಬೇಡ. ದಾಕ್ಷಿಣ್ಯಕ್ಕೆ ಮನಸೋಲಬೇಡ, ಸತ್ಪಾತ್ರದಲ್ಲಿ ದಾನ ಮಾಡು, ಭಿಕ್ಷೆ ಬೇಡ ಬೇಡ. ಕಾಯದಕತ್ತಲೆ, ಮನದ ಮೈಲಿಗೆ ತೊಳೆ. ಮದ–ಮತ್ಸರಗಳನ್ನು ಬಿಡು. ಕಾಯಕ ನಿರತನಾಗು ಗುರು ಲಿಂಗಜಂಗಮರಲ್ಲಿ ಶ್ರದ್ಧೆ ಇಡು. ದಾಸೋಹ ವ್ರತ ಬಿಡಬೇಡ. ಲೋಕಸೇವಾಸಕ್ತಿಯನ್ನು ತಳೆ. ಕೀರ್ತಿ ವಂತನಾಗಿ ಬಾಳು. ಕೊನೆಯದಾಗಿ ನೆನಪಿಡು.

ನಿನ್ನ ಪ್ರಾಣದಷ್ಟು ಪ್ರಿಯವಾದ ವಸ್ತು ಇಷ್ಟಲಿಂಗವೆಂದು ತಿಳಿ. ಇದೇ ತತ್ತ್ವಾತೀತವಾದ ಪರವಸ್ತು ಹರಿಬ್ರಹ್ಮಾದಿಗಳು ಅರಸಿಕಾಣದ ನಿಜತತ್ತ್ವ. ಇದನ್ನು ನೀನು ಒಂದು ಕ್ಷಣ ಕಾಲವಾದರೂ ಅಗಲಿರಬೇಡ. ನಿನ್ನ ದೇಹ ದಿಂದ ಎಂದೂ ಇದನ್ನು ಅಗಲಿಸಬೇಡ, ಸದಾ ಸಾವಧಾನದಿಂದ ಧರಿಸು. ನಿನ್ನ

ಜೀವಿತದ ಕೊನೆಯವರೆಗೂ ಬರುವ ಪರಾತ್ಪರ ವಸ್ತು ಇದೊಂದು ಎಂದು ತಿಳಿ. ಈ ಇಷ್ಟಲಿಂಗವನ್ನು ತ್ರಿಕಾಲವು ಪೂಜಿಸು. ಲಿಂಗಾರ್ಪಿತವಲ್ಲದ ಏನನ್ನು ಸ್ವೀಕರಿಸದಿರು ಈಗ ಸಕಲ ಭೋಗ–ಮೋಕ್ಷಗಳು ನಿನ್ನ ಕೈಸೇರಿದವು. ಇದನ್ನು ನಂಬು. ನಿತ್ಯ ಸುಖಿಯಾಗಿರು. ನಿನ್ನ ಜೀವನ ಬೆಳಗಾಗಲಿ ಇದು ಸತ್ಯ ಎಂದು ಗುರು ಉಪದೇಶ ಮಾಡುತ್ತಾರೆ.

ಈ ಎಲ್ಲ ಉಪದೇಶ, ಶಿಷ್ಯನ ಸಾಧನೆಯಲ್ಲಿ ಸಾರ್ಥಕವಾದರೆ ಆಗ ದೀಕ್ಷೆಯ ಉದ್ದೇಶ ನೆರವೇರಿದಂತಾಗುತ್ತದೆ.

# ಶಿವಯೋಗದ ನೆಲೆ – ಹಿನ್ನೆಲೆ

ಯೋಗಿ ಹೃತ್ಪದ್ಮವಾಸಾಯ
ಯೋಗಿ ವೇದ್ಯ ಸ್ವರೂಪಿಣೇ
ಬ್ರಹ್ಮತತ್ತ್ವ ಪ್ರಕಾಶಾಯ
ಶಿವಾಯ ಶಿವತೇ ನಮಃ (ಪ. ಆ. ಪ. ೧೦–ಶ್ಲೋಕ)

ಯೋಗಿಗಳ ಹೃದಯ ಕಮಲದಲ್ಲಿ ವಾಸಿಸುವ, ಯೋಗಿಗಳು ತಿಳಿಯಬಲ್ಲ ಸ್ವರೂಪಿಯಾದ ಶಿವತತ್ತ್ವವನ್ನು ಪ್ರಕಾಶ ಪಡಿಸುವ; ಶಿವನಾದ ನಿನಗೆ ನಮಸ್ಕಾರ.

## ಯೋಗದ ನೆಲೆ : ಹಿನ್ನೆಲೆ :

ವೀರಶೈವದ ಶಿವಯೋಗವನ್ನು ಶಾಸ್ತ್ರೀಯವಾಗಿ ಪ್ರತಿಪಾದಿಸುವ ಏಕೈಕ ಕೃತಿ ಚನ್ನಸದಾಶಿವಯೋಗಿಗಳ ಶಿವಯೋಗಪ್ರದೀಪಿಕಾ (ಕ್ರಿ.ಶ. ೧೫೫೮) ಇದರ ಟೀಕಾಕಾರ ಶಾಸ್ತ್ರ ಪ್ರವೀಣ–ಉಭಯಭಾಷಾ ಕೋವಿದ ಶ್ರೀ ಬಸವಾರಾಧ್ಯ. ಆತ ವೀರಶೈವ ಮಾರ್ಗ ಸ್ಥಾಪನಾಚಾರ್ಯ ಎಂದು ಹೇಳಿಕೊಂಡಿದ್ದಾನೆ. ಈ ಕೃತಿಯಲ್ಲಿ ಶಿವಯೋಗದೊಂದಿಗೆ ಬೇರೆ ಯೋಗದ ಪ್ರಭೇದಗಳು ಪ್ರತಿಪಾದಿತವಾಗಿವೆ. ಪಾತಂಜಲಿ ಯೋಗ ಶಾಸ್ತ್ರಕ್ಕಿಂತ ಒಂದು ಹೆಜ್ಜೆ ಮುಂದೆ ಇಟ್ಟ ವೈಶಿಷ್ಟ್ಯಪೂರ್ಣ ಕೃತಿ ಇದು ಎಂದು ಹೇಳ ಬಹುದು. ಈ ಕೃತಿಯ ಆಧಾರದ ಮೇಲೆ ಶ್ರೀ ನಿಜಗುಣರು ಪಾರಮಾರ್ಥ ಪ್ರಕಾಶಿಕೆಯನ್ನು ರಚಿಸಿದ್ದಾರೆ. ಹೀಗೆ ಸಂಸ್ಕೃತ–ಕನ್ನಡದ ಎರಡು ಕೃತಿಗಳು ಶಿವಯೋಗವನ್ನು ಕುರಿತು ನಮಗೆ ದೊರೆಯುತ್ತವೆ. ಶಿವಯೋಗ ವಸ್ತು 'ಶಿವ ಯೋಗ' ಗ್ರಂಥದ ಕೊನೆಯಲ್ಲಿ ಚನ್ನಸದಾಶಿವ ಯೋಗಿಗಳು ''ಶಿವಾಗಮ ರಹಸ್ಯಾರ್ಥಾನ್ ಸಿದ್ಧ–ಸಿದ್ಧಾಂತ ಪದ್ಧತಿ ಸಂಕ್ಷೇಪತಃ ಕೃತಾಲೋಢ್ಯ'' ಎನ್ನು ತ್ತಾರೆ. ಅಂದರೆ ಶಿವಾಗಮಗಳ ಸಿದ್ಧ–ಸಿದ್ಧಾಂತ ಪದ್ಧತಿ ಕೃತಿಗಳು ಅವಲೋಕನದಿಂದ ರಚಿಸಿ ಕೃತಿ ಎಂದು ತಿಳಿಸುತ್ತಾರೆ.

ಭಾರತೀಯ ದರ್ಶನಗಳಲ್ಲಿ ನ್ಯಾಯ, ವೈಶೇಷಿಕ, ಸಾಂಖ್ಯ ಯೋಗ, ಪೂರ್ವಮೀಮಾಂಸ, ಉತ್ತರ ಮೀಮಾಂಸ ಇವು ಷಡ್‌ದರ್ಶನಗಳು. ಈ ಷಡ್‌ದರ್ಶನಗಳಲ್ಲಿ ಯೋಗದರ್ಶನವೂ ಒಂದು. ಷಡ್‌ದರ್ಶನಗಳಲ್ಲಿ ಐದು ದರ್ಶನಗಳ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯ ಕಂಡುಬಂದರೂ ಯೋಗದ ಬಗ್ಗೆ ಭಿನ್ನಾಭಿಪ್ರಾಯಗಳಿಲ್ಲ. ಆದರೂ, ಭಾರತೀಯ ವಾಙ್ಮಯದಲ್ಲಿ ಯೋಗ ಗ್ರಂಥಗಳು ಕಡಿಮೆ. 'ಹಠಯೋಗ ಪ್ರದೀಪಿಕಾ', 'ಘೇರಂಡ ಸಂಹಿತಾ', 'ಗೋರಕ್ಷ ಪದ್ಧತಿ', 'ಯೋಗತಾರಾವಳಿ', 'ಸಿದ್ಧ-ಸಿದ್ಧಾಂತ ಪದ್ಧತಿ', 'ಯೋಗತತ್ತ್ವೋಪನಿಷತ್', 'ಯೋಗಶಿಖೋಪನಿಷತ್', 'ಷಟ್ಚಕ್ರ ಚಿಂತಾಮಣಿ', 'ರಾಜಯೋಗ-ಚಿಂತಾಮಣಿ' ಇವು ಪ್ರಮುಖ ಕೃತಿಗಳು. ಇವುಗಳಲ್ಲಿ ಹೆಚ್ಚು ಪ್ರಸಿದ್ಧಿ ಮಾನ್ಯ ಪಡೆದ ಕೃತಿ ಪಾತಂಜಲಿಯ ಯೋಗದರ್ಶನ. ವೇದಗಳಲ್ಲಿ ನಾಸದೀಯ ಸೂಕ್ತ, ಪುರುಷ ಸೂಕ್ತ, ಶಿವಾಗಮಗಳು, ಶ್ವೇತಾಶ್ವರತರ, ಕಠ ಹಾಗೂ ತೈತ್ತರೀಯದಲ್ಲಿ ಯೋಗದ ಪರಿಕಲ್ಪನೆಗಳು ಕಂಡುಬರುತ್ತವೆ. ಹೀಗೆ ಅಲ್ಲಲ್ಲಿ ಚದುರಿ ಹೋಗಿದ್ದ ಯೋಗದ ಮುಖ್ಯ ಲಕ್ಷಣಗಳನ್ನು ಆಯ್ದು ಪತಂಜಲಿ ವಿಷಯಕ್ಕನು ಸಾರವಾಗಿ, ವ್ಯವಸ್ಥೆಗೊಳಿಸಿ, ೧೯೬ ಸೂತ್ರಗಳನ್ನು, ೪ ಅಧ್ಯಾಯಗಳಲ್ಲಿ ವಿಂಗಡಿಸಿ ಶಾಸ್ತ್ರೀಯವಾಗಿ ನಿರೂಪಿಸಿದ ಈ ಕೃತಿ ಯೋಗದ ಸಂಪೂರ್ಣ ಪರಿಚಯ ಮಾಡಿಕೊಡುತ್ತದೆ. ಯೋಗಶಾಸ್ತ್ರಕ್ಕೆ ಇದೊಂದು ಅಪೂರ್ವವಾದ ಕೊಡುಗೆ. ಈ ಕೃತಿಯಿಂದ ಪ್ರೇರಣೆಪಡೆದ ಯೋಗದ ಶಾಖೆಗಳು ಅನಂತ ವಾಗಿವೆ. ಶಿವಯೋಗ, ಹಠಯೋಗ, ಜ್ಞಾನಯೋಗ, ರಾಜಯೋಗ, ಭಕ್ತಿ ಯೋಗ, ಕುಂಡಲಿನೀ ಯೋಗ, ಮಂತ್ರಯೋಗ ಲಯಯೋಗ ಇತ್ಯಾದಿ.

ಪತಂಜಲಿಯ ಕಾಲ ಕ್ರಿ.ಶ. ೪೨೦ ಎಂದು ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯ. ಈತನ ಕಾಲ ೪೦೦೦ ವರ್ಷಗಳ ಪೂರ್ವ ಎನ್ನುವ ಅಭಿಪ್ರಾಯವೂ ಇದೆ. ಪಾತಂಜಲಿ ಯೋಗ ಸೂತ್ರಕ್ಕೆ ವ್ಯಾಸಭಾಷ್ಯ. ಈ ಭಾಷ್ಯಕ್ಕೆ ವಾಚಸ್ಪತಿ ಮಿಶ್ರ, ವಿಜ್ಞಾನ ಭಿಕ್ಷು ಮೊದಲಾದವರು ರಚಿಸಿದ ಬೇರೆ ಟಿಪ್ಪಣಿಗಳು ಇವೆ.

ನಮ್ಮ ದೇಶದಲ್ಲಿ 'ಯೋಗ' ಎಂದರೆ ಬಹುಪಾಲು ಜನರು ಯಕ್ಷಿಣಿ-ಸಿದ್ಧಿ, ಯಂತ್ರ-ಮಂತ್ರ, ಭವಿಷ್ಯ ಇತ್ಯಾದಿ ಏನೇನೋ ಭಾವಿಸಿದ್ದಾರೆ. ಇತ್ತೀಚಿಗೆ ಯೋಗವು ಬೇರೆ ಬೇರೆ ಹೆಸರುಗಳಿಂದ ಪ್ರಚಾರವಾಗುತ್ತಿದೆ.

ಶಕ್ತಿಯೋಗ, ಸಹಜಯೋಗ, ಸಿದ್ಧಿ–ಸಮಾಧಿಯೋಗ, ಜನಪ್ರಿಯ ಯೋಗ, ಜೀವನ ಸಿದ್ಧಿಯೋಗ ಇತ್ಯಾದಿ ಯೋಗಗಳಲ್ಲಿ ೧೧೨ ಪ್ರಭೇದಗಳಿವೆ ಎಂದು ಹೇಳಿದ್ದಾರೆ. ಹೀಗೆ ಯೋಗ ನಾನಾ ಹೆಸರುಗಳಿಂದ ಜಗತ್ತಿನ ಗಮನ ಸೆಳೆಯುತ್ತಿದೆ. ಇಂದು ಹೆಂಗಸರೂ, ಗಂಡಸರೂ, ಲಕ್ಷ–ಲಕ್ಷ ಜನ, ಯೋಗದ ಅಭ್ಯಾಸ ಮಾಡುತ್ತಿದ್ದಾರೆ. ಇದು ಇಂದು ಫ್ಯಾಷನ್ ಕೂಡಾ ಆಗಿದೆ. ಆರೋಗ್ಯ ಭಾಗ್ಯಕ್ಕೇ, ದೇಹದ ತೂಕ ಇಳಿಸಲೋ, ಸೌಂದರ್ಯ ವರ್ಧನೆಗೋ ಅಂತೂ ಜನ ಯೋಗಾಭ್ಯಾಸ ಮಾಡುತ್ತಿದ್ದಾರೆ. ಅನೇಕರು ಯೋಗವೆಂದರೆ ಶರೀರವನ್ನು ಬೇಕು–ಬೇಕಾದಂತೆ ಬಗ್ಗಿಸುವುದೋ, ತಿರುಚುವುದೋ, ತಲೆ ಕೆಳಗಾಗಿ ನಿಲ್ಲುವುದೋ, ಒಂದು ರೀತಿಯಲ್ಲಿ ದೇಹದ ಕಸರತ್ತು ಎಂದು ಭಾವಿಸಿದ್ದಾರೆ. ಇನ್ನು ಕೆಲವರಿಗೆ ಪ್ರಾಣಾಯಾಮ ಎಂದರೆ ಉಸಿರಾಟದ ಕಸರತ್ತು–ಅದೇ ಯೋಗ ಎನಿಸಿದೆ. ಆದರೆ ಯೋಗಕ್ಕೆ ಎಲ್ಲರೂ ಅಧಿಕಾರಿಗಳು. ಜಾತಿ–ಮತ, ಹೆಣ್ಣು–ಗಂಡು, ಕುಲ–ಗೋತ್ರ, ದೇಶ–ಭಾಷೆಗಳ, ಬಾಲ–ವೃದ್ಧರ ಭೇದವಿಲ್ಲದೆ, ಇದು ಎಲ್ಲರ ಉಪಕಾರಕ್ಕಾಗಿಯೇ ಇದೆ. (ಯೋಗಾಧಿಕಾರಿಣಃ ಸರ್ವೇ ಬಾಲೋವೃದ್ಧೋ, ರೋಗಮುಕ್ತೋ ಯುವಾಸ್ತ್ರೀಶೂದ್ರ ಜನ್ಮಭೃತ್) (ಹಠಯೋಗ ಪ್ರದೀಪಿಕಾ ೧–೬೪) ತಿಳಿಸುತ್ತದೆ.

## 'ಯೋಗ' ಎಂದರೇನು ?

'ಯೋಗ' ಶಬ್ದವು ಸಂಸ್ಕೃತದಲ್ಲಿ 'ಯುಜ್' ಧಾತುವಿನಿಂದ ನಿಷ್ಪನ್ನ ವಾಗಿದೆ. 'ಯುಜ್' ಎಂದರೆ ಸೇರುವುದು, ಕೂಡುವುದು ಎಂದು ಅರ್ಥ. ಯುಜ್ಯತೇ ಅನೇನ ಇತಿಯೋಗಃ ಒಂದು ಗೂಡಿಸುವುದು ಏನನ್ನ ? ಜೀವಾತ್ಮ–ಪರಮಾತ್ಮರನ್ನು, ಅಂಗ–ಲಿಂಗದೊಂದಿಗೆ ಒಂದು ಗೂಡಿಸುವುದು ಮತ್ತು ಸಂಕುಚಿತವಾದ, ಸೀಮಿತವಾದ, ಅಹಂಕಾರ ತುಂಬಿದ ವ್ಯಕ್ತಿತ್ವವನ್ನು ವಿಶಾಲಗೊಳಿಸಿ ಶಾಶ್ವತ ಹಾಗೂ ಆನಂದಕರವಾದ ಸತ್ಯಸ್ಥಿತಿಗೆ ತಲುಪಿಸುವುದು ಯೋಗ. ಮನಸ್ಸಿನ ಮೇಲೆ ಪ್ರಜ್ಞಾಪೂರ್ವಕವಾಗಿ ಪ್ರಭುತ್ವ ಸ್ಥಾಪಿಸುವ ಪ್ರಕ್ರಿಯೆ. ಸ್ವಾಮಿ ವಿವೇಕಾನಂದರ ಮಾತಿನಲ್ಲಿ–''ಮನುಷ್ಯ ಸಂಪೂರ್ಣ ವಿಕಾಸವನ್ನು ಸಾಧಿಸಬಹುದಾದ ಸಾಧನವೇ ಯೋಗ''. ಯೋಗದಿಂದ ಶಾರೀರಿಕ, ಮಾನಸಿಕ, ಬೌದ್ಧಿಕ, ಭಾವನಾತ್ಮಕ ಹಾಗೂ ಆಧ್ಯಾತ್ಮಿಕ

ಸರ್ವಾಂಗೀಣ ವಿಕಾಸ ಸಾಧ್ಯವಾಗುತ್ತದೆ. ಯೋಗ ಮನೋವಿಜ್ಞಾನ; ಪರಮ ಮನಶ್ಶಾಸ್ತ್ರ. ಯೋಗ–ಚಿತ್ತವೃದ್ಧಿ ನಿರೋಧ; ಯೋಗ ಮನೋನಿಯಂತ್ರಣದ ವಿಧಾನ ಎನ್ನುತ್ತಾನೆ ಪತಂಜಲಿ. ''ಮನಃ ಪ್ರಶಮನೋಪಾಯಃ ಯೋಗ ಇತ್ಯಭಿಧೀಯತೆ'' ಮನಸ್ಸನ್ನು ಪ್ರಶಾಂತಗೊಳಿಸುವ ಉಪಾಯವೆನ್ನುತ್ತದೆ ಯೋಗವಾಶಿಷ್ಠ. ''ಯೋಗಃ ಕರ್ಮಸು ಕೌಶಲಂ'' ಕರ್ಮಕುಶಲತೆ ಯೋಗ. 'ಸಮತ್ವಂ ಯೋಗ ಮುಚ್ಯತೆ' ಸಮಭಾವವೇ ಯೋಗ ಎಂದು ಗೀತೆ ಹೇಳಿದರೆ, ''ತಾಂ ಯೋಗಮಿತಿ ಮನ್ಯತೇಸ್ಥಿರಾಂ ಇಂದ್ರಿಯ ಧಾರಣಮ್ (೨–೩–೧೧) ಇಂದ್ರಿಯಗಳು ಮತ್ತು ಮನಸ್ಸಿನ ಮೇಲೆ ಸಂಪೂರ್ಣ ಹತೋಟಿ ಹೊಂದಿರುವ ಸ್ಥಿತಿ ಎಂದು ಕಠೋಪನಿಷತ್ ತಿಳಿಸುತ್ತದೆ. ಹೀಗೆ ಯೋಗವನ್ನು ಕುರಿತು ವಿವಿಧ ವ್ಯಾಖ್ಯಾನಗಳಿದ್ದರೂ ಅವುಗಳ ಆಶಯ ಒಂದೇ ಆಗಿದೆ. ಮನಸ್ಸಿನ ಏಕಾಗ್ರತೆ, ನಿಗ್ರಹ ಹಾಗೂ ವಿಕಾಸದ ವಿಧಾನ.

''Yoga literally means connection or union with the Supreme Spirit" What unites us with the Supreme Spirits Yoga "There is only one in the universe.''

ಯೋಗ, ಸಾಧನೆಯ ವಿಷಯ, ಅನುಭವಕ್ಕೆ ತಂದುಕೊಳ್ಳುವ ವಿಷಯವೇ ವಿನಃ ಅದನ್ನು ಕುರಿತು ಚರ್ಚಿಸುವ, ವರ್ಣಿಸುವ ವಿಷಯವಲ್ಲ. ಸ್ವಾಮಿ ಪರಮಾನಂದರು ಹೇಳುತ್ತಾರೆ :

Yoga for its true understanding, depends not an words but an experience. Although a person can finish Reading a map of the world, in ten minites, it will probably take him ten lives, actually to visit all the places, he has seen on that map. So it is said that perhaps only one in a million has the good fortune to attain complete success in yoga (common sense about Youga P-75)

ಶಿವಯೋಗದ ಮೂಲ ನೆಲೆ ; ಶಿವಾಗಮಗಳಲ್ಲಿ :

ಶೈವಧರ್ಮ ಪ್ರಾಚೀನವಾದುದು. ಶೈವಗ್ರಂಥಕ್ಕೆ ಪ್ರಮಾಣ ಗ್ರಂಥಗಳಾದ ಆಗಮಗಳಲ್ಲಿ ಯೋಗವನ್ನು ಕುರಿತು ಸಾಕಷ್ಟು ವಿಚಾರಗಳಿವೆ. ಯೋಗ ಸೂತ್ರಕಾರನಾದ ಪತಂಜಲಿ ಶೈವನೆಂದು ಪ್ರತೀತಿ ಇದೆ, ಶೈವ

ಧರ್ಮದ ಪ್ರಭೇದಗಳನ್ನು ಹೇಳುವಾಗ ಪಾರಮೇಶ್ವರಾಗಮದಲ್ಲಿ ಯೋಗ–ಶೈವ, ಜ್ಞಾನಶೈವಗಳ ಉಲ್ಲೇಖವಿದೆ. ''ಚರಾಚರಾತ್ಮಕಂ ಸರ್ವಂ ಜಗದೇತಚ್ಛಿವಾತ್ಮಕಂ । ಭಾವಯನ್ನಾತ್ಮ್ಯಂ ಯೋಗಶೈವಮತೆವ್ಯಸೇತ್'' (ಪಾ. ಪ. ೭–ಶ್ಲೋಕ–೨೧)

ಜಗತ್ತನ್ನು ಶಿವಸ್ವರೂಪವೆಂದು ಭಾವಿಸಿ ; ಅದರಲ್ಲಿ ತಾದಾತ್ಮ್ಯ ಭಾವ ಹೊಂದಿದವನು ಯೋಗಶೈವ. ಈಶಾನ ಶಿವಯೋಗಿಗಳ ಈಶಾನ ಗುರುದೇವ ಪದ್ಧತಿಯಲ್ಲೂ ಸುಪ್ರಭೇದ, ಪಾರಮೇಶ್ವರ, ಸೂಕ್ಷ್ಮ ಹಾಗೂ ಚಂದ್ರಜ್ಞಾನಾಗಮಗಳಲ್ಲಿ ಶಿವಯೋಗದ ವಿಚಾರವಿದೆ. ಮನಸ್ಸಿನ ಏಕಾಗ್ರತೆಯನ್ನು ಸಾಧಿಸಿ ಸಮಾಧಿಯನ್ನು ಸಾಧಿಸುವ ಮಾರ್ಗಕ್ಕೆ ಶೈವಾಗಮಗಳು ಪ್ರಾಮುಖ್ಯತೆಯನ್ನು ಕೊಟ್ಟಿವೆ.

(ಸಮ್ಯಕ್ ಅಧೀಯತೇ ಅಸ್ಮಿನ್ ಇತಿ ಸಮಾಧಿಃ) (ಸ್ವರೂಪಶೂನ್ಯದಿಂದ ಸಮಾಧಿ) ಧ್ಯಾನಿಸುವ ವಸ್ತುವಿನಲ್ಲಿ ತಲ್ಲೀನನಾಗುವುದು, ಐಕ್ಯವಾಗುವದು, ನದಿ ಸಾಗರಕ್ಕೆ ಬಿದ್ದು ಸಾಗರದಲ್ಲಿ ಐಕ್ಯವಾದಂತೆ.

ಕುರುಹನ್ನ (ಇಷ್ಟಲಿಂಗ) ಧ್ಯಾನಿಸುತ್ತಾ ಅರಿವಿನತ್ತ ಸಾಗುವುದು (ಭ್ರಮರಕೀಟ ನ್ಯಾಯದಂತೆ) ಶಿವಾಗಮಗಳ ವೈಶಿಷ್ಟ್ಯ.

ವೀರಶೈವರ ತತ್ತ್ವಜ್ಞಾನದ ಮೂಲವಿಚಾರಗಳು ಆಗಮಗಳಲ್ಲೇ ಇರುವುದರಿಂದ ಅಲ್ಲಿ ಬರುವ ಷಟ್‌ಸ್ಥಲ ಸಿದ್ಧಾಂತವು ಪ್ರಮುಖವಾದುದು. ಈ ಷಟ್‌ಸ್ಥಲದಲ್ಲಿ ಹೆಜ್ಜೆ ಹೆಜ್ಜೆಗೂ ಶಿವಯೋಗದ ತತ್ತ್ವಗಳಿವೆ. ಇವು ಶಿವಯೋಗ ಸಾಧನೆಯ ಸೋಪಾನಗಳು. ಪ್ರಾಣಲಿಂಗ ಸ್ಥಲದಲ್ಲಿ ಬರುವ ವಿಚಾರಗಳೆಲ್ಲ ಸಂಪೂರ್ಣ ಶಿವಯೋಗಮಯವಾಗಿವೆ.

ಶಿವಾಗಮಗಳಲ್ಲಿ ನಾಲ್ಕು ಪಾದಗಳಿವೆ. ಕ್ರಿಯಾಪಾದ, ಚರ್ಮಪಾದ, ಯೋಗಪಾದ, ಜ್ಞಾನಪಾದವೆಂದು ನಾಲ್ಕು ವಿಧ. ಯೋಗಪಾದದಲ್ಲಿ ಯೋಗಕ್ಕೆ ಸಂಬಂಧಿಸಿದ ವಿಚಾರಗಳಿವೆ. ಪಾರಮೇಶ್ವರಾಗಮದ ೧೧ನೆಯ ಪಟಲ ಯೋಗ ವಿಷಯಕ್ಕೆ ಮೀಸಲಾದಂತಿದೆ. ಇಲ್ಲಿ ಯೋಗಶೈವದ ವಿಚಾರ, ಯೋಗದ ಸಾಕಾರ–ನಿರಾಕಾರ ಸ್ವರೂಪ ; ಆಸನ–ಧ್ಯಾನ ಪದ್ಧತಿಗಳ ಸಮ್ಯಕ್ ವಿವರವಿದೆ. ಶಿವಯೋಗದ ಅಷ್ಟಾಂಗಯೋಗದ ಸ್ಪಷ್ಟ ಪರಿಕಲ್ಪನೆ ಇದೆ.

ಈ ಯೋಗದ ಅಂಗಗಳು ಪಾತಂಜಲಿ ಯೋಗ ಶಾಸ್ತ್ರದ ಅಷ್ಟಾಂಗಗಳಿಗಿಂತ ವಿಭಿನ್ನವಾಗಿ ವೈಶಿಷ್ಟ್ಯಪೂರ್ಣವಾಗಿವೆ.

ಭಕ್ತಿ ವೈರಾಗ್ಯ ಮಭ್ಯಾಸೋ ಧ್ಯಾನಮೇಕಾಂತ ಸೇವನಂ ।
ಭಿಕ್ಷಾಟನಂ ಲಿಂಗಪೂಜಾ ಸ್ಮರಣಂ ಸತತಂ ಮಮ ॥

ಭಕ್ತಿ, ವೈರಾಗ್ಯ, ಅಭ್ಯಾಸ, ಧ್ಯಾನ, ಏಕಾಂತ ಸೇವನ, ಭಿಕ್ಷಾಟನ, ಲಿಂಗಪೂಜೆ, ಸತತ ಶಿವಸ್ಮರಣೆ ಇದು ಆಗಮದ ಅಷ್ಟಾಂಗಗಳು. ಪತಂಜಲಿ ತಿಳಿಸುವ ಯಮ-ನಿಯಮ ಆಸನ ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿಗಳೂ ಶಿವಯೋಗ ಪ್ರಕ್ರಿಯೆಯಲ್ಲೇ ಸಮಾವೇಶವಾಗುತ್ತವೆ. ಅನಂತರ ಪರಮೇಶ್ವರ ಆಗಮದಲ್ಲಿ ಧ್ಯಾನಶೈವ, ವೀರಶೈವದ ಯೋಗ ಪದ್ಧತಿಗಳನ್ನು ವಿವರಿಸಿ, ಶಿವಯೋಗಿಗಳಿಗೆ ಶಮೆ-ದಮೆ-ಸಮಾಧಿ-ತಿತೀಕ್ಷಾ-ಪರತಿ-ಶ್ರದ್ಧೆ ಎಂಬ ಆರು ಅಂಗಗಳನ್ನು ವಿಧಿಸಲಾಗಿದೆ. ಅದೇ ಆಗಮದ ೧೨ನೇ ಪಟಲದಲ್ಲಿ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳ ಪರಸ್ಪರ ಸಂಬಂಧ, ಜ್ಞಾನ-ಕ್ರಿಯಾ-ಚರ್ಯ ಮತ್ತು ಯೋಗವೆಂಬ ನಾಲ್ಕು ಮಾರ್ಗಗಳ ಸ್ವರೂಪಗಳನ್ನು ವಿವರಿಸಿ, ಇವು ಶಿವಜ್ಞಾನದ ಪ್ರಾಪ್ತಿಗೆ ಅವಶ್ಯಕವೆಂದು ಸಮರ್ಥಿಸಲಾಗಿದೆ. ಮತ್ತೆ ಅದೇ ಆಗಮದ ೨ನೆ ಪಟಲದಲ್ಲಿ ಜ್ಞಾನಯೋಗದ ನಿರೂಪಣೆ ಇದೆ.

ಶೈವ ಭೇದಸ್ಯಯದ್ಯೋಗ ಪೂರ್ವತ್ತ್ವಂ ಯೋಗಪಾಠವತ್ ।
ಸಚಾಪಿ ದ್ವಿವಿಧೋ ಯೋಗಃ ಸಾಕಾರಶ್ಚ ನಿರಾಕೃತಿಃ ॥

(ಪ-೧೦-ಶ್ಲೋಕ-೧೩)

ಯೋಗದಲ್ಲಿ ಸಾಕಾರ-ನಿರಾಕಾರವೆಂದು ಎರಡು ವಿಧ. ನಿರಾಕಾರವೆಂದರೆ ಧ್ಯಾನಿಸುವವನೂ, ಧ್ಯಾನಿಸುವ ವಸ್ತು ಎರಡೂ ಇಲ್ಲ (ಸಾಕಾರದಲ್ಲಿ ಇರುತ್ತವೆ) ಯಾವುದು ಅವ್ಯಕ್ತವೂ, ಮನಸ್ಸಿಗೆ ಮೀರಿದ್ದು, ಇದೆಯೋ ಅದು ಕೇವಲ 'ಶಿವ' ಈ ನಿಲುವಿಗೆ ಏರಿದವನು ಜ್ಞಾನಯೋಗಿ. ಅವನೇ ವೀರಶೈವ, ಅವಧೂತ ಎಂದು ಪರಮೇಶ್ವರಾಗಮ, ಶಿವಯೋಗದ ವಿಚಾರವನ್ನು ಸ್ಪಷ್ಟಪಡಿಸುತ್ತದೆ. ವೀರಶೈವ ಮತಸ್ಥಸ್ಯ ಜ್ಞಾನಯೋಗೋ ಸಾಧನಮ್. (ಪಾ. ತ. ೭-೩೬-೫೭) ತುಂಬಾ ಸುಂದರವಾದ ದೃಷ್ಟಾಂತದೊಂದಿಗೆ

ವಿವರಿಸಿದೆ. ''ಅತಿಷ್ಠೈೀತ್–ಸ್ಥಾಣುವತ್–ಸ್ವಸ್ಥೇಯಥಾ–ದೀಪೋ ನಿವಾತಗಃ (ಪ್ರ–೧೦–ಶ್ಲೋಕ–೨೩) ಎಂದು.

ಶರೀರ, ತಲೆ ಮತ್ತು ಕತ್ತುಗಳನ್ನು ಚಲಿಸದಂತೆ ಸ್ಥಿರವಾಗಿ, ನೆಟ್ಟಗೆ ಇಟ್ಟುಕೊಂಡು ಸ್ವಸ್ಥನಾಗಿ ಕಂಬದಂತೆ, ಗಾಳಿ ಇಲ್ಲದ ದೀಪದಂತೆ ಕುಳಿತುಕೊಳ್ಳಬೇಕು ಎಂದು ಹೇಳುತ್ತಾ ಹೃದಯಕಮಲ, ನಾಭಿ, ಸ್ವಾಧಿಷ್ಠಾನ, ಮೂಲಾಧಾರ, ವಿಶುದ್ಧಿ, ಆಜ್ಞಾ ಸಹಸ್ರಾರ, ಬ್ರಹ್ಮರಂಧ್ರ, ಶಿಲಾಗ್ರ, ದ್ವಾದಶಾಂತ, ಪಶ್ಚಿಮಶಿಖಾ, ಚಿದಾತ್ಮಾ ಇವುಗಳಲ್ಲಿ ಒಂದು ಸ್ಥಾನದಲ್ಲಿ ಧ್ಯಾನಿಸಬೇಕು ಎಂದು ಹೇಳುತ್ತದೆ. ಗೀತೆಯಲ್ಲೂ ಆಗಮಗಳ ಪ್ರಭಾವವಿದೆ. ಅಲ್ಲಿ ''ಸಮಂಕಾಯ ಶಿರೋಗ್ರೀವಂ ಧಾರೆಯನ್ನ ಚಲಂ ಸ್ಥಿರಂ'' ಎನ್ನುವ ಮೇಲಿನ ವಿಚಾರವೇ ಇದೆ.

ಯಾವುದೇ ಕ್ಲೇಶವಿಲ್ಲದಂತೆ ಕುಳಿತು ಆಸನವನ್ನೇ ಅಭ್ಯಾಸ ಮಾಡಬೇಕು. ಆಸನವನ್ನು ಗೆದ್ದರೆ ಸ್ವತಃ ದೇಹವನ್ನೇ ಗೆದ್ದಂತೆ (ಸನೇತು ಚಿತೇದೇವಿ ಜೀತೋದೇಹೋಪಿಚಸ್ವತಃ) (ಪ–೧೦–ಶ್ಲೋಕ–೨೨) ಅದೇ ಆಗಮ ವೀರಶೈವನ ಲಕ್ಷಣವನ್ನು ಅರ್ಥಪೂರ್ಣವಾಗಿ ವಿವರಿಸಿದೆ. ಯೋಗ–ಧ್ಯಾನಗಳ ಅಭ್ಯಾಸ ಉಳ್ಳವನು, ಶಿವನಲ್ಲಿ ಭಕ್ತಿ ಉಳ್ಳವನು, ವಿಷಯ ಸುಖಗಳಲ್ಲಿ ಆಸಕ್ತಿ ಇಲ್ಲದವನು, ದೃಢಮನಸ್ಸಿಲ್ಲದವನು, 'ಶಿವೋಹಂ' ಭಾವನೆ ಉಳ್ಳವನು ವೀರಶೈವ. (ಪ–೧೦–ಶ್ಲೋಕ–೪೯)

ಸೂಕ್ಷ್ಮಾಗಮದಲ್ಲಿ ವೀರಶೈವರಿಗೆ ಕರ್ಮ (ಕ್ರಿಯೆ) ತಪಸ್ಸು–ಜಪ–ಧ್ಯಾನ–ಜ್ಞಾನ ಇವು ಪಂಚಯಜ್ಞಗಳು. ಇವೇ ಯೋಗಗಳು. ಯಜ್ಞವೆಂದರೆ ಪೂಜೆ–ಯೋಗವೆಂದು ಅರ್ಥ. (ಪ–೬–ಶ್ಲೋಕ–೨೬) ''ಶಿವಜ್ಞಾನಂ ಶಿವೇ ಭಕ್ತಿಃ ಶಿವಾಚಾರ, ಶಿವವ್ರತಮ್, ಶಿವಲಿಂಗಾರ್ಚನಾಜ್ಞಪ್ತಿಃ ಶಿವಯೋಗೋಹಿ ಪಂಚಧಾ'' ಎಂದು ಐದು ವಿಧ ಶಿವಯೋಗಗಳನ್ನು ವೀರಾಗಮ ತಿಳಿಸುತ್ತದೆ.

ಚಂದ್ರಜ್ಞಾನಾಗಮದಲ್ಲಿ–ಇಷ್ಟಲಿಂಗದಲ್ಲಿ ದೃಷ್ಟಿಯೋಗ, ಪ್ರಾಣಲಿಂಗದಲ್ಲಿ ಮನೋಯೋಗ, ಮತ್ತು ಭಾವಲಿಂಗದಲ್ಲಿ ಭಾವಯೋಗಗಳನ್ನು ಏಕಕಾಲದಲ್ಲಿ ಸಾಧಿಸಿದ ಸಾಧಕರು ಮುಕ್ತರು. ಈ ಮೂರರ ಸಮನ್ವಯವೇ

'ಶಿವಯೋಗ'. ಇದು ಶಿವಾರಾಧನೆಯ ಕ್ರಮವೆಂದು ತಿಳಿಸುತ್ತದೆ. (ಕ್ರಿಯಾ ಪಾದ ೩-೩೯-೪೦)

ಶಿವಯೋಗ ಸಾಧನೆಯ ನೂರೊಂದು ಸ್ಥಲಗಳ ತತ್ತ್ವ ವಿವರಣೆಯ ಮೂಲವನ್ನು ಶಿವಾಗಮಗಳಲ್ಲಿಯೇ ಕಾಣಬಹದಾಗಿದೆ. ಕರ್ನಾಟಕ ವಿಶ್ವ ವಿದ್ಯಾಲಯದ ಅಧ್ಯಯನ ಪೀಠದಲ್ಲಿ ಒಂದು ಹಸ್ತಪ್ರತಿಯಲ್ಲಿ ತಿಳಿಸುವಂತೆ ವಾತುಲಾಗಮ-ಪಾರಮೇಶ್ವರ-ವಿಜಯ ಭೈರವೀ ಪಟಲದಲ್ಲಿ ತಿಳಿಸುವಂತೆ ಪಾರ್ವತಿ ದೇವಿಯು ೧೦೧ ಸ್ಥಲಗಳ ರಹಸ್ಯವನ್ನು ಶ್ರೀ ರೇಣುಕರಿಗೂ ಅವರು ಅದನ್ನು ಅಗಸ್ತ್ಯರಿಗೂ ಹೇಳಿದ್ದಾರೆ. ಇವು ನೂರೊಂದು ಸ್ಥಲಗಳ ಮೂಲವನ್ನು ಅರಿಯುವ ಆಗಮದ ಆಕರಗಳು. (ಕೆ.ವಿ.ಡಿ. ದಪ್ಪ ಕೈಬರಹದ ಪ್ರತಿ ನಂ. ೨೯೪. ಉದ್ಧೃತಃ ವಿಶ್ವಪ್ರಭೆ : ಪ್ರ. ೨೨೨)

ಇಷ್ಟಲಿಂಗ ಶಿವಯೋಗ ಸಾಧನೆಯ ಕುರುಹು :

ಮನಸ್ಸಿನ ಚಂಚಲತೆಯನ್ನು ಕಳೆದು ಸ್ಥಿರಗೊಳಿಸಲು ಬಾಹ್ಯದಲ್ಲಿ ಈಶ್ವರನ ಪ್ರತಿಬಿಂಬ (ಕುರುಹು) ಬೇಕೆಂದು ಶೈವಾಗಮಗಳು ತಿಳಿಸುತ್ತವೆ. ಧ್ಯಾನಕ್ಕೆ ಈಶ್ವರಪ್ರಣಿಧಾನತ್ವ (ಈಶ್ವರನಲ್ಲಿ ಭಕ್ತಿ) ಅವಶ್ಯಕವೆಂದು ಪತಂಜಲಿ ಯೋಗಸೂತ್ರದಲ್ಲಿ ತಿಳಿಸುತ್ತಾನೆ. ವ್ಯಕ್ತಿ ತನ್ನ ಬಾಹ್ಯ ಸ್ವರೂಪವನ್ನು ಕಾಣಲು ಕನ್ನಡಿಯ ಅಗತ್ಯವಿರುವಂತೆ, ಆಂತರಿಕ ಆತ್ಮನ ಸ್ವರೂಪವನ್ನು ತಿಳಿಸಲು ಕನ್ನಡಿಯಂತಹ ಒಂದು ಪವಿತ್ರ ವಸ್ತುವನ್ನು ಅವರು ಸ್ವೀಕರಿಸಲೇ ಬೇಕಾಯಿತು. ಸ್ಥಾವರ ಮೂರ್ತಿಗೆ ಬದಲಾಗಿ, ಆತ್ಮನ ಕುರುಹಾದ ಇಷ್ಟಲಿಂಗ ವನ್ನು ಸ್ವೀಕರಿಸಿ, 'ಅಹಂಗ್ರಹಂಹೋಪಾಸನೆ'ಯಿಂದ ಸಾಧನೆ ಮಾಡಿದರು. ತನ್ನನ್ನು ಹಾಗೂ ಹೊರಗಿನ ಪ್ರಪಂಚವನ್ನು ಮರೆತು ಮನಸ್ಸಿನ ಸಮಾಧಿ ಸ್ಥಿತಿ ಹೊಂದಲು ಬಾಹ್ಯವಸ್ತುವಿನ ಅಗತ್ಯವಿದೆ ಎಂದು ಅನೇಕ ಮನಃಶಾಸ್ತ್ರಜ್ಞರು ನಂಬುತ್ತಾರೆ. ಶರೀರದ ಮಲಿನತೆ (ಪಲ್ಯೂಷನ್) ದೂರಮಾಡಲು ಯಮ-ನಿಯಮ, ಆಸನ-ಪ್ರಾಣಾಯಾಮ, ಪ್ರತ್ಯಾಹಾರಗಳು ಬಾಹ್ಯ ಆರೋಗ್ಯ ದೃಷ್ಟಿಯಿಂದ ಅವಶ್ಯಕ. ಆದರೆ ದೇಹವೇ ಮನುಷ್ಯನಲ್ಲ; ಅವನಲ್ಲಿ ಒಂದು ಚೈತನ್ಯವಿದೆ. ಅದೇ ಆತ್ಮ, ಈ ಆತ್ಮನಿಗೆ ಬುದ್ಧಿ-ಮನಸ್ಸು-ಅಹಂಕಾರ, ಚಿತ್ತಗಳಿವೆ. ಇವುಗಳ ಆಂತರಿಕ ಶುದ್ಧಿಗಾಗಿ ಧಾರಣ-ಧ್ಯಾನ-ಸಮಾಧಿಗಳ

ಯೋಗಗಳ ಅವಶ್ಯಕತೆ ಇದೆ. ಮನಸ್ಸು ಎನ್ನುವುದು ಸ್ಥೂಲಶರೀರದ ಒಳಗೆ ಇರುವ ಒಂದು ಸೂಕ್ಷ್ಮ ಅಂಗ. ಮನಸ್ಸು ಆತ್ಮವಲ್ಲ; ಮನಸ್ಸಿನ ಹಿಂದೆ ಆತ್ಮವಿದೆ. ''ಯಾವೊಬ್ಬನು ರಣರಂಗದಲ್ಲಿ ಸಾವಿರಸಲ ಸಾವಿರಾರು ಯೋಧರನ್ನು ಸೋಲಿಸುತ್ತಾನೋ ಆ ಅವನ, ಗೆಲುವಿಗಿಂತ ಯಾರು ತನ್ನನ್ನು ತಾನು ಗೆಲ್ಲುತ್ತಾನೋ, ಆ ಗೆಲುವು ನಿಜವಾಗಿಯೂ ಮಹತ್ವದ್ದು ಎಂದರೆ ಮನಸ್ಸನ್ನು ಗೆಲ್ಲುವುದು ಎಷ್ಟು ಕಷ್ಟವೆಂಬುದನ್ನು ಬುದ್ಧ ಹೇಳುತ್ತಾನೆ. (ಧರ್ಮಪದ ಗಾಹೆ ೧೦೮ ೬....) ಮನಸ್ಸನ್ನು ಗೆಲ್ಲುವ ವಿಧಾನವನ್ನು ತಿಳಿಸುವುದೇ ಯೋಗದ ರಹಸ್ಯ.

ಬಹುಪಾಲು ಜನರಿಗೆ ಯೋಗಸಾಧನೆಯ ಧ್ಯಾನ ಮಾಡಲು, ಒಂದು ಕುರುಹು (ಪ್ರತೀಕ) ಬೇಕೇ ಬೇಕು. ಅದು ಇಲ್ಲದಿದ್ದರೆ ಮನಸ್ಸು ಅಲೆದಾಡುತ್ತದೆ. ಹಾರುವ ಪಟದಂತಿರುವ ಮನಸ್ಸಿಗೆ ಒಂದು ಸೂತ್ರ ಬೇಕು. ಏಕಾಗ್ರತೆಯ ಅನುಕೂಲಕ್ಕಾಗಿ ಓಂಕಾರ ಜಪ ಸಾಕು. ಅದು ಮನಸ್ಸನ್ನು ಅಂತರಾತ್ಮದ ಕಡೆ ಹೊರಳಿಸಿ ಚಿತ್ತದ ಏಕಾಗ್ರತೆಗೆ ಸಹಾಯಕವಾಗುತ್ತದೆ ಎಂದು ಪತಂಜಲಿ ತಿಳಿಸುತ್ತಾನೆ. (ಯೋಗಸೂತ್ರ ೧–೨೭–೨೯) ಇದೊಂದು ಸಾಧನೆಯ ವಿಧಾನ. ಆದರೆ ಬಹುಪಾಲು ಜನರ ಮನಸ್ಸಿನ ಏಕಾಗ್ರತೆಯ ಅನುಕೂಲಕ್ಕಾಗಿ ಒಂದು ಕುರುಹ (ಪ್ರತೀಕ)ನ್ನು ಆಶ್ರಯಿಸುತ್ತಾರೆ. ಇದೊಂದು ವಿಧಾನ. ದಾರಿಗಳು ಬೇರೆ ಆದರೂ ಗುರಿ ಒಂದೇ, ಕುರುಹಿನ ಮೂಲಕ (ಪ್ರತೀಕ) ದೇವರನ್ನು ಪೂಜಿಸುತ್ತಾನೆ ; ಧ್ಯಾನಿಸುತ್ತಾನೆ. ಮನಸ್ಸಿನ ಏಕಾಗ್ರತೆ ಪಡೆಯುತ್ತಾನೆ. ಯಾವುದೇ ವಸ್ತು ದೇವ ಪ್ರತೀಕವಾಗಬಹುದು. ಕುರುಹೇ ದೇವರಲ್ಲ; ಆದರೆ ಕರುಹಿನ ಮೂಲಕ ಅರಿವು ಪಡೆದು, ಅದರ ಹಿಂದಿರುವ, ಪರಮ ಸತ್ಯವನ್ನು ಗ್ರಹಿಸಬೇಕಾಗುತ್ತದೆ.

ತಂತ್ರಸಾರದ ಶ್ಲೋಕವೊಂದು ಹೀಗಿದೆ :

ಪ್ರಥಮಾ ಪ್ರತಿಮಾ ಪೂಜಾ, ಜಪಸ್ತೋತ್ರಾದಿ ಮಧ್ಯಮಾ ।
ಉತ್ತಮಾ ಮಾನಸೀಪೂಜಾ । ಸೋಹಂ ಪೂಜೋತ್ತಮೋತ್ತಮಾ ॥

ಮೊದಲನೆಯದು ಪ್ರತಿಮಾಪೂಜೆ ; ಇದಕ್ಕಿಂತ ಉತ್ತಮ ಮಂತ್ರ ಜಪೊಹ ಇನ್ನು ಉತ್ತಮ ಮಾನಸ ಪೂಜೆ, ಅತ್ಯುನ್ನತ ಅವಸ್ಥೆ. 'ಸೋಹಂ ಪೂಜೆ' ಈ

ಸೋಹಂ ಪೂಜೆ ಅಥವಾ 'ಅಹಂಗ್ರಹೋಪಾಸಕರು' ವೀರಶೈವರು. ಇಷ್ಟಲಿಂಗ ಆತ್ಮನ ಕುರುಹು (ಆತ್ಮನ ಪ್ರತೀಕ) ಪ್ರತಿಮೆ ಅಲ್ಲ ಎಂಬುದೇ ಇವರ ಸಿದ್ಧಾಂತ. ಕುರುಹು (ಪ್ರತೀಕ) ಪೂಜೆ ನಮ್ಮ ನಂಬಿಗೆಯನ್ನು ತೂಗಹಾಕುವ ಒಂದು ಗೂಟವಿದ್ದಂತೆ; ಸ್ಥೂಲ ಬುದ್ಧಿಯವರಿಗೆ ಇದು ಮೊದಲು ಮೊದಲು ಅವಶ್ಯಕ. ಸಾಧನೆಯ ಬಲದಿಂದ ಸಿದ್ಧಪುರುಷರಿಗೆ (ಆತ್ಮನ ಪ್ರತೀಕ ಇಷ್ಟಲಿಂಗ) ಅವಶ್ಯಕತೆ ಇಲ್ಲ. ಅವರು ದೇವರನ್ನು ಒಳ–ಹೊರಗು ಎಲ್ಲೆಡೆ ನೋಡುತ್ತಾರೆ. ಲಿಂಗಾಂಗ ಸಾಮರಸ್ಯ ಫಲದ ಸಾಧನೆಯಲ್ಲಿ ಸಾಧಕ ಮೊದಲು 'ಅಹಂಗ್ರಹೋಪಾಸನೆ'ಯ ಸಾಧನೆಯತ್ತ ಸಾಗಿದಾಗ ಗ್ರಮೇಣ ಉಪಾಸ್ಯ ಉಸ್ತುವಿನೊದಂಗೆ ತನ್ನನ್ನು ಒಂದಾಗಿಸಿಕೊಂಡು ತನ್ನ ಆತ್ಮದ ಮೇಲೆ ಧ್ಯಾನ ಮಾಡುತ್ತಾನೆ. ಅಲ್ಲಿ ಉಪಾಸ್ಯಸ್ಯು–ಪಾಸಕರ ಏಕತೆ, ಸಾಮರಸ್ಯವಾಗುತ್ತದೆ. ಇದು ಪ್ರಾಣಲಿಂಗಪೂಜೆ. ಆಧ್ಯಾತ್ಮಿಕ ಜೀವನ ಒಂದು ಏಣಿ ಇದ್ದಂತೆ, ನಾವು ಮೆಟ್ಟಿಲು ಮೆಟ್ಟಿಲಾಗಿ ಮುಂದುವರಿಯಬೇಕು.



# ಸಿದ್ಧಾಂತ ಶಿಖಾಮಣಿಯಲ್ಲಿ ಶಿವಯೋಗ

ಸಿದ್ಧಾಂತ ಶಿಖಾಮಣಿ, ವೀರಶೈವ ಧರ್ಮದ ಸಿದ್ಧಾಂತ ಕೃತಿ. ವೀರಶೈವಜ್ಞಾನಕೋಶ. ಇದರಲ್ಲಿ ೨೧ ಪರಿಚ್ಛೇದಗಳು, ೧೩೩೦ ಶ್ಲೋಕಗಳಿವೆ. ಷಟ್‌ಸ್ಥಲ ಹಾಗೂ ಉಪಸ್ಥಲಗಳು ಸೇರಿ ಏಕೋತ್ತರ ಶತಸ್ಥಲಗಳ ಸಮಗ್ರ ಸ್ವರೂಪ ನಿರೂಪಿಸಲ್ಪಟ್ಟಿದೆ. ಕೃಷ್ಣಾರ್ಜುನರ ಸಂವಾದ ಭಗವದ್ಗೀತೆಯಾದಂತೆ, ರೇಣುಕಾಗಸ್ತ್ಯ ಸಂವಾದ ಸಿದ್ಧಾಂತ-ಶಿಖಾಮಣಿ. ಇದು ರೇಣುಕ ಗೀತೆ ಎನ್ನುವ ಹೆಸರಿನಿಂದಲೂ ಪ್ರಸಿದ್ಧವಾಗಿದೆ. ವೇದಾಂತ ವೀರಶೈವ ಚಿಂತಾಮಣಿ ಗ್ರಂಥಕಾರರು, ಇದನ್ನು 'ರೇಣುಕಾಗಮ'ವೆಂದು ಕರೆದಿದ್ದಾರೆ. ಮಹಾವಿದ್ವಾಂಸರು ಈ ಗ್ರಂಥಕ್ಕೆ ಭಾಷ್ಯ ಬರೆದಿದ್ದಾರೆ. ಇದು ಭಾರತೀಯ ಪ್ರಮುಖ ಭಾಷೆಗಳಲ್ಲಿ ಅನುವಾದವಾಗಿದೆ. (ಮರಾಠಿ, ಹಿಂದಿ, ತೆಲುಗು, ಕನ್ನಡ, ತಮಿಳು) ಇಂಗ್ಲೀಷ್ ಭಾಷೆಗೂ ಅನುವಾದಗೊಳ್ಳುತ್ತಿದೆ. ಈ ಸಿದ್ಧಾಂತ ಗ್ರಂಥದ ರಚನಾಕಾರರಾದ ಶಿವಯೋಗಿ ಶಿವಾಚಾರ್ಯರು ಶಿವಾಗಮ ತತ್ತ್ವ ಪರಿಜ್ಞಾನಿಗಳು. ಸಂಸ್ಕೃತದಲ್ಲಿ ಪ್ರಗಲ್ಭ ಪಾಂಡಿತ್ಯ ಉಳ್ಳವರು. ಸಕಲ ದರ್ಶನ, ಶಾಸ್ತ್ರಕೋವಿದರು ಹಾಗೂ ಬಹುಶೃತರೂ ಆಗಿದ್ದರು. ಅವರು ಈ ಕೃತಿಯ ಕೊನೆಯಲ್ಲಿ ಹೇಳುವಂತೆ ಇದು ವೇದೇಗಮ ವೀರಶೈವ ಸರಣೀ, ಶ್ರೀಷಡ್ ಸ್ಥಲೋದ್ಧ್ಯನ್ಮಣೀಂ। ಶ್ರೀ ಜೀವೇಶ್ವರ ಯೋಗ ಪದ್ಮತರಣೀಂ ಶ್ರೀ ಗೋಪ್ಯ ಚಿಂತಾಮಣಿ'' ಎಂದು ಇದರ ಮಹತ್ವವನ್ನು ಸಾರಿದ್ದಾರೆ. ಉಪನಿಷತ್ತುಗಳ ಸಾರಸಂಗ್ರಹ ಭಗವದ್ಗೀತೆ. ಸರ್ವಾಗಮಗಳ ಸಾರಸಂಗ್ರಹ ಸಿದ್ಧಾಂತ ಶಿಖಾಮಣಿ. ಇದು ಸಮಸ್ತ ಸಿದ್ಧಾಂತಗಳ ಸೀಮಂತ ಮಣಿ. ಈ ಗ್ರಂಥ ಸಮಸ್ತ ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸುವ ಗ್ರಂಥವೂ ಹೌದು. ಯೋಗಶಾಸ್ತ್ರವೂ ಹೌದು. ೧೦೧ ಸ್ಥಲಗಳ ಮೂಲಕ ಸಾಧಕನಿಗೆ ಹೆಜ್ಜೆಹೆಜ್ಜೆಗೂ ಜ್ಞಾನಮಾರ್ಗ-ಕ್ರಿಯಾಮಾರ್ಗಗಳನ್ನು ತಿಳಿಸುತ್ತಾ ಅವುಗಳನ್ನು ಸಮನ್ವಯಗೊಳಿಸಿ ಪೂರ್ಣಜೀವನ ಯೋಗವನ್ನು ವಿವರಿಸುವ ಯೋಗ ಶಾಸ್ತ್ರವೂ ಆಗಿದೆ. ಈ ಕೃತಿ ಕಾವ್ಯ ಶಾಸ್ತ್ರ-ಸಿದ್ಧಾಂತಗಳ, ದ್ವೈತಾದ್ವೈತಗಳ

ಸಮನ್ವಯ, ಶಿವ–ಶಕ್ತಿ–ಸೃಷ್ಟಿಗಳ ಸಮನ್ವಯವನ್ನು ತಿಳಿಸುತ್ತಾ, ಶಿವಯೋಗ ಮಾರ್ಗದಲ್ಲಿ ಮೂರು, ಆರು, ಮೂವತ್ತಾರು, ನಾಲ್ವತ್ತುನಾಲ್ಕು–ಐವತ್ತೇಳು ಹೀಗೆ ನೂರೊಂದು ನಿಲ್ದಾಣಗಳ ನೆಲೆಗಳನ್ನೆ ಗುರುತಿಸಿ, ಅಂಗ ಲಿಂಗರು ನೂರೊಂದಾಗಿ ವಿಸ್ತರಿಸಿ ಎಲ್ಲವುಗಳ ಸಮರಸ–ಸಮನ್ವಯಗೊಳಿಸಿ ಪೂರ್ಣ ವಸ್ತು ಒಂದೇ ಎನ್ನುವ, ಆದರಲ್ಲಿ ಐಕ್ಯವಾಗುವ ವಿಧಾನವನ್ನು ತಿಳಿಸುತ್ತದೆ.

ಒಂದು–ಎರಡಾಗಿ, ಮೂರಾಗಿ, ಆರಾಗಿ, ಮೂತ್ತಾರೂ ಆಗಿ ಕೊನೆಗೆ ೧೦೧ ಆಗುವ ಸಾಧನಾಪಥ. ಇದು ಕೇವಲ ಸಂಖ್ಯಾಚಮತ್ಕಾರವಲ್ಲ; ಸಾಧಿಸಬಹುದಾದ ಶಿವಯೋಗದ ಅಂಕಗಣಿತ. ಜೀವಂತ ಪ್ರಕ್ರಿಯೆ. ಯಾವ ಏಕದಿಂದ ಅನೇಕವಾಗಿದೆಯೋ, ಯಾವ ಏಕ ಅನೇಕದಂತೆ ಇದೆಯೋ ಆ ಏಕವನ್ನು ಕಂಡುಹಿಡಿದು ಅದರಲ್ಲಿ ಐಕ್ಯವಾಗುವುದೇ ಶಿವಯೋಗದ ಗುರಿ. ಶಿವನ ಪೂಜೆ, ಶಿವನ ಕ್ರಿಯೆ, ಶಿವಜಪ, ಶಿವಧ್ಯಾನ, ಶಿವಜ್ಞಾನಗಳ ಸಹಜ ಯೋಗಶಾಸ್ತ್ರ ಇಲ್ಲಿಯ ೧೦೧ ಸ್ಥಲಗಳೂ ಶಿವಯೋಗ ಸಾಧನೆಯ ಸೋಪಾನಗಳು.

ಬೆಟ್ಟದ ತುದಿಯಲ್ಲಿರುವ ದೇಗುಲಕ್ಕೆ ಒಂದೊಂದೇ ಮೆಟ್ಟಿಲನ್ನು ಏರಿ, ಮನಸ್ಸಿನ ಎಲ್ಲ ಆತಂಕಗಳನ್ನು ಹಿಂದಕ್ಕೆ ತಳ್ಳಿ, ಮುಂದೆ ಸಾಗುವ ಯಾತ್ರಿಕ ನಂತೆ ; ಅಂಗನು ಲಿಂಗದೇವನ ಯಾತ್ರೆಗೆ ಸಾಗುವ ಮಹಾಯಾತ್ರೆ (Long Journey) ಇದು ಶಿವಯೋಗ ವಿಜ್ಞಾನ. ಪರಮ ಮಾನಸಶಾಸ್ತ್ರ. ವ್ಯಕ್ತಿಯ ಮಾನಸಿಕ ವಿಕಾಸದ ಮಜಲುಗಳನ್ನು ಇಲ್ಲಿ ಗುರುತಿಸಬಹುದಾಗಿದೆ.

ಒಂದು ದೃಷ್ಟಿಯಿಂದ, ಸಿದ್ಧಾಂತ ಶಿಖಾಮಣಿ ಶಿವಯೋಗ ದರ್ಶನದ ಕೃತಿ. ಷಟ್‌ಸ್ಥಲ–ಅಷ್ಟಾವರಣ, ಪಂಚಾಚಾರಗಳು ವೀರಶೈವ–ಶಿವಯೋಗದ ಸಾಧನೆಯ ಪಥಗಳು ಇವುಗಳ ಗುರಿ–ಶಿವಜೀವೈಕ್ಯ ಸ್ಥಿತಿ. ಈ ದೃಷ್ಟಿಯಿಂದ ಸಿದ್ಧಾಂತ ಶಿಖಾಮಣಿ ಆಧ್ಯಾತ್ಮಸಾಧಕನ ಹಾಗೂ ಶಿವಯೋಗ ಸಾಧಕನ ಕೈದೀವಿಗೆ. ಎಲ್ಲರಿಗೂ ಅನ್ವಯವಾಗುವ, ಅನುಸರಿಸುವ ಜೀವನ ಧರ್ಮ ಶಾಸ್ತ್ರವೂ–ಜೀವನ ಸಿದ್ಧಾಂತವೂ ಆಗಿದೆ.

ಮನುಷ್ಯ ಬದುಕಿನಲ್ಲಿ ದಿಕ್ಕು ತಪ್ಪಿದಾಗ ಮಾನಸಿಕ ಸಂಘರ್ಷಗಳಲ್ಲಿ ಸಿಲುಕಿದಾಗ ಅವನಿಗೆ ಮನೋವೈಜ್ಞಾನಿಕ ಚಿಕಿತ್ಸೆ ನೀಡಿ, ಮನೋವಿಜ್ಞಾನದ

ಬಾಗಿಲು ತೆರೆದು, ಶಿವಜ್ಞಾನದ ಅರಿವು ಮೂಡಿಸಿ ದಾರಿತೋರುವ ಗ್ರಂಥ ಸಿದ್ಧಾಂತ ಶಿಖಾಮಣಿ.

ಭಗವತ್ಪಾದ ರೇಣುಕಾಚಾರ್ಯರು ಹಾಗೂ ಅಗಸ್ತ್ಯರ ನಡುವೆ ಸಂವಾದದಲ್ಲಿ ರೂಪಗೊಂಡ ಕೃತಿ ಇದು. ಜೀವನದಲ್ಲಿ ಒದಗುವ ವಿವಾದಗಳು ಹೇಗೆ ಸಂವಾದವಾಗಿ ಕೊನೆಗೊಳ್ಳಬೇಕು ಎನ್ನುವ ಸಂದೇಶ ಇಲ್ಲಿದೆ. ಇದು ಗುರು–ಶಿಷ್ಯ ಸಂವಾದ. ಅಗಸ್ತ್ಯಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಮನುಕುಲಕ್ಕೆ ನೀಡಿದ ಜೀವನ ಸಿದ್ಧಾಂತ. ಈ ಸಂದೇಶವನ್ನೇ ಕಾವ್ಯ ರೂಪದಲ್ಲಿ ರಚಿಸಿದ್ದಾರೆ ಶಿವಯೋಗಿ ಶಿವಾಚಾರ್ಯರು. ವೀರನಾರಾಯಣನೆ ಕವಿ ; ಲಿಪಿಕಾರ ಕುಮಾರವ್ಯಾಸ ಎನ್ನುವಂತೆ ; ಮಾತು ಶಿವಯೋಗಿ ಶಿವಾಚಾರ್ಯರದು. ಅದರ ಮೂಲಧಾತು ಭಗವತ್ಪಾದ ರೇಣುಕಾಚಾರ್ಯರದು. ಗೀತೆಯನ್ನು ವ್ಯಾಸರು ಬರೆದಿದ್ದರೂ, ಅದರ ಮೂಲತತ್ತ್ವ ಶ್ರೀ ಕೃಷ್ಣನದು ಎನ್ನುವಂತೆ.

ನಾವು ಬೆಳಕೆಂದು ತಿಳಿದ ಈ ಪ್ರಾಪಂಚಿಕ ಜೀವನ ಬೆಳಕಲ್ಲ. ಬೆಳಕೆಂದು ಭ್ರಮಿಸಿದ್ದೇವೆ. ನಮಗೆ ಕಾಣುವ ಕತ್ತಲು ಬೆಳಕಿನ ಮುಖವಾಡ ಹೊತ್ತು ನಿಂತಿದೆ. ಈ ಮುಖವಾಡವನ್ನು ಕಳಚುವ ತಂತ್ರ ಅಥವಾ ರಹಸ್ಯವನ್ನು ಬಯಲು ಮಾಡುವುದೇ ಸಿದ್ಧಾಂತ ಶಿಖಾಮಣಿಯ ಉದ್ದೇಶ.

ಷಟ್‌ಸ್ಥಲದರ್ಶನದ ಈ ಕೃತಿಯಲ್ಲಿ (೪೪+೫೭ ಅಂಗಸ್ಥಲ+ ಲಿಂಗಸ್ಥಲಗಳು) ಬಾಹ್ಯ ಹಾಗೂ ಆಂತರಿಕ ಶಿವಯೋಗ ಪಥಗಳು. ಸ್ಥೂಲ ಹಾಗೂ ಸೂಕ್ಷ್ಮಯೋಗ ಮಾರ್ಗಗಳು. ಭಾರತೀಯ ಯೋಗಪರಂಪರೆಯಲ್ಲಿ ವಿಭಿನ್ನವಾದ ವೈಶಿಷ್ಟ್ಯಪೂರ್ಣವಾದುದು ಶಿವಯೋಗ. ಆತ್ಮದ ಪ್ರತೀಕವಾದ ಇಷ್ಟಲಿಂಗದ ಮೂಲಕ ಶಿವಯೋಗ ಸಾಧನೆ ಆರಂಭವಾಗುತ್ತದೆ. ಇದೇ ಕೇಂದ್ರ ಕುರುಹಿನ ಮೂಲಕ ಅರುಹಿನತ್ತ ಪಯಣಿಸುವ ವಿಧಾನ. ವೀರಶೈವರ ದೃಷ್ಟಿಯಲ್ಲಿ ಇಷ್ಟಲಿಂಗ ಆತ್ಮನ ಕುರುಹು ಅದರ ಮೂಲಕ ಸಾಧನೆ 'ಅಹಂಗ್ರಹೋಪಾಸನೆ' ಇದು ಶಿವಯೋಗದ ವೈಶಿಷ್ಟ್ಯ.

ಷಟ್‌ಸ್ಥಲಗಳಲ್ಲಿ ಭಕ್ತ–ಮಾಹೇಶ–ಪ್ರಸಾದಿ ಸ್ಥಲಗಳು ಯೋಗದ ಆರಂಭ. ಶಿವಯೋಗದ ಪೀಠಿಕೆ, ಅಥವಾ ಬಹಿರಂಗ ಶಿವಯೋಗದ ನೆಲೆ ; ಪ್ರಾಣಲಿಂಗ–ಶರಣ–ಐಕ್ಯಸ್ಥಲಗಳು ಆಂತರಂಗ ಶಿವಯೋಗದ ಸ್ಥಿತಿಗಳು,

ಉಪಸ್ಥಲಗಳು ಸೇರಿ ಏಕೋತ್ತರ ಶತಸ್ಥಲದ ಕೃತಿ. ಇದರಲ್ಲಿ ವೀರಶೈವ ದರ್ಶನವನ್ನು ಲೋಕದ ಅನುಗ್ರಹಕ್ಕಾಗಿ ಶಿವಯೋಗಿವರ್ಯನು ರಚಿಸಿದನು ಎಂಬ ಹೇಳಿಕೆ ಅರ್ಥಪೂರ್ಣವಾಗಿದೆ. (ವೀರಶೈವ ಮಹಾತಂತ್ರಂ ಏಕೋತ್ತರ ಶತಸ್ಥಲಂ ಅನುಗ್ರಹಾಯಲೋಕಾನಾಂ)

ಶಿವಯೋಗದ ಪಂಚಯಜ್ಞಗಳು :

ತಪಃ ಕರ್ಮ–ಜಪೋ–ಧ್ಯಾನಂ–ಜ್ಞಾನಂ ಚೇತ್ಯಾನುಪೂರ್ವಕಂ (ಪ–೯. ಶ್ಲೋಕ–೨೧) ಶಿವನನ್ನು ಕುರಿತು ತಪಸ್ಸು, ಶಿವಪೂಜೆಯ ಕ್ರಿಯೆ, ಪಂಚಾಕ್ಷರ ಓಂಕಾರ ಮಂತ್ರವೇ ಜಪ. ಶಿವನ ಧ್ಯಾನವೇ ಧ್ಯಾನ. ಶಿವಾಗಮ ಜ್ಞಾನವೇ ಜ್ಞಾನ. ಇವು ಪಂಚಯಜ್ಞಗಳೆಂದು ಶಿವಾಗಮಗಳ ವಿಚಾರವನ್ನೇ ಸೂತ್ರ ರೂಪದಲ್ಲಿ ನಿರೂಪಿಸಿದೆ. ಇದು ಶಿವಯೋಗದ ಸಮಗ್ರ ಲಕ್ಷ್ಯ–ಲಕ್ಷಣವನ್ನು ಸೂತ್ರೀಕರಿಸಿ ಹೇಳಿದಂತಾಗಿದೆ. ವಿಜ್ಞಾನಿ ತನ್ನ ಚಿಂತನೆಯನ್ನು ಬಾಹ್ಯವಸ್ತುವಿನ ಮೇಲೆ ಬೀರುವಂತೆ; ಶಿವಯೋಗಿ ಆಂತರಿಕ ವಸ್ತುವಿನ ಮೇಲೆ ಹರಿಯಿಸುತ್ತಾನೆ. ಖಗೋಲ ಶಾಸ್ತ್ರಜ್ಞ ತನ್ನ ಮಾನಸಿಕ ಶಕ್ತಿಯನ್ನು ಕೇಂದ್ರೀಕರಿಸಿ, ದೂರದರ್ಶನದ ಮೂಲಕ ಗ್ರಹ–ನಕ್ಷತ್ರ–ಆಕಾಶ ಇವುಗಳ ಚಲನವಲನವನ್ನು ಕಂಡು ಹಿಡಿಯುವಂತೆ ಯೋಗಿ ಆಂತರಿಕವಾಗಿ ತನ್ನ ದೃಷ್ಟಿಯನ್ನು ಹರಿಯಿಸಿ, ಮನಸ್ಸಿನ ಗತಿ ವಿಧಿಗಳನ್ನು ನಿರ್ಣಯಿಸುತ್ತಾನೆ. ಮನಸ್ಸೇ ಮನುಷ್ಯ, ಮನಸ್ಸು ಚಂಚಲ, ಆತ್ಮನ ಕೈಯಲ್ಲಿ ಮನಸ್ಸು ಒಂದು ಉಪಕರಣ. ಈ ಮನಸ್ಸನ್ನು ಶಿಸ್ತಿಗೊಳಪಡಿಸಿ, ವಿಕಾಸಗೊಳಿಸಿ, ದೈವದೆಡೆಗೆ ಅಭಿಮುಖಗೊಳಿಸಿ, ದೈವದಲ್ಲಿ ವಿಲೀನಗೊಳಿಸುವುದೇ ಶಿವಯೋಗದ ಗುರಿ ಮತ್ತು ಪರಿ. ಇದನ್ನೇ ಸಿದ್ಧಾಂತ ಶಿಖಾಮಣಿ ಪ್ರತಿಪಾದಿಸುತ್ತದೆ.

ಸಿದ್ಧಾಂತ ಶಿಖಾಮಣಿಯಲ್ಲಿ ಶಿವಯೋಗ ಸಾಧನೆಯ ಪರಿ ಹೀಗಿದೆ :

ಪಿಂಡಸ್ಥಲದಿಂದ ಸಹಭಾಜನ ಸ್ಥಲದವರೆಗೆ ೪೪ ಅಂಗಸ್ಥಲಗಳು ಸಾಧಕನ ನಿಲ್ದಾಣಗಳು. ದೀಕ್ಷಾ ಗುರುಸ್ಥಲದಿಂದ ಜ್ಞಾನಶೂನ್ಯ ಸ್ಥಲದವರೆಗೆ ೫೭ ಲಿಂಗಸ್ಥಲಗಳು. ಇವುಗಳನ್ನು ಷಟ್‌ಸ್ಥಲಗಳಿಗೆ ಅನ್ವಯಿಸಿ ಹೇಳಿರುವುದು ಈ ಕೃತಿಯ ವೈಶಿಷ್ಟ್ಯ.

ಭಕ್ತಸ್ಥಲ :

ಈ ಸ್ಥಲದಲ್ಲಿ ಸಾಧಕ ದೈವದಲ್ಲಿ ಶ್ರದ್ಧೆ ಉಳ್ಳವನಾಗಿ, ಶುದ್ಧ ಮನಸ್ಸಿನವನಾಗಿ, ಆಧ್ಯಾತ್ಮದಲ್ಲಿ ಆಸಕ್ತಿ ಉಳ್ಳವನಾಗಿ ಇರುತ್ತಾನೆ. ಇವನಿಗೆ ವೀರಶೈವ ಪರಿಭಾಷೆಯಲ್ಲಿ 'ಪಿಂಡ' ಎಂದು ಕರೆಯುತ್ತಾರೆ. ಅವನ ಸಾಧನೆ ಮುಂದುವರಿದು ಕ್ರಮೇಣ ಆಧ್ಯಾತ್ಮದ ಹಂಬಲ ಬೆಳೆದಂತೆ ಶರೀರ–ಆತ್ಮ ಬೇರೆ ಬೇರೆ; ಜೀವಾತ್ಮ ಪರಮಾತ್ಮ ಬೇರೆ ಎನ್ನುವ ಅರಿವು ಉಂಟಾಗುತ್ತದೆ. ಆಗ ಅವನು 'ಪಿಂಡಜ್ಞಾನಿ' ಎನಿಸಿಕೊಳ್ಳುತ್ತಾನೆ. ಸಾಧಕನಿಗೆ ಕ್ರಮೇಣ ಶಿವಯೋಗ ಪಥದಲ್ಲಿ ಸಾಗಿದಂತೆ ಅವನ ಮನಸ್ಸು ಸಂಸಾರದಲ್ಲಿ ಜುಗುಪ್ಸೆ ಉಂಟಾಗಿ ಆಧ್ಯಾತ್ಮದಲ್ಲಿ ಆಸಕ್ತಿ ಹೆಚ್ಚುತ್ತಾ ಹೋಗುತ್ತದೆ. ಆಗ ಆಧ್ಯಾತ್ಮದ ಮಾರ್ಗದರ್ಶನಕ್ಕಾಗಿ ಒಬ್ಬ ಗುರುವನ್ನು ಆಶ್ರಯಿಸುತ್ತಾನೆ. ಈ ಗುರು ಶಿಷ್ಯನನ್ನು ಪರೀಕ್ಷಿಸಿ, ಶಿವ ದೀಕ್ಷೆಯನ್ನು ಅನುಗ್ರಹಿಸುತ್ತಾರೆ. ವೇಧಾ ಮತ್ತು ಕ್ರಿಯಾದೀಕ್ಷೆಗಳಿಂದ ಹಸ್ತ–ಮಸ್ತಕ ಸಂಯೋಗದಿಂದ ಶಿಷ್ಯನ ಚಿತ್ ಕಲೆಯನ್ನು ಶಿವಲಿಂಗದಲ್ಲಿ ನಿಯೋಜಿಸಿ, ಶಿವಕ್ಕೂ–ಜೀವಕ್ಕೂ ಸಾಮರಸ್ಯ ಮಾಡಿ, ಇಷ್ಟಲಿಂಗವನ್ನು ಶಿಷ್ಯನ ಹಸ್ತದಲ್ಲಿರಿಸಿ, ಇದು ನಿನ್ನ ಪ್ರಾಣಲಿಂಗ ದೇಹದಿಂದ ಎಂದೂ ಅಗಲಿಸಬೇಡವೆಂದು ಉಪದೇಶ ಮಾಡುತ್ತಾನೆ. ಲಿಂಗಧಾರಣೆಯ ಸಂಸ್ಕಾರದಿಂದ ಸಾಧಕನಿಗೆ, ಶಿವಯೋಗಸಾಧನೆಯ ಅರ್ಹತೆ ಲಭಿಸುತ್ತದೆ.

ಗುರು–ಲಿಂಗ–ಜಂಗಮ–ಭಸ್ಮ–ರುದ್ರಾಕ್ಷಿ ಪಾದೋದಕ–ಪ್ರಸಾದಗಳ ಬಗ್ಗೆ ಪೂಜ್ಯ ಭಾವನೆ ಉಂಟಾಗುತ್ತದೆ. ಭಕ್ತಸ್ಥಲದ (೯ ಉಪಸ್ಥಲಗಳು) ಇಲ್ಲಿ ಗುರು–ಲಿಂಗ–ಜಂಗಮದ ಸ್ವರೂಪದ ಪರಿಚಯವಾಗಿ ಸಾಧಕನ ಸದ್ಭಕ್ತಿ ಸದಾಚಾರಗಳು ವಿಕಾಸವಾಗುತ್ತವೆ. ಅವನ ಶ್ರದ್ಧಾಭಕ್ತಿ ಕ್ರಮೇಣ ಬೆಳೆ ಯುತ್ತವೆ, ಭಕ್ತಸ್ಥಲದಲ್ಲಿ (ಅಂಗ–ಲಿಂಗ ಸ್ಥಲಗಳು ೧೫+೯=೨೪) ಇದು ಶಿವಯೋಗ ಸಾಧನೆಯ ಮೊದಲ ಹಂತ, ಅಡಿಗಲ್ಲು.

ಮಹೇಶ್ವರ ಸ್ಥಲ :

ಇದು ಶಿವಯೋಗಸಾಧನೆಯ ಎರಡನೆಯ ಹಂತ. ಇಲ್ಲಿ ಸಾಧಕನಿಗೆ ಶಿವನಲ್ಲಿ ಅತೀವ ಶ್ರದ್ಧೆ–ನಿಷ್ಠೆ ಬೆಳೆಯುತ್ತದೆ. ಅವನಲ್ಲಿ ಅಂತರಂಗದ ವಿಕಾಸವಾಗಿ, ಗುರು–ಲಿಂಗ–ಜಂಗಮರ ಪೂಜೆ, ಕೈಂಕರ್ಯ, ಸದಾಚಾರ,

ದಾನ-ಧರ್ಮಾದಿ ಪರೋಪಕಾರ ಗುಣ ಮೌಲ್ಯಗಳು ಅಳವಡುತ್ತವೆ. ಕ್ರಮೇಣ ಆತನಿಗೆ ಪೂರ್ವಾಶ್ರಮದ ಬಂಧು-ಬಾಂಧವರ ಮೋಹ ಇಲ್ಲದಂತಾಗಿ, ಸರ್ವರಲ್ಲೂ ಸಮಭಾವ ನೆಲಸುತ್ತದೆ. ಜ್ಞಾನ-ಕ್ರಿಯೆಗಳ ಸಮನ್ವಯ ವಿಚಾರಗಳು ಅವನಲ್ಲಿ ವಿಕಾಸಗೊಳ್ಳುತ್ತವೆ. ಅಹಿಂಸೆ-ಸತ್ಯ-ಅಸ್ತೇಯ-ಬ್ರಹ್ಮಚರ್ಯ-ದಯಾ, ಕ್ಷಮಾ, ದಾನ, ಪೂಜಾ-ಜಪ-ಧ್ಯಾನ ಈ ಹತ್ತು ಧಾರ್ಮಿಕ ಮೌಲ್ಯಗಳ ಅನುಷ್ಠಾನ, ಅನುಸಂಧಾನ ಮಾಡುತ್ತಾನೆ. ಈ ಹಂತದಲ್ಲಿ ಸಾಧಕ ಮಹೇಶ್ವರ ನೆನಿಸಿಕೊಳ್ಳುತ್ತಾನೆ. ಧರ್ಮಾಚಾರ-ಭಾವಾಚಾರ-ಜ್ಞಾನಾಚಾರಗಳ ಕಟ್ಟಾ, ಆಚರಣೆಗಳಲ್ಲಿ ನಿರತನಾಗುತ್ತಾನೆ. (ಇಲ್ಲಿ ಅಂಗ+ಲಿಂಗ ಸ್ಥಲಗಳು ೯+೯=೧೮)

ಪ್ರಸಾದಿ ಸ್ಥಲ :

ಇದು ಸಾಧಕನು ಏರುವ ಮೂರನೆಯ ಸೋಪಾನ. ಈ ಹಂತದಲ್ಲಿ ಸಾಧಕನು ಮನಃಪ್ರಸಾದ ಯೋಗದಿಂದ ಪ್ರಸಾದಿ ಆಗುತ್ತಾನೆ. ಮನಸ್ಸು ಪ್ರಸನ್ನವಾಗುತ್ತದೆ. ಈಶಾವಾಸ್ಯಾಮಿದಂ ಸರ್ವಂ ಎನ್ನುವಂತೆ ಜಗತ್ತೆಲ್ಲ ದೈವಪ್ರಸಾದ ಎನ್ನುವ ಭಾವನೆ ಅವನಲ್ಲಿ ಬೆಳೆಯುತ್ತದೆ ಮತ್ತು ಅವನು ಜಾಗ್ರತ-ಸ್ವಪ್ನ-ಸುಷುಪ್ತಿ ಈ ಮೂರು ಅವಸ್ಥೆಯಲ್ಲೂ ಸದಾ ತನ್ನ ಸಾಧನೆಯ ಬಗ್ಗೆ ಎಚ್ಚರದಿಂದ ಇರುತ್ತಾನೆ. ಇದು ಅವಧಾನ ಸ್ಥಿತಿ. ಜಗವೆಲ್ಲ ಶಿವಮಯ ಎನ್ನುವ ಭಾವನೆ ಅವನಲ್ಲಿ ವಿಕಾಸವಾಗುತ್ತದೆ. ಈ ಸ್ಥಲದಲ್ಲಿ (ಅಂಗ ೭-ಲಿಂಗ ೯-೧೬ ಸೋಪಾನಗಳು)

ಪ್ರಾಣಲಿಂಗ ಸ್ಥಲ :

ಇದು ಸಾಧಕನ ನಾಲ್ಕನೆಯ ಶಿವಯೋಗ ಸಾಧನೆಯ ಸ್ಥಲ. ಭಕ್ತ-ಮಹೇಶ-ಪ್ರಸಾದಿ ಈ ಸ್ಥಲಗಳು ಕ್ರಿಯಾ ಪ್ರಧಾನವಾದವುಗಳು. ಪ್ರಾಣಲಿಂಗ-ಶರಣ-ಐಕ್ಯಸ್ಥಲಗಳು ಜ್ಞಾನಪ್ರಧಾನವಾದವು. ಈ ಪ್ರಾಣ ಲಿಂಗ ಸ್ಥಲದಿಂದ ಸಾಧಕನ ಅಂತರಂಗದ ಶಿವಯೋಗ ಸಾಧನೆ ಆರಂಭ ವಾಗುತ್ತದೆ. ಈ ಹಂತದಲ್ಲಿ ಸಾಧಕನಾದ ಶಿವಯೋಗಿ ಕುರುಹಿನ ಲಿಂಗಪೂಜೆ ಯಿಂದ ಕ್ರಮೇಣ ವಿಮುಖನಾಗಿ, ಬಾಹ್ಯ ದೃಷ್ಟಿಯನ್ನು ಆಂತರಿಕ ದೃಷ್ಟಿಯ ಕಡೆಗೆ ಪರಿವರ್ತಿಸಿ, ಚಿದ್ರೂಪನಾದ ಪ್ರಾಣಲಿಂಗ ಉಪಾಸನೆ ಮಾಡುತ್ತಾನೆ.

ಬಾಹ್ಯದೃಷ್ಟಿಗೆ ಇಷ್ಟಲಿಂಗ ಪೂಜೆ ; ಆಂತರಿಕ ದೃಷ್ಟಿಗೆ ಪ್ರಾಣಲಿಂಗ ಪೂಜೆ, ಇದು ಮಾನಸಿಕ ಪೂಜೆ. ಸಾಧಕ ತನ್ನ ಮನಸ್ಸನ್ನು ಪ್ರಾಣಲಿಂಗದಲ್ಲಿ ಲಯಗೊಳಿಸುತ್ತಾನೆ. ಆಗ ಇವನು ಪ್ರಾಣಲಿಂಗಿಯಾಗುತ್ತೆ, ಈ ಹಂತದಲ್ಲಿ ಲಿಂಗವೇ ಪ್ರಾಣ ; ಪ್ರಾಣವೇ ಲಿಂಗವಾಗಿ ಅನುಸಂಧಾನ ಮುಂದವರಿಯುತ್ತದೆ. ಹಂಸರೂಪಿಯಾದ ಪರಮಾತ್ಮನನ್ನು ಸ್ನೇಹಭಾವದಿಂದ ಧ್ಯಾನಿಸುತ್ತಾನೆ. ಈ ಹಂತದಲ್ಲಿ ಶಿವ–ಜೀವನ ಏಕತ್ವ ಸಿದ್ಧಿಯ ಸಾಧನೆ ತೀವ್ರವಾಗುತ್ತದೆ. ಇಲ್ಲಿ ಅನುಭಾವ ಭಕ್ತಿ ಬೆಳೆಯುತ್ತದೆ. ಈ ಸ್ಥಲದಲ್ಲಿ ಆತ್ಮಸ್ಥಲ–ಅಂತರಾತ್ಮಸ್ಥಲ–ಪರಮಾತ್ಮ ಸ್ಥಲಗಳ, ವಿಸ್ತಾರವಾದ ನಿರೂಪಣೆ ಇದೆ. ಆತ್ಮ–ಅಂತರಾತ್ಮ–ಪರಮಾತ್ಮರ ನೆಲೆ–ಕಲೆಗಳ ಅರಿವು ಅನುಷ್ಠಾನದಿಂದ ಪ್ರಾಣಲಿಂಗಿಯ ಅನುಭಾವ ವಿಕಾಸವಾಗುತ್ತದೆ.

(ಈ ಸ್ಥಲದಲ್ಲಿ ಅಂಗ+ಲಿಂಗ ಸ್ಥಲಗಳು ೫+೯=೧೪) ಈ ಪ್ರಾಣಲಿಂಗ ಸ್ಥಲದಲ್ಲಿ ಶಿವಯೋಗದ ಸಮಗ್ರ ಸ್ವರೂಪವನ್ನು ಕಾಣಬಹುದಾಗಿದೆ.

ಶಕ್ತಿಯೇ ಪ್ರಾಣ. ಶಿವನೆ ಲಿಂಗ. ಶಿವ–ಶಕ್ತಿಯರ ಸಂಯೋಗವೇ ಪ್ರಾಣಲಿಂಗ. ಚಿತ್ತ ವೃತ್ತಿ ನಿರೋಧವೇ ಯೋಗ. ಚಿತ್ತವೃತ್ತಿ ನಿರೋಧದಲ್ಲಿ ಶಿವಯೋಗಿಯು ಪ್ರಾಣವನ್ನು ನಿಗ್ರಹಿಸುತ್ತಾನೆ. ನಮ್ಮ ಶರೀರದಲ್ಲಿ ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ದಶವಾಯುಗಳು ಉಂಟು. ಇವು ಪ್ರಾಣವಾಯುಗಳು. ಯೋಗದ ಉದ್ದೇಶ ಹರಿದಾಡುವ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸುವುದು. ಉಸಿರಾಟವನ್ನು ನಿಯಂತ್ರಣ ಗೊಳಿಸುವುದು. ಪ್ರಾಣಾಯಾಮ, ನಮ್ಮ ದೇಹದಲ್ಲಿ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಸಹಸ್ರಾರವೆಂಬ ಚಕ್ರಗಳಿವೆ. ಹೃದಯ ಮಧ್ಯದಲ್ಲಿ ಪರಮಾತ್ಮನು ಅಂಗುಷ್ಠ ಮಾತ್ರನಾಗಿ ನೆಲಸಿದ್ದಾನೆ. ''ವಾಲಗ್ರಶತ ಭಾಗೇನ ಸದೃಶೇ ಹೃದಯ ಸ್ಥಿತಃ'' ಎನ್ನುವಂತೆ ಕೂದಲ ತುದಿಯ ನೂರಂಶದಲ್ಲಿ ಒಂದಂಶಕ್ಕೆ ಸಮನಾಗಿ ಹೃದಯದಲ್ಲಿ ಆತ್ಮನಿದ್ದಾನೆ. ಶಿವಯೋಗಿಯು ಪ್ರಾಣವಾಯುವನ್ನು ಮೇಲಿನ ಚಕ್ರಗಳಲ್ಲಿ; ಅಪಾನವಾಯುವನ್ನು ಕೆಳಗಿನ ಚಕ್ರಗಳಲ್ಲಿ ತಡೆಹಿಡಿದು ನಿಲ್ಲಿಸುತ್ತಾನೆ. ಈ ಪ್ರಕ್ರಿಯೆಯಿಂದ ಮನಸ್ಸು ನಿರ್ಮಲವಾಗುತ್ತದೆ. ಈ ನಿರ್ಮಲ ಮನಸ್ಸಿನಲ್ಲಿ ಜ್ಯೋತಿರೂಪದ ಲಿಂಗದರ್ಶನವಾಗುತ್ತದೆ. ಇದನ್ನೇ ಪ್ರಾಣಲಿಂಗವೆಂದು ಕರೆಯುತ್ತಾರೆ.

ಶಿವಯೋಗಿಯ ಸಾಧನೆಯಿಂದ ಅಂತರಂಗದಲ್ಲಿ ಜ್ಯೋತಿಯು ಬೆಳಗುತ್ತದೆ. ಸಹಸ್ರಾರ–ಅನಾಹತ–ಭ್ರೂಮಧ್ಯ ಇವುಗಳಲ್ಲಿ ಗುರು–ಲಿಂಗ ಜಂಗಮ ನೆಲಸಿದ ಸ್ಥಲಗಳು ಲಿಂಗವನ್ನು ಭಾವಪುಷ್ಪಗಳಿಂದ ಪೂಜಿಸುವುದೇ ಪ್ರಾಣಲಿಂಗಾರ್ಚನೆ. ಲಿಂಗದ ಸ್ವರೂಪ ಅರಿತು, ದೇಹಭಾವನೆ ಮರೆತು, ಮನಸ್ಸನ್ನು ಲಿಂಗದಲ್ಲಿ ಲೀನಗೊಳಿಸಬೇಕು. ಅದನ್ನು ಕಂಡು ಆನಂದ ಭಾಷ್ಪಗಳು ಉದುರಬೇಕು. ಅದೇ ಲಿಂಗಕ್ಕೆ ಮಜ್ಜನ. ಮನವೇ ಪುಷ್ಪ. ಹೀಗೆ ಸಿದ್ಧಾಂತ ಶಿಖಾಮಣಿಯ ಪ್ರಾಣಲಿಂಗ ಸ್ಥಲದಲ್ಲಿ ಶಿವಯೋಗ ವಿಹಾರ – ವಿಸ್ತಾರವಾಗಿ ನಿರೂಪಿತವಾಗಿದೆ. ದೇಹವೇ ಬ್ರಹ್ಮಪುರಿ. ಹೃದಯಕಮಲವೇ ಅರಮನೆ. ಆ ಅರಮನೆಯ ಒಳಹೊರಗೆ, ಕೋಣೆಗಳುಂಟು. ಶಿವಯೋಗಿ–ದೇಹವೆಂಬ ಬ್ರಹ್ಮಪುರವನ್ನು ಪ್ರವೇಶಿಸಿದಾಗ ಅವನ ಅಜ್ಞಾನ, ವ್ಯಾಮೋಹ ಗಳು ನಿವಾರಣೆಯಾಗಿ ಭಕ್ತಿ ಭಾವ ನೆಲೆಗೊಂಡು, ದೇವರನ್ನು ಕಾಣುತ್ತಾನೆ. ವಿವೇಕ–ವೈರಾಗ್ಯ ಭಾವನೆಗಳು ಅವನಲ್ಲಿ ಮೂಡುತ್ತವೆ. ಪರಶಿವನನ್ನು ಭಾವಪುಷ್ಪಗಳಿಂದ ಪೂಜಿಸುತ್ತಾನೆ. ಇದು ಗುಣಾತ್ಮಕ ಪೂಜೆ. ಅರ್ಥಪೂರ್ಣ ವಾದ ಸಾಧನೆ. ಈ ಮಾನಸಿಕ ಪೂಜೆಯಲ್ಲಿ ಕ್ಷಮಾಗುಣವೇ ಅಭಿಷೇಕ ; ವಿವೇಕವೇ ವಸ್ತ್ರ ; ಸತ್ಯವೇ ಆಭರಣ ; ವೈರಾಗ್ಯವೇ ಪುಷ್ಪಮಾಲೆ ; ಸಮಾಧಿ ಸಂಪತ್ತೇ ಗಂಧ ; ನಿರಹಂಕಾರವೇ ಅಕ್ಷತೆ ; ಶ್ರದ್ಧೆಯೇ ಧೂಪ ; ಜ್ಞಾನವೇ ದೀಪ ; ಭ್ರಾಂತಿ ಮೂಲಕ ಪ್ರಪಂಚದ ಅರ್ಪಣೆ ನೈವೇದ್ಯ; ಮೌನವೇ ಘಂಟಾನಾದ ; ವಿಷಯಾರ್ಪಣೆಯೇ ತಾಂಬೂಲ ; ವಿಷಯ ಭ್ರಾಂತಿ ರಾಹಿತ್ಯವೇ ದಕ್ಷಿಣೆ ; ಬುದ್ಧಿ ತಾದಾತ್ಮ್ಯದ ಆಸಕ್ತಿಯೇ ನಮಸ್ಕಾರ. ಇದು ಸಿದ್ಧಾಂತ ಶಿಖಾಮಣಿ ನಿರೂಪಿಸುವ ಮಾನಸಪೂಜೆ ; ಗುಣಾತ್ಮಕ ಪೂಜೆ. ಪ್ರಾಣಲಿಂಗ ಸ್ಥಲದಲ್ಲಿ ಸಾಧಕ ಶಿವಯೋಗಿಯು ಧ್ಯಾನ್ಯದಲ್ಲಿ ಹಂಸರೂಪಿ ಪರಮಾತ್ಮನನ್ನು ಕಂಡು ಆತನೇ ನಾನು ಎಂಬ ಸೋಹಂ ಭಾವನೆಯಿಂದ ಅಹಂಗ್ರಹೋಪಾಸನೆ ಮಾಡುತ್ತಾನೆ. ಉಪಾಸನೆ ಸಿದ್ಧಿಯಾದಾಗ ಪ್ರಾಣ ಲಿಂಗಿಯು ಶಿವನಲ್ಲಿ ಬೆರೆಯುತ್ತಾನೆ. ಇದು ಶಿವಯೋಗ ಸಮಾಧಿ.

ಅಂತಃ ಷಟ್ ಚಕ್ರರೂಢಾನಿ ಪಂಕಜಾನಿ ವಿಭಾವಯೇತ್ ।
ಬ್ರಹ್ಮಾದಿ ಸ್ಥಾನ ಭೂತಾನಿ ಭ್ರೂಮಧ್ಯಾಂತಾನಿ ಮೂಲತಃ ॥

ಭ್ರೂಮಧ್ಯ ದೂರ್ಧ್ವ ಭಾಗೇತು ಸಹಸ್ರದಲಮಂಬುಜಮ್ ।
ಭಾವಯೇತ್ತತ್ರವಿಮಲಂ ಚಂದ್ರಬಿಂಬಿಂತದನವತರ ॥
ಸೂಕ್ಷ್ಮರದ್ರಂ ವಿಜಾನೀಯಾತ್ ತತ್‌ಕೈಲಾಸ ಪದಂವಿದುಃ ।
ತತ್ರಸ್ಥಾಂ ಭಾವಯೋಚ್ಛಂಭು ಸರ್ವಕಾರಣಕಾರಣ ॥

(ಪ್ರ –೧೨ – ೭೬–೭೯)

ಈ ಮೂರು ಶ್ಲೋಕದಲ್ಲಿ ಶಿವಯೋಗದ ಸಂಪೂರ್ಣ ಸ್ವರೂಪದ ಪ್ರತಿಮಾ ವಿಧಾನದ ಚಿತ್ರವನ್ನು ಕಾಣಬಹುದು. ಪ್ರಾಣಲಿಂಗದ ಹಂತದಲ್ಲಿ ಶಿವಯೋಗಿ ಭಾವನಾಮಯ ಶರೀರದಲ್ಲಿ ಷಟ್–ಚಕ್ರ ; ಓಂ ಷಟ್‌ವರ್ಗ ; ಷಟ್‌ದೈವ ; ಷಟ್‌ಶಕ್ತಿ; ಷಟ್‌ಭಕ್ತಿ; ಷಟ್‌ಜೀವ ; ಷಟ್‌ಲಿಂಗ ; ಷಟ್ ಪ್ರಸಾದಗಳ (ನೊಳಗೊಂಡು ಭಕ್ತ–ಮಹೇಶ–ಪ್ರಸಾದಿ–ಪ್ರಾಣಲಿಂಗ–ಶರಣ) ಐಕ್ಯ ಸ್ಥಾನಗಳಲ್ಲಿ ಆಯಾ ಚಕ್ರಗಳಲ್ಲಿ ವರ್ಣ–ದೈವ–ಶಕ್ತಿ–ಜೀವ ಪ್ರಸಾದಗಳನ್ನು ಪೂಜಿಸಿ, ಧ್ಯಾನಿಸಿ ಪ್ರಾಣಲಿಂಗ ಪೂಜೆ ಮಾಡುತ್ತಾನೆ. ಇದು ಮಾನಸಿಕ ವಿರಾಟ್ ಸ್ವರೂಪದ ಪೂಜೆ. ಶಬ್ದಕ್ಕೆ ನಿಲುಕದ, ಭಾಷೆಗೆ ತಲುಪದ ಪೂಜೆ. ನಿಶ್ಯಬ್ದ–ನಿರಾಳ ಪೂಜೆ. ಅರ್ಥ ಪೂರ್ಣವಾದ ಪೂಜೆ.

ಶರಣಸ್ಥಲ :

ಇದು ಸಾಧನೆಯ ಐದನೆಯ ಸೋಪಾನ. ಇಲ್ಲಿ ಪ್ರಾಣಲಿಂಗಿಯು ತಾನು ಸತಿ ಎಂದೂ; ಶಿವನು ಪತಿ ಎಂದೂ ಭಾವಿಸಿ, ಸಾಧನೆ ಮುಂದುವರಿಸುತ್ತಾನೆ. ಆಗ ಇವನು ಶರಣ ಎನಿಸಿಕೊಳ್ಳುತ್ತಾನೆ. ಈ ಹಂತದಲ್ಲಿ ಅವನ ಮನಸ್ಸು ಶಿವಭಾವದ ನಿಬ್ಬೆರಗಿನಲ್ಲಿ ಆನಂದಮಯವಾಗಿರುತ್ತದೆ. ಆನಂದ ಭಕ್ತಿಯಲ್ಲಿ ವ್ಯವಹರಿಸುತ್ತಾನೆ. ಈ ಸ್ಥಲದಲ್ಲಿ ದೀಕ್ಷಾ–ಶಿಕ್ಷಾ–ಜ್ಞಾನ ಪಾದೋದಕಗಳ ಕ್ರಿಯಾ–ಭಾವನಿಷ್ಪತ್ತಿ ಮುಂತಾದವುಗಳು ಅರಿವು, ಆಚರಣೆ, ಅನುಸಂಧಾನ ಮುಂದುವರಿಯುತ್ತದೆ. (ಇಲ್ಲಿ ಅಂಗ+ಲಿಂಗ ೪+೧೨=೧೬.)

ಐಕ್ಯ ಸ್ಥಲ :

ಇದು ಶಿವಯೋಗಿ ಸಾಧಕನ ಸಾಧನೆಯ ಕೊನೆಯಹಂತ. ಈ ಸ್ಥಲದ ಸಾಧನೆಯಲ್ಲಿ ಅಂತರ್ಲಿಂಗದ ಮಾನಸಿಕ ಭಾವದ ಧ್ಯಾನ–ಪೂಜೆ–ಯೋಗದಿಂದ ಶಿವನಲ್ಲಿ ಐಕ್ಯಭಾವ ಹೊಂದಿ ಐಕ್ಯನೆನಿಸುತ್ತಾನೆ.

ಜಲೇ ಜಲಮಿವ ನ್ಯಸ್ತಂ ವಹ್ನೌವಹ್ನಿರವಾರ್ಪಿತಂ ।
ಪರಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ ॥
(ಪ–೨೦–ಶ್ಲೋ–೧೩೦೧)

ನೀರಿನಲ್ಲಿ ನೀರು ಬೆರೆತಂತೆ, ಉರಿಯಲ್ಲಿ ಉರಿಯು ಬೆರೆತಂತೆ, ಪರಬ್ರಹ್ಮದಲ್ಲಿ ಯೋಗಿಯು ಲೀನವಾಗುತ್ತಾನೆ; ಐಕ್ಯನಾಗುತ್ತಾನೆ.

ಶುದ್ಧಾಂತ ಕರಣನಾದ ಜೀವನು ಶಿವಾನಂದ ಮಹಾಸಮುದ್ರದಲ್ಲಿ ಲೀನನಾಗುತ್ತಾನೆ. ಈ ಹಂತದಲ್ಲಿ ದೇಹವಿದ್ದರೂ ದೇಹ ಧರ್ಮಕ್ಕೆ ಅಂಟದಿರುವ ಆಚಾರ ಸಂಪತ್ತಿನ ಸ್ಥಲ. ಎಲ್ಲೆಡೆ ಶಿವಭಾವವನ್ನು ಕಾಣುವ ಏಕಭಾಜನಸ್ಥಲ. ಭೇದಭಾವನೆಯನ್ನು ನಿರಾಕರಿಸುವ ಸಹಭಾಜನ ಸ್ಥಲ. ಈ ವಿಷಯಗಳ ಅರಿವಿನಿಂದ, ಅನುಸಂಧಾನದಿಂದ ಸಮರಸ ಭಕ್ತಿಯಿಂದ, ಲಿಂಗಾಂಗ ಸಾಮರಸ್ಯ ಅಥವಾ ಜೀವ–ಶಿವರ ಐಕ್ಯತೆಯ ಶಿವಯೋಗದ ಉತ್ತುಂಗ ಸಾಧನೆ ಸಿದ್ಧಿಸಿ ಶಿವಯೋಗಿಯ ಜೀವ ಪರಮಾತ್ಮನಲ್ಲಿ ಐಕ್ಯವಾಗುತ್ತದೆ. (ಇಲ್ಲಿ ಅಂಗ+ಲಿಂಗ ೪+೯=೧೩ ಸ್ಥಲಗಳು) ಭಕ್ತಸ್ಥಲದಲ್ಲಿ ೨೪ : ಮಹೇಶಸ್ಥಲದಲ್ಲಿ ೧೮ : ಪ್ರಸಾದಿಸ್ಥಲದಲ್ಲಿ ೧೬ : ಪ್ರಾಣಲಿಂಗಿ ಸ್ಥಲದಲ್ಲಿ ೧೪ : ಶರಣಸ್ಥಲದಲ್ಲಿ ೧೬ : ಐಕ್ಯ ಸ್ಥಲದಲ್ಲಿ ೧೩ : ಹೀಗೆ ಒಟ್ಟು ೧೦೧ ಸ್ಥಲಗಳು)

ಶಿವಯೋಗ ಸಮಾಧಿ : (ಶಿವಾತ್ಮಾ ಧ್ಯಾನ ಸಂಪತ್ತಿಃ) ಸಮಾಧಿರಿತಿ ಕಥ್ಯತೆ
(ಪ–೧೨–೭೨)

ಸಮಾಧಿ ಎಂದರೆ ಧ್ಯಾನಿಸುವ ವಸ್ತುವಿನಲ್ಲಿ ತಲ್ಲೀನವಾಗುವುದು. ನದಿ ಸಾಗರಕ್ಕೆ ಬಿದ್ದು ಸಾಗರದಲ್ಲಿ ಐಕ್ಯನಾಗುವಂತೆ ಹಾಗೆಯೇ ಧ್ಯಾನಿಸುವ ಮನಸ್ಸು ಭಗವಂತನಲ್ಲಿ ಐಕ್ಯವಾಗುತ್ತದೆ. ನಿರ್ವಿಕಲ್ಪ ಸಮಾಧಿಯಲ್ಲಿ ಉಪ್ಪಿನಗೊಂಬೆ ಸಾಗರದಲ್ಲಿ ಕರಗಿ ಹೋಗುವಂತೆ ಅದರಲ್ಲಿ ಒಂದಾಗಿ ಹೋಗುವುದು. ಇದೇ ಶಿವಯೋಗದ ಗುರಿ. ಭಾವಾತೀತ ಧ್ಯಾನವೆಂಬ ಸಂಧಾನ ಸಂಪತ್ತಿಯೇ ಶಿವಯೋಗ ಸಮಾಧಿ. ಮಹಾಲಿಂಗ ಪರಮಾತ್ಮ ; ಪ್ರಾಣವೇ ಜೀವಾತ್ಮ ಇವರ ಏಕತ್ವ ಸಿದ್ಧಿಯೇ ಶಿವಯೋಗ ಸಮಾಧಿ. ಪರಶಿವ ವಸ್ತು ಸ್ವಯಂಜ್ಯೋತಿ ತೋರಲುಬಾರದು. ಅದು ಮಾತು ಮನಗಳಿಗೆ ಮೀರಿದುದು. ಸಂಸಾರವೆಂಬ ಕಾರ್ಗತ್ತಲೆಗೆ ಶಿವಧ್ಯಾನವು ಪ್ರಖರ

ಸೂರ್ಯನ ಬೆಳಕಿನಂತೆ ಮಲತ್ರಯವನ್ನು ನಾಶ ಮಾಡಿ, ಅವುಗಳ ಅಸ್ಮಿತಾದಿ ಪಂಚಕ್ಲೇಶಗಳೆಂಬ ಎಲೆಗಳನ್ನು ತರಿದು ಹಾಕುತ್ತದೆ ಎಂದು ಸುಂದರ ದೃಷ್ಟಾಂತದೊಂದಿಗೆ ಸಿದ್ಧಾಂತ ಶಿಖಾಮಣಿ ವಿವರಿಸುತ್ತದೆ.

ಕಣ್ಣಿಗೆ ಕಾಣುವುದು ಇಷ್ಟಲಿಂಗ ; ಮನಸ್ಸಿಗೆ ಕಾಣುವುದು ಪ್ರಾಣ ಲಿಂಗ ; ಭಾವದಲ್ಲಿ ಕಾಣುವುದು ಭಾವಲಿಂಗ ; ಇದಕ್ಕೆ ಪರ್ಯಾಯವಾಗಿ, ಪತಂಜಲಿ ಸಮಾಧಿಗಳಲ್ಲಿ ಎರಡು ವಿಧವೆಂದು ಹೇಳುತ್ತಾನೆ ಸಂಪ್ರಜ್ಞಾತ ಅಸಂಪ್ರಜ್ಞಾತ ಎಂದು ಅಂದರೆ ಪ್ರಾಣಲಿಂಗದಲ್ಲಿ ಮನಸ್ಸು ಮಗ್ನವಾಗು ವುದು ಸಂಪ್ರಜ್ಞಾತ ಸಮಾಧಿ ; ಭಾವದಲ್ಲಿ ಮನಸ್ಸು ಮಗ್ನವಾದರೆ ಅಸಂಪ್ರಜ್ಞಾತ ಸಮಾಧಿ. ಇದಕ್ಕೊಂದು ಸುಂದರವಾದ ದೃಷ್ಟಾಂತ ಹೀಗಿದೆ :

ಒಂದು ತೊಟ್ಟಿಲಲ್ಲಿ ಆಡುತ್ತಾ ಮಗು ಮಲಗಿದೆ. ಅದನ್ನು ಮಲಗಿಸಲು ತಾಯಿ ಜೋಗುಳ ಹಾಡುತ್ತಾ ತೂಗುತ್ತಿದ್ದಾಳೆ. ಆಕೆ ಹಾಡುತ್ತಾ ಇದ್ದಾಳೆ. ಕಾಲ ಸರಿಯುತ್ತದೆ. ತಾಯಿಯ ಹಾಡು ಕೇಳುತ್ತಾ, ಕೇಳುತ್ತಾ ಮಗು ಮೌನವಾಗುತ್ತದೆ. ಮಲಗಿ ಆನಂದಿಸುತ್ತದೆ. ತೂಗುತ್ತಾ, ತೂಗುತ್ತಾ ತಾಯಿ ತನಗರಿವಿರದಂತೆ ನಿಶ್ಯಬ್ದ ನಿದ್ರೆಯಲ್ಲಿ ಪ್ರವೇಶಿಸುತ್ತಾಳೆ. ಆ ಸಮಯದಲ್ಲಿ ಮಗುವಿಲ್ಲ; ತಾಯಿಯಿಲ್ಲ ತೊಟ್ಟಿಲಿಲ್ಲ; ತೂಗುವಿಕೆಯೂ ಇಲ್ಲ. ಆನಂದ ಸಮರಸಗೊಂಡಿದೆ. ಅಲ್ಲಿ ವ್ಯಕ್ತಿ ಪ್ರಜ್ಞೆಯೂ ಇಲ್ಲ; ಇದು ಅಸಂಪ್ರಜ್ಞಾತ ಸಮಾಧಿಯೋಗ. ಪತಂಜಲಿಯ ಯೋಗಶಾಸ್ತ್ರಕ್ಕೂ, ಶಿವಯೋಗಕ್ಕೂ ತುಂಬಾ ಸಾಮತ್ಯೆ ಇದೆ. ದೇಹದ ಅಂತರ್–ಬಹಿರ್ ಶುದ್ಧಿಗಾಗಿ ಪತಂಜಲಿ ಹೇಳುವ ಯಮ–ನಿಯಮ–ಆಸನ–ಪ್ರಾಣಾಯಾಮ, ಪ್ರತ್ಯಾಹಾರಗಳು ಬಹಿರ್ಯೋಗ ಸಾಧನೆಗಳು. ಧಾರಣ–ಧ್ಯಾನ–ಸಮಾಧಿಗಳು ಅಂತರಂಗದ ಯೋಗಸಾಧನೆಗಳು. ಯಮ–ನಿಯಮದ ಪರಿಪಾಲನೆ ಶಿವಯೋಗದ ಭಕ್ತಸ್ಥಲದಲ್ಲಿ; ಆಸನ ಪ್ರಾಣಾಯಾಮದ ನಿಯಮ ಪಾಲನೆ ಮಹೇಶ್ವರ ಸ್ಥಲದಲ್ಲೂ; ಪ್ರತ್ಯಾಹಾರ ಪ್ರಸಾದಿ ಸ್ಥಲದಲ್ಲೂ; ಧ್ಯಾನ–ಧಾರಣ ಪ್ರಾಣಲಿಂಗೀ ಸ್ಥಲದಲ್ಲೂ; ಸಮಾಧಿ ಐಕ್ಯಸ್ಥಲದಲ್ಲೂ ಶಿವಯೋಗಿಯ ಆಚರಣೆಯಲ್ಲಿ ಬರುತ್ತವೆ. ಲಿಂಗಾಂಗ ಸಾಮರಸ್ಯವನ್ನು ಸಾಧಿಸಲು ಶಿವಯೋಗಿಗಳು ಸಾಧಿಸಿದ ಯೋಗ ಶಿವಯೋಗ. ಹಠ–ಲಯ–ಮಂತ್ರ–ರಾಜ ಯೋಗಗಳು, ಶರೀರ–ಪ್ರಾಣ–ಮನ–ಬುದ್ಧಿಗಳನ್ನು ಶುದ್ಧೀಕರಿಸಿ ಅವುಗಳ ವಿಕಾಸಕ್ಕೆ ಕಾರಣವಾದರೆ, ಶಿವಯೋಗ ಎಲ್ಲಾ ಶಕ್ತಿಗಳನ್ನು

ವಿಕಾಸಗೊಳಿಸಿ, ಲಿಂಗಾಂಗ ಸಾಮರಸ್ಯಕ್ಕೆ ಕಾರಣವಾಗುತ್ತದೆ. ಶರೀರ-ಇಂದ್ರಿಯ-ಮನ-ಪ್ರಾಣ-ಬುದ್ಧಿಗಳನ್ನು ಶಿವಾತ್ಮಕವಾಗಿ ರೂಪಾಂತರಗೊಳಿಸುವುದೇ ಶಿವಯೋಗ. ಮಂತ್ರ-ಹಠ-ಲಯ-ರಾಜಯೋಗಗಳು ಎಲ್ಲರಿಗೂ ಸುಲಭ ಸಾಧ್ಯವಲ್ಲ. ಅನೇಕ ಸಾಧಕರು ದಿಕ್ಕುತಪ್ಪಿದ ಉದಾರಣೆಗಳಿವೆ. ಸಿದ್ಧಾಂತ ಶಿಖಾಮಣಿ ಬೋಧಿಸುವ ಶಿವಯೋಗದಲ್ಲಿ ಕಠಿಣವಾದ ಆಚರಣೆಗಳಿಲ್ಲ. ಎಲ್ಲರೂ ಸುಲಭವಾಗಿ ಆಚರಿಸಹುದಾದ ಸರಳ-ಸುಲಭ ಶಿವಯೋಗ. ದೇಹಕ್ಕೆ ಸ್ಥಿರತೆ ನೀಡುವ ಆಸನ ; ವಾಯುವಿಗೆ ಸ್ಥಿರತೆ ನೀಡುವ, ಪ್ರಾಣಾಯಾಮ, ಇವು ಇಷ್ಟಲಿಂಗದ ದೃಷ್ಟಿಯೊಗದಿಂದಲೇ ಸಂಭವಿಸುತ್ತವೆ. ಇಂದ್ರಿಯಗಳ ಬಯಕೆಗಳನ್ನು ಹಿಂದಿರುಗಿಸುವ ಪ್ರತ್ಯಾಹಾರವು ಪ್ರಸಾದಿ ಸ್ಥಲದಲ್ಲೇ ಅನುಭವಕ್ಕೆ ಬರುತ್ತದೆ. ಇಂದ್ರಿಯಗಳ ವಿಷಯಗಳನ್ನು ಪದಾರ್ಥ ರೂಪದಿಂದ ಗ್ರಹಿಸದೇ ; ಪ್ರಸಾದ ರೂಪದಿಂದ ಗ್ರಹಿಸುವ ಕಾರಣ ಪ್ರತ್ಯಾಹಾರವನ್ನು ಪ್ರತ್ಯೇಕವಾಗಿ ಆಚರಿಸುವ ಅಗತ್ಯವಿಲ್ಲ. ಧಾರಣ-ಧ್ಯಾನ-ಸಮಾಧಿ ಷಟ್‌ಚಕ್ರ ಮೂಲಾಧಾರ (ಮಲಸ್ಥಾನ) ಸ್ವಾಧಿಷ್ಠಾನ (ಜಲಸ್ಥಾನ) ಮಣಿಪುರ (ಅಗ್ನಿಸ್ಥಾನ) ಅನಾಹತ (ವಾಯುಸ್ಥಾನ) ವಿಶುದ್ಧಿ(ಶಬ್ದ) ಆಜ್ಞಾ(ಮನಸ್ಸು) ಕುಂಡಲಿನಿ ಶಕ್ತಿಯ ಜಾಗೃತ ಸಾಧನೆಯ ಅಂಶಗಳು. ಇಷ್ಟಲಿಂಗ ಧಾರಣ ಪೂಜೆ, ಪ್ರಾಣಲಿಂಗ ಧ್ಯಾನ, ಭಾವಲಿಂಗ ಸಮಾಧಿಯಲ್ಲಿ ಸಾಧಕನಿಗೆ ಅನುಭವಕ್ಕೆ ಬರುತ್ತವೆ. ಭ್ರೂಮಧ್ಯದ ಮೇಲು ಭಾಗದಲ್ಲಿ ಬ್ರಹ್ಮರಂಧ್ರ, ಸಾವಿರಾರು ದಳದ ಕಮಲ, ಮಧ್ಯದಲ್ಲಿ ಚಂದ್ರ ಮಂಡಲ-ಕೈಲಾಸ ಮೂವತ್ತಾರು ತತ್ತ್ವಗಳಿಗೆ ಅತೀತವಾದ ಸ್ವಪ್ರಕಾಶ, ಹಂಸರೂಪಿ ಭಗವಂತನನ್ನು 'ಅವನೇ ನಾನು' (ಸೋಹಂ) ಎನ್ನುವ ಭಾವನೆಯಿಂದ ಧ್ಯಾನಿಸಬೇಕು. ಶಿವ ಜೀವೈಕ್ಯ ಸಿದ್ಧಿಯೇ ಶಿವಯೋಗದ ಸಮಾಧಿ. ಹೀಗೆ ಸಿದ್ಧಾಂತ ಶಿಖಾಮಣಿಯಲ್ಲಿ ವೀರಶೈವ ಸಿದ್ಧಾಂತದ ಸಮಗ್ರ ಸ್ವರೂಪ ಹಾಗೂ ಅದರ ಪ್ರಯೋಗಾತ್ಮಕ ಶಿವಯೋಗದ ಸಮಗ್ರದರ್ಶನವನ್ನು ಕಾಣಬಹುದಾಗಿದೆ.

ಇದರಲ್ಲಿ ವೀರಶೈವ ಸಿದ್ಧಾಂತ ವಿಜ್ಞಾನವಾದರೆ ; ಶಿವಯೋಗದ ಪ್ರಯೋಗ – ಉಪಯೋಗ ಮನೋವಿಜ್ಞಾನವಾಗಿದೆ. Science and applied Science ಎಂದು ಹೇಳಬಹುದು. ಇಲ್ಲಿಯ ಶಿವಯೋಗ ಸಾಧನೆ ಯೋಗ ವಿಜ್ಞಾನದ ಒಂದು ಮಹಾಪ್ರಯೋಗ ಶಾಲೆಯಂತಿದೆ.

■■

## ಸೂಫಿ ಮತ್ತು ಶರಣರ ಅನುಭಾವ ಪಥ

ಅನುಭಾವ ಎಂದರೇನು?

"ಆನು ನೀನೆಂಬುದು ತಾನಿಲ್ಲ
ತಾನರಿದ ಬಳಿಕ ಮತ್ತೇನು ಇಲ್ಲ! ಇಲ್ಲ!
ಇಲ್ಲದ ಇಲ್ಲವೆಯೆಲ್ಲಿಂದ ಬಪ್ಪುದೋ?
ಅನುವನರಿದು ತನುವ ಮರೆದ
ಭಾವರಹಿತ ಗುಹೇಶ್ವರ"

ಇದು ಅಲ್ಲಮ ಪ್ರಭುವಿನ ಅನುಭಾವಕ್ಕೆ ಬರೆದ ಸುಂದರ ಭಾಷ್ಯವಾಗಿದೆ. ಇಲ್ಲಿ ತನುವ ಮರೆದು ಭಾವರಹಿತನಾದ ಸ್ಥಿತಿಯನ್ನು ಅಲ್ಲಮ ತಿಳಿಸುತ್ತಾನೆ. ಅಲ್ಲದೆ ದ್ವೈತದ ಮುಖ್ಯ ಸ್ವರೂಪವಾದ ಆನು–ನೀನು ಎಂಬ ಸಂಬಂಧವನ್ನೇ ನಿರಾಕರಿಸುತ್ತಾನೆ. "ನನ್ನ ಮತ್ತು ಅನುಭಾವಕ್ಕೇ ಕಾರಣ ವಾಗುವ ವಸ್ತುವಿನ ನಡುವೆ ಯಾವ ಮಧ್ಯಸ್ಥಿಕೆಯೂ ಬೇಕಾಗಿಲ್ಲ, ನಾನು ಮತ್ತು ಅದು ಮಾತ್ರ ನೇರವಾಗಿ ಒಂದಾಗುವುದು ಅನುಭಾವ. ಅಲ್ಲಿ ಆಗುವಿಕೆ ಮಾತ್ರ ಇರುತ್ತದೆ" ಎಂದು "ನೀನೆಂಬಲ್ಲಿ ನಾನು, ನಾನೆಂಬಲ್ಲಿ ನೀನು ನೀನೆಂಬುದಕ್ಕೆ ತೆರಹಿಲ್ಲ" ಎಂದು ಸ್ಪಷ್ಟಪಡಿಸುತ್ತಾನೆ. "ಅನುಭಾವ" ಸಾಧನೆಯ ಸಿದ್ಧಿ ಶಿಖರದಲ್ಲಿ ಅರಿವಿಗೆ ಬರುವ ಒಂದು ಮಾನಸಿಕ ಸ್ಥಿತಿ. ಇದು ಶಿವ–ಜೀವರ ಸಂಬಂಧ ಇಷ್ಟ ದೈವದೊಂದಿಗೆ ನಡೆಸುವ ಸುಖ ಸಂಭಾಷಣೆ. ಅನುಭಾವವೆಂಬುದು ಅತೀಂದ್ರಿಯ ಅನುಭವ, ಆತ್ಮವಿದ್ಯೆ ಮತ್ತು ಅಂತರಂಗದ ರತ್ನ.

ಅನುಭಾವವೆಂಬುದು ಶಿಶು ಕಂಡ ಕನಸು. ಅನುಭಾವದ ವಿಚಾರ ಸಂಸ್ಕೃತದ ಅಲಂಕಾರ ಗ್ರಂಥಗಳಲ್ಲೂ ಬರುತ್ತದೆ. ಭಾವ–ವಿಭಾವ–ಅನುಭಾವ ಎಂದು. ಆದರೆ ಇವುಗಳಿಗಿಂತ ವಿಭಿನ್ನವಾದ ಒಂದು ಅರ್ಥವಿದೆ. ಅದು ಆಧ್ಯಾತ್ಮಿಕ ವಿಷಯಕ್ಕೇ ಸಂಬಂಧಿಸಿದ್ದು, ಅರಿವಿನಿಂದ, ಆಚರಣೆಯಿಂದ ಪಡೆದ ಅನುಭವವೇ ಅನುಭಾವ.

"Mysticism is the immediate feeling of the unity of the self with God"

"It is Relation of the Soul to the God"

–ಎನ್ನುವ ಆಂಗ್ಲ ಉಕ್ತಿಯು ಅನುಭಾವದ ಅರ್ಥವನ್ನೇ ಧ್ವನಿಸುತ್ತದೆ.

ಅನುಭಾವ ಎಂಬುದು ಎಲ್ಲ ಧರ್ಮಗಳ ಕೇಂದ್ರಸ್ಥಾನ. ಇಸ್ಲಾಂ ಧರ್ಮದಲ್ಲಿ ''ಸೂಫೀ''; ಬೌದ್ಧ ಧರ್ಮದಲ್ಲಿ ''ಝುನ್''; ವೇದಾಂತದ– ''ಆತ್ಮವಿದ್ಯೆ''; ವೀರಶೈವ ಧರ್ಮದಲ್ಲಿ ''ಶರಣ''; ಮಾಧ್ವ ಸಂಪ್ರದಾಯ ದಲ್ಲಿ ''ದಾಸ'';– ಹೀಗೆ ವಿವಿಧ ಧರ್ಮಗಳ ಹಿನ್ನೆಲೆಯಲ್ಲಿ ಅನುಭಾವ ಮೂಡಿಬರುತ್ತದೆ. ಸಾಧಕ ದೇವರನ್ನು ತಂದೆಯ ರೂಪದಲ್ಲೂ, ತಾಯಿಯ ರೂಪದಲ್ಲೂ, ಗಂಡನ ರೂಪದಲ್ಲೂ, ಹೆಂಡತಿಯ ರೂಪದಲ್ಲೂ, ಗೆಳೆಯನ ರೂಪದಲ್ಲೂ ಹಾಗೂ ಮಗುವಿನ ರೂಪದಲ್ಲೂ ಹೀಗೆ ವಿವಿಧ ಭಾವನೆಗಳಿಂದ ದೇವರನ್ನು ಆರಾಧಿಸುತ್ತಾನೆ. ಹೀಗೆ ಇದರಿಂದ ಲಭ್ಯವಾಗುವ ಅನುಭಾವ ಬೇರೆ ಬೇರೆಯಾಗಿರುತ್ತದೆ. ದೇವರನ್ನು ಸೃಷ್ಟಿಕರ್ತನೆಂದು ನಂಬುವ ಅನುಭಾವ ಬೇರೆ, ದೇವರು ಸೃಷ್ಟಿಕರ್ತನಲ್ಲ ಎಂದು ನಂಬುವ ಅನುಭಾವ ಬೇರೆ.

ದೇವರು ವ್ಯಕ್ತಿಯಲ್ಲ–ವಸ್ತುವೂ ಅಲ್ಲ, ಅದು ಆಗಬೇಕಾದ ಒಂದು ಅನುಭವ ಮಾತ್ರ ಎಂದು ನಂಬುವ ಅನುಭಾವ ಬೇರೆ. ಈ ದೃಷ್ಟಿಯಿಂದ ಕ್ರೈಸ್ತ–ಬೌದ್ಧ–ಜೈನ–ವೈದಿಕ–ವೀರಶೈವ ಹಾಗೂ ಇಸ್ಲಾಂ ಧರ್ಮಗಳ ಹಿನ್ನೆಲೆಯಲ್ಲಿ ಅನುಭಾವದ ಪರಿಕಲ್ಪನೆಗಳು ಬೇರೆಬೇರೆ ಆಗುತ್ತವೆ. ಒಂದು ಮಾತು ಮಾತ್ರ ನಿಜ. ಜಗತ್ತಿನಲ್ಲಿ ಅನುಭಾವಿಗಳು ಯಾವುದೇ ಒಂದು ಧರ್ಮದ ಹಿನ್ನೆಲೆಯಲ್ಲಿ ಬಂದರೂ ಧರ್ಮ ಹೇಳುವ ಕಂದಾಚಾರಗಳಿಗೆ ಸಂಪ್ರದಾಯಗಳಿಗೆ ಅವರು ಎಂದೂ ತಲೆ ಬಾಗುವುದಿಲ್ಲ. ಧರ್ಮದ ಲಕ್ಷ್ಮಣರೇಖೆಯನ್ನು ದಾಟಿ ಅವರು ಜಗತ್ತಿಗೆ ಅನುಭಾವದ ವಿನೂತನ ವಿಚಾರಗಳನ್ನು ಕೊಡುತ್ತಾರೆ. ಆದರೂ, ಧಾರ್ಮಿಕ ಮೂಲಭೂತವಾದಿಗಳು ಅವರನ್ನು ಧರ್ಮವಿರೋಧಿಗಳೆಂದು ಆರೋಪಿಸುತ್ತಾ ಬಂದಿದ್ದಾರೆ. ಅನುಭಾವಿಗಳನ್ನು ಧರ್ಮದ್ರೋಹಿಗಳು ಎಂದು ಕರೆದವರೂ ಉಂಟು. ಅನುಭಾವ ಅರಮನೆ–ಮಠಗಳ ಹಂಗಿನಲ್ಲಿ ಎಂದೂ ವಿಕಾಸವಾಗುವುದಿಲ್ಲ.

ಅದು ಸ್ವತಂತ್ರವಾಗಿ ಸ್ವಚ್ಛಂದವಾಗಿ ವಿಕಾಸವಾಗುವ ಮಾನಸಿಕ ಸ್ಥಿತಿ. ಅನುಭಾವಿಗಳು ಕ್ರಾಂತಿಕಾರರು. ಧರ್ಮ ಅಂಧ ಸಂಪ್ರದಾಯಗಳ ಅನುಕರಣೆಯಾದಾಗ, ಕರ್ಮಠವಾದಾಗ ಅನುಭಾವ ಅದರಿಂದ ಬೇರ್ಪಡೆ ಯಾಗುತ್ತದೆ. ಮೊದ ಮೊದಲು ಅನುಭಾವಿಗಳು ಧರ್ಮದ ಚೌಕಟ್ಟಿನಲ್ಲಿ ಸಾಗಿ ನಂತರ ಅದನ್ನು ಮೀರಿ ನಿಲ್ಲುತ್ತಾರೆ. ಧರ್ಮವೆಂಬುದು ಮೊದಲು ಜ್ಞಾನಿಯೊಬ್ಬನಲ್ಲಿ ಹೊಳೆದು–ಅನುಭಾವಿಯಲ್ಲಿ ಬೆಳೆದು– ಪುರೋಹಿತನ ಕೈಯಲ್ಲಿ ಅವಸಾನ ಹೊಂದುತ್ತದೆಯೆಂದು ಹೇಳುತ್ತಾರೆ.

ಅನುಭಾವಿ, ಜೀವನಾನುಭವದ ಬೇಲದ ಹಣ್ಣನ್ನು ಅನಾಮತ್ತಾಗಿ ನುಂಗಿ ಅದರೊಳಗಿನ ಅನುಭಾವದ ತಿರುಳನ್ನು ಹೀರಿ, ಶಾಸ್ತ್ರ ವಿಚಾರಗಳ ಕರಟವನ್ನು ಇಡಿಯಾಗಿ ಲದ್ದಿ ಹಾಕುವುದು, ಅನುಭಾವಿಗಳೆಂಬ ಮದಗಜಗಳ ಸ್ವಭಾವವೆಂದು ಪ್ರಾಜ್ಞರು ಹೇಳುವ ಮಾತು ವಾಸ್ತವಿಕ ಸತ್ಯವಾಗಿದೆ. ಅನುಭಾವಿಗಳು ಸತ್ಯಪಥದಲ್ಲಿ ಸಾಗುವ ಯಾತ್ರಿಕರು.

ಕಾಶ್ಮೀರದ ಪ್ರಸಿದ್ಧ ಅನುಭಾವಿ ಲಲ್ಲೇಶ್ವರಿ ಹೇಳುತ್ತಾಳೆ–

"ಗುರು ನನಗೆ ನೀಡಿದ ಒಂದೇ ಮಾತು
ಹೊರಗಿನ ನೋಟವ ಒಳಗಿಡು ಎಂದು
ಗುರು ಅದು ನುಡಿಯೆ ದೇವನದೆಂದು
ಕುಣಿಯತೊಡಗಿದ ಬತ್ತಲಾಗಿಂದು"

ಅಂತರಂಗದ ಅರಿವಿನ ಅನ್ವೇಷಣೆಯಲ್ಲಿ, ದೈವದ ನಿಬ್ಬೆರಗಿನಲ್ಲಿ ತನುವ ಮರೆದು ಬತ್ತಲಾಗುವ ಮನಸ್ಸಿನ ಸ್ಥಿತಿಯೇ ಅನುಭಾವ ಎಂಬುದನ್ನು ಲಲ್‌ವಾಕ್ (ಲಲ್ಲೇಶ್ವರಿ) ಸ್ಪಷ್ಟಪಡಿಸಿದೆ.

ಬೆಳಕು ಹುಟ್ಟುವ, ಬೆಳಕು ಮುಳುಗುವ ದಿಕ್ಕುಗಳನ್ನು ಆಧರಿಸಿ ಪೂರ್ವಗೋಳಾರ್ಧ, ಪಶ್ಚಿಮಗೋಳಾರ್ಧದ ಸಂಸ್ಕೃತಿಗಳು ಅರಳಿದ್ದರೂ ಭೂಮಿ ಗುಂಡಾಗಿರುವುದು ನಮ್ಮ ಭಾಗ್ಯ. ಅದನ್ನು ಪ್ರದಕ್ಷಿಣೆ ಹಾಕುತ್ತ ಹೋದರೆ ಪೂರ್ವ ಮುಗಿಯುವುದೇ ಪಶ್ಚಿಮದಲ್ಲಿ, ಪಶ್ಚಿಮ ಪ್ರಾರಂಭ ವಾಗುವುದೇ ಪೂರ್ವದಲ್ಲಿ–ಎಂಬ ಭೌಗೋಳಿಕ ಸತ್ಯದ ದರ್ಶನವಾಗುತ್ತದೆ (Geographical Truth). ಮಾನವ ಕುಲಗಳಲ್ಲಿ ಅಷ್ಟೇ ಏಕೆ ಸಕಲ ಚರಾಚರ

ವಸ್ತುಗಳ ಸೃಷ್ಟಿಯೆಲ್ಲ, 'ಮೂಲಭೂತವಾಗಿ ಒಂದೇ. ಎಲ್ಲವೂ ದಿವ್ಯಶಕ್ತಿಯ ಅನಂತರೂಪಗಳು ಎಂಬ ಅರಿವಿನ ಸೂರ್ಯೋದಯವಾಗುತ್ತದೆ. ಈ ಅರಿವಿನ ಸೂರ್ಯೋದಯವೇ ಅನುಭಾವ. ಅನುಭಾವ ಸಾಧನೆಯ ಹಾದಿಯಲ್ಲಿ ಸಿಗುವ ಫಲ. ಅನುಭವಿಸದೇ ಅದನ್ನು ಬಣ್ಣಿಸಲು ಬರುವುದಿಲ್ಲ. ಅದು ಮೂಗನು ತಿಂದ ಸಕ್ಕರೆ–ಶಿಶು ಕಂಡ ಕನಸು.

ಅಲ್ಲಮ ಪ್ರಭು ಹೇಳುವಂತೆ–

"ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ
ಬೆಳೆದು, ಬಯಲು, ಬಯಲಾಗಿ, ಬಯಲಾಯಿತ್ತಯ್ಯ.
ನಿಮ್ಮ ಪೂಜಿಸಿದವರು ಮುನ್ನವೆ ಬಯಲಾದರು
ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರ.
ಸಕುವನ್ನ ಬಯಲಿನಲ್ಲಿ ಕಾಣುವುದೇ
ಅನುಭಾವ ದರ್ಶನ"

ಈ ಹಿನ್ನೆಲೆಯಲ್ಲಿ ಇಸ್ಲಾಂ ಧರ್ಮದ ಸೂಫಿಗಳ –ವೀರಶೈವ ಧರ್ಮದ ಶರಣರ ಅನುಭಾವ ಪಥವನ್ನು ಸ್ಥೂಲವಾಗಿ ಪರಿಚಯಿಸುವುದೇ ಈ ಲೇಖನದ ಆಶಯ.

ಸೂಫಿಗಳ ಅನುಭಾವ ಪಥ :

ಮಾನವನ ಆತ್ಮದ ಹಸಿವೇ ಪ್ರೇಮ. "ನಶ್ವರವಾದ ದೇಹ ಅಮರತ್ವವನ್ನು ಸಾಧಿಸುವುದು ಪ್ರೇಮದ ಮೂಲಕ" ಎಂದು ಸಾಕ್ರೆಟಿಸ್ ಹೇಳುತ್ತಾನೆ. ಜಗತ್ತಿನ ಅನುಭಾವ ಚರಿತ್ರೆಯಲ್ಲಿ ಪ್ರೇಮಭಾವನೆಯನ್ನು ದೈವೀಕರಿಸಿ ಭಗವಂತನನ್ನು "ಸ್ವ"ರೂಪದ ಭಾವನೆಗಳಿಂದ ಉಪಾಸನೆ ಮಾಡಿದವರು ಸೂಫಿಗಳು. ದೇವರನ್ನು ಅರಿಯಲು ಹಿಂದೂ ಸಂಪ್ರದಾಯದ ವೇದಾಂತಕ್ಕೆ ಯಾವ ಸ್ಥಾನವಿದೆಯೋ ಇಸ್ಲಾಂ ಧರ್ಮದಲ್ಲಿ ಆ ಸ್ಥಾನ ಸೂಫೀ ಸಿದ್ಧಾಂತಕ್ಕಿದೆ. "ಇಸ್ಲಾಂ ಧರ್ಮದ ಆಧ್ಯಾತ್ಮಿಕ ತತ್ತ್ವವೇ ಸೂಫಿ ತತ್ತ್ವ ಅಥವಾ ತಸವ್ವೂಫ್"

ಯಾರ ಮನಸ್ಸು ಭಗವಂತನ ವಿಷಯದಲ್ಲಿ "ಸಾಫ್" ಎಂದರೆ ಸ್ವಚ್ಛ, ತಿಳಿ, ನಿರ್ಮಲವಾಗಿರುತ್ತದೆಯೋ ಅವರೇ "ಸೂಫಿಗಳು".

ಸೂಫೀ ಎನ್ನುವ ಶಬ್ದಕ್ಕೆ ಹಲವು ಅರ್ಥಗಳಿದ್ದರೂ ಭಗವಂತನಲ್ಲಿ

ಪರಿಶುದ್ಧ ಮನಸ್ಸುಳ್ಳ ಭಕ್ತನನ್ನು "ಸೂಫೀ" ಎಂದು ಕರೆಯುತ್ತಾರೆ. ಇಸ್ಲಾಂ ಧರ್ಮದ ಅನುಭಾವಿಗಳ ಸಮೂಹವನ್ನು "ಸೂಫೀ" ಎನ್ನುತ್ತಾರೆ.

ಭಾರತೀಯರ ಯೋಗ, ಚೀನಾದ ತಾವೋ ಪಂಥ, ಜಪಾನಿನ ಝೆನ್ ಶರಣರ ಅನುಭಾವ, ಟಿಬೇಟ್ಟಿನ ತಾಂತ್ರಿಕ ಪಂಥಗಳಲ್ಲಿ ಇದರ ಸಾಮ್ಯ ಗಳನ್ನು ಗುರುತಿಸಬಹುದಾಗಿದೆ.

ಸೂಫಿಗಳು ಭಗವಂತನನ್ನು ಸತಿ ಸ್ವರೂಪದಲ್ಲಿ ಆರಾಧಿಸುತ್ತಾರೆ. ಭಗವಂತ ಪ್ರಿಯತಮೆಯಾಗಿ, ಭಕ್ತ ಪ್ರಿಯತಮನಾಗಿ, ಭಾವಲೋಕದಲ್ಲಿ ವಿಹರಿಸುತ್ತಾರೆ. ಸೂಫೀಧರ್ಮ ಪ್ರೇಮಧರ್ಮ. ಈ ಪ್ರೇಮಗಂಗೆಯ ಗಂಗೋತ್ರಿ ಅರಬ್‌ಸ್ಥಾನದ ಮರುಭೂಮಿ. ಸೂಫೀ ಧರ್ಮ ಇಸ್ಲಾಂ ಧರ್ಮದ ಅಂಗವಾಗಿದ್ದು ಅದರಷ್ಟೇ ಪ್ರಾಚೀನವೆಂಬುದು ವಿದ್ವಾಂಸರ ಮತ. ಅರಬ್ ದೇಶದಲ್ಲಿ ಪ್ರೇಮದ ಗಂಗೆಯನ್ನು ಹರಿಸಿದ ಪ್ರೇಮಧರ್ಮ ಸೂಫೀ. 'ಚೆಲವೇ ದೇವರು, ಒಲವೇ ಪೂಜೆ' ಎಂಬುದನ್ನು ತಮ್ಮ ಜೀವನದಲ್ಲಿ ಹಾಡಿ ಅದರಂತೆ ನಡೆದ ಸೂಫೀ ಸಂತರು ವಿಶ್ವಪ್ರೇಮಿಗಳು. ಮಾನವ ಪ್ರೇಮ–ದೈವೀ ಪ್ರೇಮದ ಸೋಪಾನವೆಂದು ಸಾರಿದ ರಸಋಷಿಗಳು.

ಕ್ರಿ.ಶ. ೭ನೇ ಶತಮಾನದಲ್ಲಿ ಅರಬ್ ದೇಶದಲ್ಲಿ ಉದಯಿಸಿದ ಸೂಫೀ ಮತ ಪುನಃ ೮ ನೇ ಶತಮಾನದಲ್ಲಿ ಪುನರುಜ್ಜೀವನ (Renaissance) ಪಡೆಯಿತು. ಅರೇಬಿಯಾ – ಇರಾನ್ – ಇರಾಕ್ – ಸಿರಿಯಾ – ಈಜಿಪ್ಟ್ – "ತುರ್ಕಿಸ್ತಾನ ದೇಶಗಳ ಮೂಲಕ ಭಾರತಕ್ಕೂ ಹಬ್ಬಿ ಹರಡಿತು. ಜಗತ್ತಿನಾದ್ಯಂತ ಸೂಫೀಗಳ ಸಂಖ್ಯೆ ವಿಪುಲವಾಗಿ ಬೆಳೆದುಬಂತು. ಸೂಫೀಗಳು ದೈವಭಕ್ತರಾಗಿ ಸರಳ ಹಾಗೂ ಪ್ರಾಮಾಣಿಕ ಜೀವನ ನಡೆಸುತ್ತಿದ್ದರು. ಆ ಕಾಲದಲ್ಲಿ ಖಲೀಫ್‌ರ ಹಾಗೂ ಶ್ರೀಮಂತ ಅಮೀರರ ಭೋಗ ಜೀವನ ಆಡಂಬರ ಅಟ್ಟಹಾಸ ಇವರಿಗೆ ಸರಿಕಾಣುತ್ತಿರಲಿಲ್ಲ. ಸಮಾಜದಲ್ಲಿ ವಿರೋಧಗಳನ್ನು ಎದುರಿಸುತ್ತ ಇಂತಹ ವ್ಯಕ್ತಿಗಳು ತಿದ್ದಲು ಸಾಕಷ್ಟು ಪರಿಶ್ರಮ ಪಡುತ್ತಿದ್ದರು. ೮ ನೇ ಶತಮಾನದ ಸೂಫಿಗಳಲ್ಲಿ ಜಾನ್‌ನೂನ್, ಮಿಶ್ರ, ಹಸನ್‌ಬಿಸ್ರಿ, ರಾಭಿಯಾ ಬಿಸ್ರಿ, ಮಲಿಕ್‌ದೀನಾರ್, ಇಮಾಂ–ಎ–ಅಮೀ–ಅನಿಫರು– ಇವರು ಪ್ರಮುಖರು. ಇವರ

ತರುವಾಯ ಬಂದ ಸೂಫಿಗಳು ೧೨ ರಿಂದ ೧೪ನೇ ಶತಮಾನಕ್ಕೆ ಸೇರಿದವರು. ಈ ಕಾಲದ ಸೂಫಿಗಳು ಜೀವ–ಜಗತ್ತು–ಈಶ್ವರ–ವಿಧಿ–ಕರ್ಮ–ಆತ್ಮ–ಸ್ವರ್ಗ ಇವುಗಳ ರಹಸ್ಯವನ್ನು ಕಂಡು ಹಿಡಿಯಲು ಪ್ರಯತ್ನಿಸಿದರು. ಈ ಕಾಲದ ಸೂಫಿಗಳನ್ನು ದಾರ್ಶನಿಕ ಸೂಫಿಗಳೆಂದು ಕರೆಯುತ್ತಾರೆ. ಇವರಲ್ಲಿ ಮುಹಮ್ಮದ್ ಇಬ್ನಿ ಅರಿಬಿ–ಇಮಾವರ್, ಗಜ್ಜಾಲಿ, ಪರಿದುದ್ದೀನ್ ಅತ್ತಾರ್, ಜಲಾಲುದ್ದೀನ್, ರೂಮಿ, ಜಾಮಿ, ನಿಜಾಮಿ ಹಸನ್‌ಬಿನ್, ಫಜಲ್, ಅಬ್ದುಲ್‌ಖಾದರ್ ಉಮರ್‌ಖಯ್ಯಾಂ ಇತ್ಯಾದಿ. ಇವರನ್ನು ''ದ್ವಿತೀಯ ಘಟ್ಟದ ಸೂಫಿ''ಗಳೆಂದು ಗುರ್ತಿಸುತ್ತಾರೆ. ಸೂಫಿಗಳ ಸಂಖ್ಯೆ ಅಧಿಕವಾಗಿದೆ. ಇವರು ಜಗತ್ತಿನಾದ್ಯಂತ ದೇಶ–ಭಾಷೆ–ಕಾಲಗಳನ್ನು ಮೀರಿ ಮಾನವ ಜನಾಂಗಕ್ಕೇ ಮಾರ್ಗದರ್ಶನ ಮಾಡಿದ್ದಾರೆ. ಅವರ ವಿಚಾರ ಎಲ್ಲ ಕಾಲ–ದೇಶ–ಜನಾಂಗಕ್ಕೆ ಪ್ರಸ್ತುತವೆನಿಸುತ್ತದೆ.

ತತ್ತ್ವದರ್ಶನ :

ಸೂಫೀ ತತ್ತ್ವ ಅತ್ಯಂತ ಸರಳವಾದುದು. ಒಬ್ಬ ಸೂಫೀ ದೈವ ಪ್ರೇಮದ ಹಂತವನ್ನು ತಲುಪಲು (ಅನಲ್‌ಹಕ್ ಸ್ಥಿತಿ=ನಾನೇ ದೇವರು) ಮುಖ್ಯವಾಗಿ ನಾಲ್ಕು ಅವಸ್ಥೆಗಳನ್ನು ತಿಳಿಸುತ್ತಾರೆ. ಸಾಧಕನು ಈ ಅವಸ್ಥೆಗಳನ್ನು ದಾಟಿದಾಗಲೇ ಅನಲ್‌ಹಕ್ ಸ್ಥಿತಿ ಹೊಂದುತ್ತಾನೆ ಎಂದು ಹೇಳುತ್ತಾರೆ. ಈ ಧರ್ಮದಲ್ಲಿ ನಾಲ್ಕು ಆಚಾರಗಳೂ ಇವೆ.

೧. ನಮಾಜ್.. (ಪ್ರಾರ್ಥನೆ) ೨. ಝುಕಾತ್ (ಧ್ಯಾನ) ೩. ರೋಜಾ (ದೈವಾಜ್ಞೆ) ೪. ಹಜ್.. (ತೀರ್ಥಯಾತ್ರೆ)

ಆ ನಾಲ್ಕು ಹಂತಗಳು :–

೧. ಶರೀಯತ್ – ಅಂದರೆ, ಇಸ್ಲಾಮಿ ಕಾನೂನುಗಳ ಪಾಲನೆ

೨. ತರೀಕತ್ – ಅಂದರೆ, ಇಂದ್ರಿಯ ನಿಗ್ರಹ, ಆತ್ಮಶುದ್ಧಿ

೩. ಮಾರೀಫತ್ – ಅಂದರೆ, ಆಧ್ಯಾತ್ಮಿಕ ಜ್ಞಾನ.

೪. ಹಕೀಕತ್ – ಅಂದರೆ, ಪರಮಾನುಭೂತಿ.

ಈ ಹಂತಗಳನ್ನು ದಾಟಿ ಸಾಧಕ ಅನಲ್‌ಹಕ್ ಸ್ಥಿತಿಗೆ ತಲುಪುತ್ತಾನೆ. ಇದು ಅನುಭಾವದ ತುತ್ತತುದಿ ಎಂದು ಹೇಳುತ್ತಾರೆ.

ಸೂಫಿಗಳು ಪ್ರಿಯತಮೆಯನ್ನು ''ಸಾಕಿ'' ಎಂದೂ, ಭಗವಂತನಲ್ಲಿರುವ ಪ್ರೇಮವನ್ನು ''ಇಕೀಹಕೀತ್'' ಎಂದು ಕರೆಯುತ್ತಾರೆ. ಪ್ರಿಯತಮೆಯ (ದೇವರ) ವಿರಹದಲ್ಲಿ ಪ್ರತಿಯೊಬ್ಬ ಸೂಫಿಯ ವಿರಹತಾಪವನ್ನು ಅನುಭವಿಸುತ್ತಾರೆ. ಸೂಫಿಗಳಲ್ಲಿ ಸ್ತ್ರೀ-ಪುರುಷರಿಬ್ಬರಿಗೂ ಸಮಾನ ಸ್ಥಾನ. ಇವರಲ್ಲಿ ಹೆಣ್ಣಾಗಲೀ, ಗಂಡಾಗಲೀ ಸಚ್ಚಾರಿತ್ರ್ಯ, ತ್ಯಾಗಮನೋಭಾವನೆ, ಇಂದ್ರಿಯ ನಿಗ್ರಹವುಳ್ಳ ಸಂತಾ ಯಾ ಸಂತಳು ಆದರ್ಶ ವ್ಯಕ್ತಿಗಳಾಗುತ್ತಾರೆ. ಹಜರತ್ ಮಹ್ಮದ್‌ದರು ಜ್ಞಾನದಲ್ಲಿ ೨ ವಿಧ ಎಂದು ಹೇಳುತ್ತಾರೆ.

೧. ಪುಸ್ತಕ ಜ್ಞಾನ ೨. ಆತ್ಮ ಜ್ಞಾನ

ಆತ್ಮ ಜ್ಞಾನವನ್ನು ಅವಲಂಬಿಸಿದವರು ಸೂಫಿಗಳು.

ಜನಾಂಗ :

ಸೂಫೀ ಸಂತರಲ್ಲಿ ಗೃಹಸ್ಥರೇ ಹೆಚ್ಚಾಗಿದ್ದರು. ಸನ್ಯಾಸ ಜೀವನ ಪ್ರಕೃತಿಗೆ ವಿರುದ್ಧವೆಂದು ಅವರ ನಂಬಿಕೆ. ಹೆಂಡತಿ-ಮಕ್ಕಳು-ಬಂಧು-ಬಳಗ-ಆಹಾರ ಇವು ಬದುಕಿನ ಅವಿಭಾಜ್ಯ ಅಂಗಗಳು. ನಿರಾಕರಿಸುವಂತಿಲ್ಲ. ಆದರೆ ಅತಿಯಾದ ವಿಲಾಸ ಜೀವನ ಖಂಡನೀಯವಾಗಿತ್ತು. ಸೂಫಿಗಳಲ್ಲಿ ಗೃಹಸ್ಥರಲ್ಲದವರ ಸಂಖ್ಯೆ ತೀರಾ ವಿರಳವೆಂದೇ ಹೇಳಬೇಕು. ಬಹುಪಾಲು ಸೂಫಿಗಳು ಗೃಹಸ್ಥರಾಗಿ, ಸರಳತೆ-ಪ್ರಾಮಾಣಿಕತೆ-ದೈವೀಶ್ರದ್ಧೆ ಹಾಗೂ ನೈಜ ನಡೆನುಡಿಗಳಿಂದ ಸಂತರಾಗಿ ಬಾಳಿದರು. ಸಂಸಾರ ಅವರ ಆಧ್ಯಾತ್ಮ ಜೀವನಕ್ಕೆ ಎಂದು ಅಡ್ಡಿಯಾಗಿರಲಿಲ್ಲ. ಸೂಫಿಗಳು ದೈವೀ ಪ್ರೇಮದಿಂದ ಜಗತ್ತನ್ನು ದೈವ ಸ್ವರೂಪದಲ್ಲಿಯೇ ಕಾಣುತ್ತಿದ್ದರು. ಇವರಿಗೆ ದೇಶ-ಭಾಷೆ-ಜಾತಿ-ಮತ-ಮೇಲು-ಕೀಳು ಎಂಬ ಕುಬ್ಜ ಕಲ್ಪನೆಗಳೇ ಬರುತ್ತಿರಲಿಲ್ಲ.

ಭಾರತ-ಸೂಫೀ ಸಂಬಂಧ :

ಭಾರತ ದೇಶಕ್ಕೂ - ಈ ಸೂಫೀಗಳಿಗೂ ನಿಕಟ ಸಂಬಂಧವಿದೆ. ಸೂಫಿಗಳ ತತ್ತ್ವವೂ ಹಿಂದೂಸ್ತಾನದ ಆಧ್ಯಾತ್ಮಿಕ ಇತಿಹಾಸದಲ್ಲಿ ಮುಖ್ಯ ಪಾತ್ರ ವಹಿಸಿರುವುದನ್ನು ಗುರುತಿಸಬಹುದಾಗಿದೆ. ನಮ್ಮ ದೇಶಕ್ಕೆ ಹಜರತ್ ಮೊಯಿನುದ್ದೀನ್ ಚಿಸ್ತಿ ಅವರು ಮೊಟ್ಟಮೊದಲಿಗೆ ಅರಬ ದೇಶದಿಂದ ಬಂದ ಸೂಫೀ ಎಂದು ಹೇಳುತ್ತಾರೆ. ಅನಂತರ ಶೇಖ್ಸ್ ಕುತುಬುದ್ದೀನ್, ಖಾಕಿ,

ಶೇಖ್‌ಬಾಬಾ, ಫರಿದುದ್ದೀನ್, ಖಾಜಾ ನಿಜಾಮುದ್ದೀನ್, ಆತಲಿಯಾ... ಮುಂತಾದವರೆಲ್ಲ ಭಾರತಕ್ಕೆ ಬಂದ ಸೂಫಿಗಳು. ಈ ಸೂಫೀ ಮತದ ಅನೇಕ ಶಾಖೆಗಳು ನಮ್ಮ ದೇಶದಲ್ಲಿ ಸ್ಥಾಪನೆಯಾದವು. ಅವುಗಳನ್ನು 'ಖಾನಕ್' ಅಥವಾ 'ಮಠ'ಗಳೆಂದು ಕರೆಯುತ್ತಾರೆ. ಮೊಗಲ್ ದೊರೆಗಳಲ್ಲಿ ಷಹಜಹಾನ್ ಚಕ್ರವರ್ತಿಯ ಪುತ್ರ ''ದಾರಾಶುಕೋ'' (೧೬ನೇ ಶತಮಾನ) ಸೂಫೀ ತತ್ತ್ವದಲ್ಲಿ ಅತ್ಯಂತ ನಿಷ್ಠಾವಂತನಾಗಿದ್ದ. ಈತನು ''ಸೂಫಿ ತತ್ತ್ವ'' ಮತ್ತು ''ಹಿಂದೂ ವೇದಾಂತವನ್ನು ಅಧ್ಯಯನ'' ಮಾಡಿದ್ದ. ರಾಮಾಯಣ, ಮಹಾಭಾರತ, ಭಗವದ್ಗೀತೆ, ಉಪನಿಷದ್‌ಗಳನ್ನು ಉರ್ದುಭಾಷೆಗೆ ಅನುವಾದ ಮಾಡಿಸಿದ. ''ಮಜಮ್-ಉಲ್-ಬಹರೈನ್'' ಅಂದರೆ ''ಎರಡು ಸಾಗರಗಳ ಸಂಗಮ'' ಸಂಗಮ ಸಮುದ್ರ ಎನ್ನುವ ತನ್ನ ಗ್ರಂಥದಲ್ಲಿ ಸೂಫೀ ಸಿದ್ಧಾಂತ ಹಾಗೂ ವೇದಾಂತಗಳ ಮೂಲತತ್ತ್ವಗಳನ್ನು ಪ್ರತಿಪಾದಿಸಿದ್ದಾನೆ. ಈತನು ಹಾಕಿಕೊಟ್ಟ ಮಾರ್ಗದಲ್ಲಿಯೇ ಸನ್ಯಾಸಿಗಳು (ಹಿಂದೂ) ಹಾಗೂ ಸೂಫಿಗಳು ಮಾನವ ಧರ್ಮದ ಬಗ್ಗೆ ಚರ್ಚೆ ನಡೆಸಿದರು. ದಿವ್ಯಗಾನಗಳನ್ನು ಹಾಡಿದರು. ಇದರ ಪರಿಣಾಮವಾಗಿ ಹಿಂದೂ ಭಕ್ತಿ ಪಂಥಗಳ ಮೇಲೆ ಸೂಫೀ ತತ್ತ್ವ ಗಾಢ ಪ್ರಭಾವವನ್ನು ಬೀರಿತು.

ದಯಾನಂದ ಸರಸ್ವತೀ, ಮೌಲಾನಾ ಖಾಸೀಂ, ಗುರುನಾನಖ್, ಕಬೀರ, ಖಾಜಾ ನಿಜಾಮ್ದೀನ್, ಗುಲಬರ್ಗಾದ ಖಾಜಾ ಖಂದೇನವಾಬ್, ಚಿಕ್ಕಮಗಳೂರು ಜಿಲ್ಲೆಯ ಬಾಬಾಬುಡನ್ ಇಂತಹ ಸಂತರು ಸೂಫೀ ತತ್ತ್ವದ ಪ್ರಭಾವದಿಂದ ಹಿಂದೂ-ಮುಸ್ಲಿಂರ ಐಕ್ಯತೆಗಾಗಿ, ಜನಜೀವನದ ಶಾಂತಿ-ನೆಮ್ಮದಿಗಾಗಿ, ದುಡಿದು ಅಮರರಾದರು. ಅವರ ಪವಿತ್ರ ಜೀವನಕ್ಕೆ ಎಲ್ಲರ ಹೃದಯ ಮಣಿದವು. ಸೂಫಿಗಳ ಸಮಾಧಿ, ದರ್ಗಾಗಳನ್ನು ಈ ದೇಶದ ನಾನಾಭಾಗಗಳಲ್ಲಿ ಕಾಣಬಹುದಾಗಿದೆ. ಜನರು ಆ ಸಮಾಧಿಗಳಿಗೆ ಹೋಗಿ ತಮ್ಮ ಕೃತಜ್ಞತೆಗಳನ್ನು ಅರ್ಪಿಸುವುದನ್ನು ಇಂದಿಗೂ ನೋಡ ಬಹುದು.

ಜಗತ್ತಿನ ಎಲ್ಲ ಸಂತ-ಮಹಾಂತರಲ್ಲಿ ಒಬ್ಬ ಸೂಫೀ ಇರುತ್ತಾನೆ. ಯಾರು ಪ್ರೇಮಧರ್ಮವನ್ನು ಆಚರಿಸುತ್ತಾರೋ ಅವರೆಲ್ಲ ಸೂಫಿಗಳೇ.

ಮಹಾತ್ಮಾ ಗಾಂಧೀಜೀಯವರು ತಮಗೆ ಪುನರ್ಜನ್ಮ ಇರುವುದಾದರೆ ತಾವು ಒಬ್ಬ ಸೂಫೀ ಸಂತನಾಗಿ ಜನಿಸಬೇಕೆಂದು ಬಯಸುತ್ತಾರೆ. ಅನೇಕತೆಯಿಂದ ಏಕತೆಯತ್ತ ಸಾಗಿ ದೈವಸಾಕ್ಷಾತ್ಕಾರ ಪಡೆಯುವುದೇ ಸೂಫೀ ಧರ್ಮದ ಮರ್ಮವಾಗಿದೆ. ಒಬ್ಬ ಸೂಫೀ ಹೇಳುತ್ತಾನೆ ''ಸಂತರ ನಡುವೆ ಕಳೆಯುವ ಒಂದು ಕ್ಷಣವೇ ಪ್ರಾರ್ಥನೆ ಮತ್ತು ಭಕ್ತಿಗಳಲ್ಲಿ ಕಳೆದ ನೂರು ವರ್ಷಗಳಿಗಿಂತ ಶ್ರೇಷ್ಠ'' ಎಂದು ಸೂಫಿಗಳ ಸತ್ಸಂಗದ ಮಹತ್ತ್ವವನ್ನು ತಿಳಿಸುತ್ತಾನೆ ಮತ್ತೆ ಹೇಳುತ್ತಾನೆ- ''ನೀವು ಸೂಫಿ ಸಂತರಲ್ಲಿಗೆ ಹೋಗಿ ಕೆಲವು ಕಾಲ ಅವರೆದುರಲ್ಲಿ ನಿಲ್ಲಿ. ನಿಮಗೆ ನೇರವಾಗಿ ಏನೂ ಸಂಬಂಧಿಸಿದಂತೆ ಕಾಣದಿದ್ದರೂ ಅಲ್ಲಿಂದ ಹಿಂತಿರುಗುವಾಗ ನಿಮ್ಮಲ್ಲಿ ಏನೋ ಪರಿವರ್ತನೆಯಾಗಿರುತ್ತದೆ'' ಎಂದು ಸೂಫೀಸಂತರ ದರ್ಶನದ ಮಹತ್ತ್ವವನ್ನು ತಿಳಿಸುತ್ತಾನೆ.

ಆಧ್ಯಾತ್ಮ ಜೀವನ ನಡೆಸುವ ಯಾವುದೇ ಸಂಪ್ರದಾಯದ ಸಂತರಾಗಲೀ ಸೂಫಿಗಳಾಗಲೀ ಒಂದೇ. ಒಬ್ಬ ಹಿಂದೂ ಮುಸ್ಲಿಂ ಸೂಫಿಯ ಬಳಿಗೆ ಹೋಗಬಹುದೇ? ಅಥವಾ ಒಬ್ಬ ಸೂಫೀ ಹಿಂದು ಸಂತನಲ್ಲಿಗೆ ಹೋಗಬಹುದೇ ? ಎಂದು ಪ್ರಶ್ನಿಸಿದಾಗ ''ಬೆಳಕನ್ನು ಹುಡುಕುವ ಪತಂಗ ಅದನ್ನು ಕಂಡಾಗ ತಾನು ಬೆಳಕು ಕಂಡ ಮನೆಯೊಡೆಯನ ಜಾತಿಯನ್ನು- ಧರ್ಮವನ್ನು ಸಂಪ್ರದಾಯವನ್ನು ಎಂದೂ ಪ್ರಶ್ನಿಸುವುದಿಲ್ಲ'' ಎನ್ನುತ್ತಾರೆ. ಸಂತರು ಹಾಗೂ ಸೂಫಿಗಳಲ್ಲಿ ಭೇದವೆಣಿಸಬಾರದು. ಅವರೆಲ್ಲರ ಸಂದೇಶ ಒಂದೇ – ''ಅವರೇ ಜಗತ್ತಿನ ಬೆಳಕು''.

ಸೂಫಿಗಳ ಸಂದೇಶ :

ಸೂಫೀ ಧರ್ಮಕ್ಕೆ ಮತ್ತೊಂದು ಹೆಸರು ಪ್ರೇಮಧರ್ಮ. ಜಗತ್ತಿಗೆ ಸೂಫಿಗಳು ಸಾರಿದ್ದು ಪ್ರೇಮದ ಮಹತ್ತ್ವವನ್ನೇ ಪ್ರೇಮ ಜಗತ್ತನ್ನು ಒಂದುಗೂಡಿಸುತ್ತದೆ ; ಮಾನವೀಯ ಸಂಬಂಧವನ್ನು ಅಭಿವೃದ್ಧಿ ಪಡಿಸುತ್ತದೆ ; ಪ್ರೇಮ ಬದುಕಿನ ಉಸಿರು ; ಪ್ರೇಮವಿಲ್ಲದ ಜನಾಂಗದ ಜೀವನ ಬರಡು ; ಈ ತತ್ತ್ವವನ್ನೇ ಸೂಫಿಗಳು ಮತ್ತೆ ಮತ್ತೆ ಬಗೆಬಗೆಯಾಗಿ ಹೇಳುತ್ತಾರೆ.

ಸಂತ ರಮಣಿ ರಾಬಿಯಾ ಹೇಳುತ್ತಾನೆ- ''ನನ್ನ ಹೃದಯದಲ್ಲಿ ಎಷ್ಟೊಂದು ಪ್ರೇಮ ತುಂಬಿದೆ ಎಂದರೆ ಅದರಲ್ಲಿ ಇತರರನ್ನು ದ್ವೇಷಿಸಲು

ಎಡೆಯೇ ಇಲ್ಲ'' ಎಂದು. ಮತ್ತೊಬ್ಬ ಸೂಫೀ ಜಾಮೀ ಹೇಳುತ್ತಾನೆ – ''ಸ್ವಾರ್ಥದ ಕಾಮನೆಗಳಿಂದ ಮಾಡುವ ಭಕ್ತಿಯು ಹಣದ ಪ್ರತಿಫಲದ ಅಪೇಕ್ಷೆಯಿಂದ ದುಡಿದ ಕೂಲಿಯ ಕೆಲಸದಂತೆ'' ಎಂದು. ''ಅಹಂಕಾರದಿಂದ ರಕ್ಷಿಸುವ ಏಕಮಾತ್ರ ವಸ್ತುವೆಂದರೆ ಪ್ರೇಮ. ಪ್ರಾಪಂಚಿಕ ಪ್ರೇಮದಿಂದಲೂ ನೀನು ಮುಖ ತಿರುಗಿಸಬೇಡ. ಏಕೆಂದರೆ ಪರಮ ಸತ್ಯವನ್ನು ಮುಟ್ಟಲು ಅದು ನಿನಗೆ ನೆರವಾದೀತು'' ಎಂದು ಸೂಫೀ ಹಬೀಬ್ ಅಜ್ಜೆಮಿಯಾ ಹೇಳುತ್ತಾನೆ. ಪ್ರೇಮ ಯೋಗಿಗಳಾದ ಸೂಫಿಗಳಿಗೆ ಯಾವುದೂ ತ್ಯಾಜ್ಯವಲ್ಲ. ಎಲ್ಲವೂ ಪೂಜ್ಯ. ಅವರ ವ್ಯಾಪಾರ ತ್ಯಾಗದಿಂದ ಹೆಚ್ಚುತ್ತದೆ. ಸಂಗ್ರಹದಿಂದ ಕುಗ್ಗುತ್ತದೆ. ''ನಾನು ನನ್ನ ಆತ್ಮಶುದ್ಧಿಯನ್ನು ಮಾಡಿಕೊಳ್ಳುವುದರಲ್ಲಿ ತೊಡಗಿದ್ದೇನೆ. ಇತರರು ಉಪನ್ಯಾಸ ಕೊಡುವುದರಲ್ಲಿ ಹಾಗೂ ಕಾಗದ ಕರಿದು ಮಾಡುವುದರಲ್ಲಿ ತೊಡಗಿದ್ದಾರೆ'' ಎಂದು. ಏಕದೇವೋ ಪಾಸನೆಯನ್ನು ಕುರಿತು ಯಾಹ್ಯಾನ ನುಡಿಮುತ್ತು ಹೀಗಿದೆ–'' ತನ್ನ ಪ್ರೇಮಿಯ ಪಕ್ಕದಲ್ಲಿ ಬೇರೊಬ್ಬನನ್ನು ನೋಡುವವನು ಪ್ರೇಮಿಯನ್ನು ಖಂಡಿತ ನೋಡಲಾರ. ''ಬಾಯಿಸಿದ ಸೂಫೀ ಹೇಳುತ್ತಾನೆ–'' ಒಬ್ಬ ದೇವರಿಂದ ಮತ್ತೊಬ್ಬ ದೇವರನ್ನು ಅರಸುತ್ತಾ ಹೋದೆ, ಒಳಗಿನಿಂದ ದನಿ ಬಂತು ''ನೀನೇ ನಾನು'' ಎಂದು. ದೇವರನ್ನು ಬೇರೆ ಎಲ್ಲೋ ಹುಡುಕುವ ಅಗತ್ಯವಿಲ್ಲ. ನಮ್ಮಲ್ಲಿಯೇ ಇದ್ದಾನೆ ಎನ್ನುವ ವಿಚಾರ ಭಾರತೀಯರ 'ಅಹಂ ಬ್ರಹ್ಮಾಸ್ಮಿ' ಎನ್ನುವ ಪರಿಕಲ್ಪನೆಗೆ ಇವನ ಮಾತು ಸಂಪೂರ್ಣ ಅನ್ವಯವಾಗುತ್ತದೆ. ಅಧಂ ಎನ್ನುವ ಸೂಫೀ ಹೇಳುತ್ತಾನೆ– ''ಒಂದು ಜನಾಂಗವನ್ನು ಆಳುವುದಕ್ಕಿಂತ ತನ್ನನ್ನು ತಾನು ಆಳಿಕೊಳ್ಳುವುದು ಒಳ್ಳೆಯದು. ಇಂದ್ರಿಯ ನಿಗ್ರಹದಿಂದ ಮನುಷ್ಯ ತನ್ನನ್ನು ತಾನು ಮೊದಲು ಗೆದ್ದುಕೊಂಡರೆ ಜಗತ್ತನ್ನೇ ಗೆಲ್ಲಲು ಸಮರ್ಥನಾಗುತ್ತಾನೆ'' ಎಂದು.

ಸೂಫೀ ಈ ಜಗತ್ತಿನ ಅತಿಥಿ – ನಡೆದಾಡುವ ದೇವರು ಇದ್ದಂತೆ ಎನ್ನುವ ವಿಷಯವನ್ನು ಮಾರೂಫ್ ಕರ್ಬಿ ಹೇಳುತ್ತಾನೆ – ''ಸೂಫೀ ಈ ಪ್ರಪಂಚದ ಅತಿಥಿ. ಅತಿಥಿಗೆ ತಕ್ಕ ನಡತೆ ಇರಬೇಕು, ದೇವರು ಬಡಿಸಿದ್ದನ್ನು ಉಣಬೇಕೇ ಹೊರತು ಕೇಳುವ ಅಧಿಕಾರವಿಲ್ಲ. ಸೂಫೀ ಧರ್ಮ ಎಂದರೆ ದೇವರಲ್ಲಿ ಮಡಿಯಬೇಕು– ದೇವರಲ್ಲಿ ಬಾಳಬೇಕು. ಸೂಫೀ ಕಾಲಡಿಯ

ನೆಲದಂತೆ ಅಥವಾ ಮಳೆಗರೆವ ಮೋಡದಂತೆ ಇರಬೇಕು. ಸೂಫಿಯು ಒಳಗೆ ಮಾತ್ರ ದೇವರು. ಹೊರಗೆ ಮನುಷ್ಯ'' ಒಬ್ಬ ಸೂಫೀ ಹೇಳುತ್ತಾನೆ– ''ಪರರ ದುಃಖವನ್ನು ಅನುಭವಿಸಿಯೇ ಅರಿಯಬೇಕು'' ಎಂದು. ''ನಿನ್ನ ಕಾಲಿನ ಕೆಳಗೆ ತುಳಿಸಿಕೊಳ್ಳುವ ಇರುವೆಗಳ ಸ್ಥಿತಿ ನಿನಗೆ ಅರ್ಥವಾದರೆ, ಆನೆಯ ಕಾಲಿನ ತುಳಿತಕ್ಕೆ ಸಿಕ್ಕರೆ ನಿನ್ನ ಅವಸ್ಥೆಯೇನು ಎಂದು ತಿಳಿಯುತ್ತದೆ.'' ಎಂದು.

## ಸೂಫೀ ತತ್ತ್ವ ಎಂಥದು ?

ಅಶದುಲ್ಲಾ ರೌದ್ರಿ ಸೂಫೀ ಹೇಳುತ್ತಾನೆ. ''ನಮ್ಮದು ಅಕ್ಷರಗಳಲ್ಲಿ ಬರೆಯಲಾಗದ ವೇದ. ಇದು ಅಂತರಂಗದ ವೇದ. ಸೂಫಿಯ ವಿದ್ಯೆ ಅಧ್ಯಾತ್ಮ ವಿದ್ಯೆ ಅನುಭಾವ ವಿದ್ಯೆ. ಇದು ಅಕ್ಷರಕ್ಕೆ ನಿಲುಕುವುದಿಲ್ಲ. ಅಂತರಂಗದ ರತ್ನ ಎಂದು ಹೇಳುವ ಮಾತು ಅನುಭಾವ ವಿದ್ಯೆಗೆ ಹೇಳಿದ ಸೂಕ್ತ ವ್ಯಾಖ್ಯಾನವಾಗಿದೆ.'' ಮತ್ತೆ ಅವನೇ ಹೇಳುತ್ತಾನೆ– ''ದೇವರ ದರ್ಶನ ಅಷ್ಟು ಸುಲಭವಲ್ಲ. ವಧು ತನ್ನ ಮುಖದ ಮೇಲಿನ ಮುಸುಗನ್ನು ತೆಗೆಯುವವರೆಗೂ ಅವಳಿಗೆ ತನ್ನ ಪ್ರಿಯಕರನ ದರ್ಶನ ಆಗುವುದಿಲ್ಲ. ಅಂತೆಯೇ ಲೌಕಿಕ ಜ್ಞಾನ ಬರೀ ಮುಸುಗು. ಅದನ್ನು ಹರಿದಾಗಲೇ ದೇವರ ದರ್ಶನ ಸಿಗುವುದು'' ಎಂದು. ಇನ್ನೊಬ್ಬ ಸೂಫಿಯ ಮಾತು ಹೀಗಿದೆ– ''ಅನೇಕ ಪಂಥಗಳು–ಮತಗಳು–ತತ್ತ್ವಗಳು–ಸಿದ್ಧಾಂತಗಳು, ಸತ್ಯವನ್ನು ಕಾಣುವ ಬೇರೆ ಬೇರೆ ಹಾದಿಗಳು ಮಾತ್ರ– ಆದರೆ ನಾವು ನೆನಪಿಡಬೇಕಾದ ಸಂಗತಿ ಎಂದರೆ ಮಾರ್ಗ ಗುರಿಯಲ್ಲ, ಸೋಪಾನಗಳು ಶಿಖರವಲ್ಲ'' ಮತ–ಪಂಥಗಳ ಹೆಸರಿನಲ್ಲಿ ಕಿತ್ತಾಡುವ ಮಾನವ ಜನಾಂಗಕ್ಕೆ ಮೌಲಿಕವಾದ ಸಂದೇಶವನ್ನು ಸೂಫಿಗಳು ಕೊಟ್ಟಿದ್ದಾರೆ.

ಸೂಫಿಗಳಲ್ಲಿ ಬಹುಪಾಲು ಗೃಹಸ್ಥರು, ಎಲ್ಲ ವೃತ್ತಿಯವರೂ ಇದ್ದರು. ಸೌದೆ ಮಾರುವ, ಬಟ್ಟೆ ನೇಯುವ, ಅಡಿಗೆ ಮಾಡುವ, ದನ ಕಾಯುವ, ವ್ಯಾಪಾರ ಮಾಡುವ, ಹೀಗೆ ಎಲ್ಲಾ ವೃತ್ತಿಯವರೂ ಇದ್ದರು. ತಮ್ಮ ತಮ್ಮ ಕೆಲಸವನ್ನು ಅಲ್ಲಾನ ಕೆಲಸವೆಂದು ನಿಷ್ಠೆಯಿಂದ ಮಾಡುತ್ತಿದ್ದರು. ಸರಳ ಜೀವನ, ನೈಜ ನಡೆ–ನುಡಿಗಳು ಅವರ ಬಾಳಿನ ಉಸಿರಾಗಿದ್ದವು. ಆದರೆ

ಸೂಫಿಗಳಲ್ಲಿ ಸನ್ಯಾಸಿಗಳಾಗಿದ್ದವರಿಗೆ ಕಾಯಕದ ಪ್ರಜ್ಞೆ ಇರಲಿಲ್ಲ. ಅವರಿಗೆ ಅದು ಅನಿವಾರ್ಯವಾಗಿರಲಿಲ್ಲ.

ಜಗತ್ತಿಗೇ ಪ್ರೇಮದರ್ಶನವನ್ನು ನೀಡಿದ ಸೂಫೀ ಪಂಥ ಕ್ರಿ.ಶ. ೭ ರಿಂದ ೧೫ ನೇ ಶತಮಾನದವರೆಗೂ ಸುಮಾರು ೮೦೦ ವರ್ಷಗಳ ಕಾಲ ಬೆಳಗಿ ಕ್ರಮೇಣ ಅವನತಿಯತ್ತ ಸಾಗುತ್ತದೆ. ಇದಕ್ಕೇ ಅನೇಕ ಕಾರಣಗಳನ್ನು ಇತಿಹಾಸಕಾರರು ಹೇಳುತ್ತಾರೆ. ಮುಂದೆ ಬಂದ ಸೂಫಿಗಳ ಅಜ್ಞಾನ-ಅಶ್ರದ್ಧೆಗಳು, ಇರಾನ್‌ನ ಸಾಮಾಜಿಕ-ಧಾರ್ಮಿಕ ಆಂದೋಲನ, ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ, ಮಧ್ಯಏಷ್ಯಾದಲ್ಲಿ ರಷಿಯಾದ ಪ್ರಭಾವ, ಮೊಗಲ್ ಸಾಮ್ರಾಜ್ಯದ ಪತನ ಇತ್ಯಾದಿ. ಯಾವುದೇ ಧರ್ಮ ಪ್ರವಾದಿಯಿಂದ ಉದಯಿಸಿ ಅನುಭಾವಿಗಳಿಂದ ಬೆಳೆದು ಪುರೋಹಿತರ (ಖಾಜಿ) ಕೈಯಲ್ಲಿ ಸಿಕ್ಕಿ ಅವಸಾನ ಹೊಂದುತ್ತದೆ. ಎನ್ನುವ ಅನುಭಾವದ ಮಾತನ್ನು ಮತ್ತೆ ಮತ್ತೆ ಆಲೋಚಿಸಿದಾಗ ಜ್ಞಾನವಾಗಲೀ, ಅನುಭಾವ ವಾಗಲೀ ಅವುಗಳ ಅವಸಾನಕ್ಕೇ ಹೆಚ್ಚು ಕಾರಣಗಳನ್ನು ಹುಡುಕಬೇಕಾಗಿಲ್ಲ. ಈ ವಾಸ್ತವಿಕ ಸತ್ಯಕ್ಕೆ ಸೂಫೀ ಪಂಥವೂ ಹೊರತಲ್ಲ.

### ಶರಣರ ಅನುಭಾವ ಪಥ :

ವೀರಶೈವ ಧಾರ್ಮಿಕ ತತ್ತ್ವಗಳ ಹಿನ್ನೆಲೆಯಲ್ಲಿ ಶಿವಜ್ಞಾನವನ್ನು ಪಡೆದು ತಾನು ಸತಿ-ಪರಮಾತ್ಮನು ಪತಿ ಎಂದು ತಿಳಿದು ಇಷ್ಟಲಿಂಗದ ಮೂಲಕ ಉಪಾಸನೆಯನ್ನು ಮಾಡುವವನೇ ಶರಣನೆಂದು ಸಿದ್ಧಾಂತ ಶಿಖಾಮಣಿ ಹೇಳುತ್ತದೆ. ಅಂಗ, ಜೀವನು-ಲಿಂಗ ದೇವನೆಡೆಗೆ ಸಾಗಲು ವೀರಶೈವ ಧರ್ಮದಲ್ಲಿ ಆರು ಸೋಪಾನಗಳಿವೆ. ಭಕ್ತ-ಮಹೇಶ-ಪ್ರಸಾದಿ- ಪ್ರಾಣ ಲಿಂಗಿ-ಶರಣ-ಐಕ್ಯಸ್ಥಳಗಳು-ಇವು ಸಾಧಕನ ಮನೋವಿಕಾಸದ ಮಜಲು ಗಳು. ಇವುಗಳನ್ನು ''ಷಟ್‌ಸ್ಥಲ'' ಎಂದು ಕರೆಯುತ್ತಾರೆ. ಸಾಧಕನ ಮನಸ್ಸಿನ ಎಲ್ಲ ಭಾವನೆಗಳು ಇಲ್ಲಿವೆ.

ಷಟ್‌ಸ್ಥಲಗಳ ಶರಣ ಸ್ಥಳದಲ್ಲಿ ಮಧುರ ಭಾವದ ಸಾಧಕನು ತನ್ನನ್ನು 'ಸತಿ' ಎಂದು ಪರಮಾತ್ಮನನ್ನು 'ಪತಿ' ಎಂದು ಪರಿಭಾವಿಸಿ ಉಪಾಸನೆ ಮಾಡುತ್ತಾನೆ. ಆಗ ಶಿವನೊಬ್ಬನೆ 'ಪತಿ' ಅವನಲ್ಲಿಯೇ ಅಚಲ ನಿಷ್ಠೆ. ಅನ್ಯ

ದೈವಂಗಳ ವಿಚಾರ ಅವನಿಗೆ ಬೇಕಾಗುವುದಿಲ್ಲ. ಶರಣನ ನಿಷ್ಠೆ ಪತಿವ್ರತಾ ಸ್ತ್ರೀಯಳ ಪತಿನಿಷ್ಠೆಯಂತಿರುತ್ತದೆ- ಎನ್ನುವ ವಿಚಾರವನ್ನು ಸಿದ್ಧಾಂತ ಶಿಖಾಮಣಿ ಸ್ಪಷ್ಟಪಡಿಸುತ್ತದೆ.

''ಸತೀವ ರಮಣೇಯಸ್ತು ಶಿವೇ ಶಕ್ತಿಂ ವಿಭಾವಯನ್
ತದನ್ಯ ವಿಮುಖಃ ಸ್ಯೋಯಂ ಜ್ಞಾತಃ ಶರಣಸಾವಾನ್''

ಶರಣಸ್ಥಲದ ಹಂತದಲ್ಲಿರುವ ಸಾಧಕನನ್ನು ಮಾತ್ರ ಶರಣನೆಂದು ಕರೆಯುತ್ತಾರೆ. ಸಾಮಾನ್ಯವಾದ ಅರ್ಥದಲ್ಲಿ ಶಿವನಿಗೆ ಶರಣಾಗತನಾದವನಿಗೆ ಶರಣ ಎನ್ನುವ ಅರ್ಥ ಇದೆ. ಆದರೂ ಶರಣಸ್ಥಲದ ಸ್ಥಿತಿಗೆ ಏರಿದ ಸಾಧಕನಿಗೆ ಮಾತ್ರ ಈ ಹೆಸರು ಅನ್ವಯವಾಗುತ್ತದೆ. ಸಾಧಕನ ಷಟ್‌ಸ್ಥಲಗಳ ವಿಚಾರ ವನ್ನು ಅಲ್ಲಮ ಪ್ರಭುಗಳು ತಮ್ಮ ವಚನದಲ್ಲಿ ಸರಳವಾಗಿ ಸುಂದರವಾಗಿ ನಿರೂಪಿಸುತ್ತಾರೆ. ವಿಶ್ವಾಸದಿಂದ ಭಕ್ತನಾಗಿ, ಆ ವಿಶ್ವಾಸದೊಳಗಣ ನಿಷ್ಕಲಂ ಮಹೇಶ್ವರನಾಗಿ, ಆನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ, ಆ ಸಾವಧಾನದೊಳಗಣ ಸ್ವಾನುಭಾವದಿಂದ ಪ್ರಾಣಲಿಂಗಿಯಾಗಿ, ಆ ಸ್ವಾನುಭಾವದೊಳಗಣ ಅರಿವಿನಿಂದ ಶರಣನಾಗಿ, ಆ ಅರಿವು ನಿಜದಲ್ಲಿ ಸಮರಸ ಭಾವದ ನೈದಿದ, ನಿರ್ಭಾವ ಪದದೊಳುನಿಂದ ಭೇದವೆ, ಐಕ್ಯ ಸ್ಥಲ ಕಾಣಾ ಗುಹೇಶ್ವರಾ,

ಈ ಆರು ಸ್ಥಲಗಳಲ್ಲಿ ಶರಣಸ್ಥಲದಲ್ಲಿಯೇ ಸತಿ-ಪತಿ ಭಾವ ಮೈದೋರುತ್ತದೆ. ಈ ಭಾವನೆಯ ಅನುಭಾವಿಗಳು ಜಗತ್ತಿನಲ್ಲಿ ಕಂಡುಬರುತ್ತಾರೆ.

"All of us are wives of the one Lord and abode us for him" ಎನ್ನುವ ಮಾತು ಮೇಲಿನ ವಿಚಾರವನ್ನೇ ಸಮರ್ಥಿಸುತ್ತದೆ.

ಶರಣರಲ್ಲಿ ಬಹುಪಾಲು ಜನರು ಸತಿ-ಪತಿ ಭಾವದ ಅನುಭಾವಿ ಗಳಾಗಿದ್ದರು. ಅವರಲ್ಲಿ ವಿಭಿನ್ನ ಮನೋಧರ್ಮದ ಸಾಧಕರು ಇದ್ದರು. ಮರುಳ ಶಂಕರ ದೇವರ ವಚನವೊಂದು ಹೀಗಿದೆ :

''ತಂದೆ-ತಾಯಿಗಳಿಬ್ಬರು ಲಿಂಗವೆಂಬ ಹೆಣ್ಣು ತಂದು
ಎನ್ನ ಕೊರಳಲ್ಲಿ ಕಟ್ಟಿ ಮದುವೆನು ಮಾಡಿದರಯ್ಯ
ಆ ಹೆಣ್ಣಿನ ಕೈವಿಡಿದು ನಾನು ಬದುಕಿದೆನು''

(ವ.ಸಂ. ೨ ಪುಟ ೩೯. ವ. ೧೧೨೨) ಇಲ್ಲಿ ಮರುಳಶಂಕರ ದೇವರ ಸಾಧನೆ ಲಿಂಗ–ಸತಿ–ಶರಣಪತಿ ಎನ್ನುವ ಭಾವದಿಂದ ಕೂಡಿದೆ ಎಂದು ತೋರುತ್ತದೆ. ಅಂಬಿಗರ ಚೌಡಯ್ಯನಂತೂ ಶರಣಸತಿ–ಲಿಂಗಪತಿ ಎನ್ನುವ ಭಾವನೆಯನ್ನೇ ಅಲ್ಲಗಳೆಯುತ್ತಾನೆ. ಅವನ ವಚನ ಹೀಗಿದೆ–

"ಶರಣಸತಿ-ಲಿಂಗಪತಿ ಎಂಬರು
ಶರಣ ಹೆಣ್ಣಾದ ಪರಿಯನ್ನೆಂತು? ಲಿಂಗ ಗಂಡಾದ ಪರಿಯನ್ನೆಂತು?
ನೀರು ನೀರು ಕೂಡಿ ಬೆರೆದಲ್ಲಿ ಭೇದಿಸಿ ಬೇರೆ ಮಾಡಬಹುದೇ ?"

ಎಂದು ಪ್ರಶ್ನಿಸುತ್ತಾನೆ.

(ಸಂಕೀರ್ಣ ವಚನ ಸಂಪುಟ ೧ ವಚನ ೨೫೮)

ಹೀಗೆ ಶರಣರಲ್ಲೂ ಕೂಡ ವಿಭಿನ್ನ ಮನೋಭಾವದ ಸಾಧಕರಿದ್ದರು.

ಸತಿ–ಪತಿ ಭಾವದ ಭಕ್ತಿ ಬಹುಪಾಲು ಶರಣರಲ್ಲೂ ವೀರಶೈವ ತತ್ತ್ವದ ತಳಹದಿಯಾದ ಷಟ್‌ಸ್ಥಲಗಳಲ್ಲಿ ಒಂದಾದ ಶರಣಸ್ಥಲದಲ್ಲಿಯೇ ಬರುವುದ ರಿಂದ ಇದು ಎಲ್ಲ ಶರಣರಿಗೂ ಮಾರ್ಗದರ್ಶಕವಾಯಿತು. ಸತಿ–ಪತಿ ಭಾವದ ಭಕ್ತಿ ಎಲ್ಲ ಕಾಲ–ದೇಶಗಳು ಸಾಧಕರಲ್ಲಿಯೂ ಕಂಡುಬರುತ್ತದೆ. ಮಾನವನಲ್ಲಿ ಮೂಲಭೂತವಾಗಿರುವ ಲೈಂಗಿಕ ಪ್ರಚೋದನೆ ಇದರ ತಳಹದಿ. ಆದರೆ ಆ ಭಾವ ಇಲ್ಲಿ ಸ್ವಾರ್ಥರಹಿತವಾಗಿ ದೈಹಿಕ ಭೋಗದಿಂದ ವಿಮುಕ್ತವಾಗಿ ಉದಾತ್ತವಾದುದರ ಕಡೆಗೆ ತಿರುಗಿ ಮಧುರ ಭಕ್ತಿಯಾಗಿ ಪರಿಣಮಿಸುತ್ತದೆ. ಮಧುರ ಭಾವದಲ್ಲಿ ಶರಣನು ತನ್ನನ್ನು ಸತಿ ಎಂದು ಪರಮಾತ್ಮನನ್ನು ಪತಿ ಎಂದು ಪರಿಭಾವಿಸಿ ಉಪಾಸನೆ ಮಾಡುತ್ತಾನೆ. ಶರಣರಲ್ಲಿ ಭಕ್ತಿಗೆ–ಬಸವಣ್ಣ, ವೈರಾಗ್ಯಕ್ಕೆ–ಪ್ರಭುದೇವ, ಜ್ಞಾನಕ್ಕೆ–ಚೆನ್ನಬಸವಣ್ಣ, ಕರ್ಮಯೋಗಕ್ಕೆ–ಸಿದ್ಧರಾಮ ಮಧುರಭಾವಕ್ಕೇ–ಅಕ್ಕ ಮಹಾದೇವಿ, ಗಟ್ಟಿಗೊಂಡ ಭಾವನಿಷ್ಠೆಗೆ–ಘಟ್ಟಿವಾಳಯ್ಯ, ಹೀಗೆ ವಿವಿಧ ಮನೋಧರ್ಮದ ಸಾಧಕರಿದ್ದರೂ ಅವರ ಸಾಧನಾ ಪಥದ ನಿಲುವು (ಎಲ್ಲೋ ಇಬ್ಬರು) ಮೂವರನ್ನು ಹೊರತು ಪಡಿಸಿ ಶರಣಸತಿ–ಲಿಂಗಪತಿಯಾಗಿತ್ತು.

ಷಟ್‌ಸ್ಥಲಕ್ಕೆ ಹಿನ್ನೆಲೆಯಾದ ಶ್ರದ್ಧಾ–ನೈಷ್ಠಿ–ಅವಧಾನ–ಅನುಭಾವ–ಆನಂದ–ಸಮರಸವೆಂಬ ಆರು ವಿಧ ಭಕ್ತಿ ಭಾವಗಳ ಕ್ರಮವಿಕಾಸದಿಂದ

ಸಾಧಕನು ಲಿಂಗಾಂಗ ಸಾಮರಸ್ಯದ ನೆಲೆಗೆ ಏರುತ್ತಾನೆ. ಅದು ಮಾನವತೆಯು ಏರಬಹುದಾದ ಕೊನೆಯ ಎತ್ತರವೆಂದು ತೋರುತ್ತದೆ. ಸಾಧನೆಯ ಬಲದಿಂದ ಸಾಧಕನ ಮನಸ್ಸನ್ನು ಸುಪ್ರಮಾನಸ ನೆಲೆಗೆ ನಿಲ್ಲಿಸುವ ಬರೀ ಪೂರ್ಣ ಯೋಗವಲ್ಲ; ಇದು ಪರಿಪೂರ್ಣ ಶಿವಯೋಗವಾಗಿದೆ.

ಶರಣರು ಪ್ರಧಾನತಃ ಅನುಭಾವಿಗಳು. ಶಿವನ ಅರಿವೇ ಅನುಭವ; ಶಿವನ ಅನ್ವೇಷಣೆಯೇ ಅನುಭಾವ, ಶಿವನ ಸಾಕ್ಷಾತ್ಕಾರವೇ ಅನುಭೂತಿ ಎನ್ನುತ್ತಾರೆ.

ಇತಿಹಾಸ :

ಕರ್ನಾಟಕದ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನವು ಧಾರ್ಮಿಕ-ಸಾಮಾಜಿಕ-ಆರ್ಥಿಕ-ಸುಧಾರಣಾ ದೃಷ್ಟಿಯಿಂದ ಸುವರ್ಣ ಕಾಲವಾಗಿದೆ. ಆ ಕಾಲದಲ್ಲಿ ವೀರಶೈವರ ತತ್ತ್ವಾಚರಣೆಯಲ್ಲಿ ಶೈವ-ವೈದಿಕ ಧರ್ಮಗಳ ಪ್ರಭಾವದಿಂದಾಗಿ ಅನೇಕ ಅಸಂಗತಗಳು ತಲೆದೋರಿ ಕಂದಾಚಾರ ಪದ್ಧತಿಗಳು ಬೆಳೆದು ಧರ್ಮದ ತತ್ತ್ವಗಳು ನಿಜಾಚರಣೆಯಲ್ಲಿ ನಿಷ್ಕ್ರಿಯೆಯಾಗಿದ್ದವು. ಧರ್ಮವೊಂದು ಕೂಪಜಲವಾಗಿತ್ತು. ಸಂಪ್ರದಾಯಗಳಲ್ಲಿ ಗೊಡ್ಡುತನ ಬೆಳೆದಿತ್ತು. ಪ್ರಾಚೀನ ವೀರಶೈವ ಸಿದ್ಧಾಂತದ ನಿಜಹೃದಯವನ್ನು ಅರಿತಿದ್ದ ಬಸವಣ್ಣನವರು ಈ ಧರ್ಮದಲ್ಲಿ ಪ್ರವೇಶ ಮಾಡಿ ಈ ಧರ್ಮದ ತತ್ತ್ವಗಳನ್ನು ಪ್ರಾಯೋಗಿಕ ವಿಮರ್ಶೆಗಳಿಗೆ ಒಳಪಡಿಸಿ ವ್ಯಾಪಕವಾಗಿ ಪ್ರಚಾರ ಮಾಡಿದರು. ಒಂದು ಅರ್ಥದಲ್ಲಿ ಅವರನ್ನು ''ಪ್ರಯೋಗ ವಿಜ್ಞಾನಿಗಳು'' ಎನ್ನಬಹುದು. (Applied Scientist) ಆ ಮಹಾನುಭಾವರಿಂದ ಧರ್ಮದ ಪುನರುಜ್ಜೀವನವಾಯಿತು. ವೀರಶೈವ ಉದಾರ ತತ್ತ್ವ ದೇಶದ ನಾನಾಭಾಗಗಳಿಂದ ಜನರನ್ನು ತಂಡೋಪತಂಡವಾಗಿ ತನ್ನತ್ತ ಆಕರ್ಷಿಸಿತು. ಬಸವಣ್ಣನೆಂಬ ಪ್ರತಿಭಾಪೂರ್ಣ ಭಾನುವಿನ ಬೆಳಕಿಗೆ ಕೈಮುಗಿದು ಅನೇಕ ಜನ ಶರಣರು-ಶರಣೆಯರು ಸಂಘಟಿತರಾದರು. ಬಸವಣ್ಣನವರ ಹಿರಿಯತನದಲ್ಲಿ ಸಾಮಾಜಿಕ, ಧಾರ್ಮಿಕ, ಕಾಯಕದ ಮೂಲಕ ಆರ್ಥಿಕ ರಂಗದಲ್ಲೂ ಕ್ರಾಂತಿಗೈದರು. ತಮ್ಮ ನಡೆನುಡಿಗಳಿಂದ ಕಂಡುಂಡ ಅನುಭವವನ್ನೇ ವಚನರೂಪದಲ್ಲಿ ನುಡಿದರು. ಅವರ ಜ್ಯೋತಿಸ್ವರೂಪಗಳಾದ ಅನುಭಾವದ ಗೀತೆಗಳೇ (ವಚನಗಳು) ಅನುಭಾವ

ಸಾಹಿತ್ಯವೆಂದು ಹೆಸರಾಯಿತು. ಕನ್ನಡದಲ್ಲಿ ಆಧ್ಯಾತ್ಮ ಅನುಭವ ಸಾಹಿತ್ಯವನ್ನು ಶ್ರೀಮಂತಗೊಳಿಸಿತು. ಅಷ್ಟೇ ಅಲ್ಲ; ಜಾಗತಿಕ ಅನುಭಾವ ಸಾಹಿತ್ಯಕ್ಕೆ ವಿಶಿಷ್ಟವಾದ ಕಾಣಿಕೆಯನ್ನು ನೀಡಿತು.

ಕರ್ನಾಟಕದಲ್ಲಿ ಸುಮಾರು ಮುನ್ನೂರಾಮೂವತ್ತೂರಕ್ಕಿಂತ ಹೆಚ್ಚು ಜನ ಶರಣಶರಣೆಯರು ವಚನಗಳನ್ನು ರಚಿಸಿದ್ದಾರೆ. ಶರಣರ ಧಾರ್ಮಿಕ–ಸಾಮಾಜಿಕ–ವೈಚಾರಿಕ ತತ್ತ್ವಗಳು ವಚನರೂಪದಲ್ಲಿ ವ್ಯಕ್ತವಾಗಿವೆ. ಶರಣೆಯರು ಧಾರ್ಮಿಕ ಆಂದೋಲನದಲ್ಲಿ ಶರಣರಿಗೆ ಹೆಗಲೆಣೆಯಾಗಿದ್ದರು. ಅನುಭವ ಮಂಟಪವೆಂಬ "ಧಾರ್ಮಿಕ ಪಾರ್ಲಿಮೆಂಟ್"ನಲ್ಲಿ ಇವರೆಲ್ಲಾ ಸಮಾನ ಸದಸ್ಯರು. ಪ್ರಭುದೇವರೇ ಸಭಾಪತಿಯಾಗಿ, ಬಸವಣ್ಣನವರ ದಿವ್ಯನೇತೃತ್ವದಲ್ಲಿ, ಜ್ಞಾನನಿಧಿ ಚೆನ್ನಬಸವಣ್ಣನವರೇ ಸಭಾಗೋಷ್ಠಿಯ ಕಾರ್ಯನಿರ್ವಾಹಕರಾಗಿದ್ದರು. ಅಲ್ಲಿ ಪ್ರಶ್ನೋತ್ತರ–ಚಿಂತನ–ಮಂಥನ–ಸಮಸ್ಯೆ–ಸಮಾಧಾನಗಳು ವಚನರೂಪದಲ್ಲಿ ನಡೆಯುತ್ತಿತ್ತು. ಶರಣರ ವಚನಗಳನ್ನು ವಚನ ಭಂಡಾರಿ–ಶಾಂತರಸನು ಲಿಪಿ ಮಾಡಿಕೊಳ್ಳುತ್ತಿದ್ದ. ಅನುಭವಮಂಟಪದ ವಿಚಾರಗೋಷ್ಠಿ ಪಂಡಿತರ ವಿದ್ವತ್ಪ್ರಚುರವಾದ ಗೋಷ್ಠಿಗಳಂತೆ ಬುದ್ಧಿಯ ಕಸರತ್ತಾಗಿರದೆ ಅನುಭಾವಿಗಳು ತಮ್ಮ ನಡೆನುಡಿಯಲ್ಲಿ ಸಾಧಿಸಿದ ಅನುಭವದ ಅಮೃತಮಥನವಾಗಿತ್ತು. ಅಲ್ಲಿ ಸಾಮಾಜಿಕ–ಧಾರ್ಮಿಕ–ನೈತಿಕ ಹಾಗೂ ಕಾಯಕಕ್ಕೇ ಸಂಬಂಧಿಸಿದ ಬಹುಜನ ಹಿತಾಯ–ಬಹು ಜನ ಸುಖಾಯದ ಜನಪರವಾದ ಚಿಂತನ–ಮಂಥನದ ಫಲವೇ ವಚನ ಸಾಹಿತ್ಯವೆಂಬ ನವನೀತ. ಅದು ಕನ್ನಡಿಗರಿಗೆ ಲಭಿಸಿತು ಮತ್ತು ಜಾಗತಿಕ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಯಾಯಿತು.

ಅನುಭಾವ ಪಥದಲ್ಲಿ ಸಾಗಿದ ಶರಣಸ್ಥಲದಲ್ಲಿ ಭಕ್ತನು ತಾನು ಹೆಣ್ಣು, ಶಿವನ ಸತಿ, ಎಂದು ಭಾವಿಸುತ್ತಾನೆ. ತಾನು ಹೆಣ್ಣೆಂಬ ಬಾವ ಈ ಸ್ಥಳದಲ್ಲಿ ಸಹಜವಾಗಿ ಬರುತ್ತದೆ. ಈ ಭಾವ ಕೃತ್ರಿಮವಾದುದಲ್ಲ. ಕನ್ಯೆಯ ಸ್ನೇಹದಂತೆ ಸಹಜವಾದುದು. ಸಾಧಕನ ಭಕ್ತಿ ವಿಕಾಸಗೊಂಡು ಚಿತ್‌ಶಕ್ತಿ ಜಾಗೃತವಾಗಿ ಭಕ್ತ ಚಿತ್ಸ್ವರೂಪನೆನಿಸಿದಾಗ ಶರಣಸತಿ–ಲಿಂಗಪತಿ ಭಾವ ಅವನಿಗೆ ಅರಿವಿಲ್ಲದಂತೆ ಮೂಡಿ ನಿಲ್ಲುತ್ತದೆ. ಅಗ ಭಕ್ತ ಹೆಣ್ಣೇ ಇರಲಿ, ಗಂಡೇ ಇರಲಿ–

ಎಲ್ಲರೂ ಶಿವನ ಸತಿಯರಾಗುತ್ತಾರೆ. ದಾಸ್ಯ–ಸಖ್ಯ–ವಾತ್ಸಲ್ಯ–ಮಧುರ–ಶಾಂತ–ಇವು ಭಕ್ತಿಯ ಪಂಚಭಾವಗಳೆಂದು ಹೇಳುತ್ತಾರೆ. ಈ ಐದರಲ್ಲಿ ಶರಣರು ಹಾಗೂ ಸೂಫಿಗಳು ಸಖೀಭಾವ (ಸತಿ–ಪತಿ ಭಾವ) ದವರಾಗುತ್ತಾರೆ. ವೈಷ್ಣವರದು ಮಧುರಭಾವವಾದರೆ, ಕರ್ನಾಟಕದ ದಾಸರು–ದಾಸ್ಯಭಾವದವರಾಗಿದ್ದಾರೆ. ಇಲ್ಲಿ ನಾವು ಒಂದು ವಿಷಯವನ್ನು ನೆನಪಿಟ್ಟಕೊಳ್ಳಬೇಕಾಗಿದೆ. ಜಾಗತಿಕ ಅನುಭಾವಿಗಳಿಗೂ, ಶರಣರಿಗೂ ವಿಶಿಷ್ಟವಾದ ಅಂತರವಿದೆ. ಶರಣರ ಭಕ್ತಿ ಭಾವವು ಕುಂಟಲ್ಲ; ಅದಕ್ಕೆ ಕ್ರಿಯೆಯ ಕಾಲುಗಳಿವೆ. ಅವರ ಭಕ್ತಿ ಕುರುಡಲ್ಲ; ಜ್ಞಾನದ ಕಣ್ಣುಗಳಿವೆ. ಇದರ ಅರ್ಥ ಶರಣರ ಅನುಭಾವ ಸಾಧನೆ ಜ್ಞಾನ–ಕ್ರಿಯಾ ಸಮನ್ವಯ ವಾಗಿತ್ತು. ಶರಣರು ಕೇವಲ ಅನುಭಾವಿಗಳು ಮಾತ್ರವಲ್ಲ ಸಾಮಾಜಿಕ ಧಾರ್ಮಿಕ ಕ್ರಾಂತಿಕಾರರು. ದೈವದ ಆರಾಧನೆಯೊಂದಿಗೆ ಕಾಯಕಕ್ಕೂ ಅದು ಪ್ರತಿಯೊಬ್ಬನಿಗೂ ಅನಿವಾರ್ಯವೆಂಬಂತೆ ಅದಕ್ಕೊಂದು ಮಹತ್ತ್ವದ ಸ್ಥಾನ ನೀಡಿದ್ದು ಶರಣರ ವೈಶಿಷ್ಟ್ಯವಾಗಿದೆ. ಆದ್ದರಿಂದ ಇವರನ್ನು ''ಕ್ರಾಂತಿಕಾರಕ ಅನುಭಾವಿ''ಗಳೆಂದೇ ಕರೆಯುತ್ತಾರೆ. (Revolutionary mystics.)

### ತೌಲನಿಕ ದೃಷ್ಟಿ ; ಸಮನ್ವಯ ಅಂಶಗಳಲ್ಲಿ

ಶರಣರು ಮತ್ತು ಸೂಫಿಗಳ ಅನುಭಾವ ಪಂಥಗಳ ಪ್ರವಾಹಗಳನ್ನು ಗುರ್ತಿಸಿದಾಗ ಅವುಗಳ ಮಾರ್ಗ ವಿಭಿನ್ನವಾಗಿ ಕಂಡರೂ ಗುರಿ ಮಾತ್ರ ಒಂದೇ ಎಂದು ತಿಳಿಯುತ್ತದೆ. ಅನುಭಾವಿಗಳ ನೆಲೆ–ಹಿನ್ನೆಲೆ, ಕಾಲ–ಸನ್ನಿವೇಶ, ದೇಶ–ಭಾಷೆ, ಪರಿಸರ–ಪ್ರಜ್ಞೆಗಳು ಬೇರೆ ಬೇರೆ ಕಂಡರೂ ಅವುಗಳ ಅಂತರಂಗದ ನಿಲುವು–ಲಕ್ಷ್ಯ ಒಂದೇ ಆಗಿದೆ.

ಶರಣರು ದೈವವನ್ನು 'ಪತಿ' ರೂಪದಲ್ಲೂ, ಸೂಫಿಗಳು 'ಸತಿ' ರೂಪದಲ್ಲೂ ಆರಾಧಿಸುತ್ತಾರೆ. ಇಬ್ಬರೂ ಮಧುರ ಭಾವದ ಪರಮಭಕ್ತರು. ಸೂಫಿಗಳು ತಮ್ಮ ಸಾಧನೆಯ ಹಾದಿಯಲ್ಲಿ ಕ್ರಮಿಸುವ ನಾಲ್ಕು ಅವಸ್ಥೆಗಳು ಶರಣರ ಆರು ಸ್ಥಲಗಳಿಗೆ ಸ್ಥೂಲವಾಗಿ ಅನ್ವಯಿಸಬಹುದಾಗಿದೆ. ಸೂಫಿಗಳಲ್ಲಿ ಸಾಧನೆಯ ನಾಲ್ಕು ಅವಸ್ಥೆಗಳಲ್ಲಿ ಮತ್ತೆ ಸೂಕ್ಷ್ಮವಾಗಿ ಮನೋವಿಕಾಸದ ಹಂತಗಳನ್ನು ಗುರ್ತಿಸುವ ''ಸಾತ್‌ಸೌ ಉತ್ರೆಪಾರ್'' (ಏಳುನೂರಕ್ಕೂ ಹೆಚ್ಚು) ಉಪಸ್ಥಲಗಳಿವೆ. ಈ ಸ್ಥಲಗಳು ವೀರಶೈವ ಧರ್ಮದ ಅಂಗ

ಸ್ಥಲ–೪೪ ; ಲಿಂಗಸ್ಥಲ–೫೭ ಹೀಗೆ ಏಕೋತ್ತರ ಶತಸ್ಥಲಗಳನ್ನು ಅಂದರೆ ೧೦೧ ಸ್ಥಲಗಳನ್ನು ಸ್ಥೂಲವಾಗಿ ಹೋಲುತ್ತದೆ ಎಂದು ತೋರುತ್ತದೆ.

ಸೂಫಿಗಳ ನಾಲ್ಕು ಆಚಾರಗಳು (ನಮಾಜ್.. ಝಕಾತ್– ರೋಜ್ಹಾ ಹಜ್ಜ್) ಶರಣರ ಅಷ್ಟಾವರಣಗಳಾದ ಗುರು–ಲಿಂಗ–ಜಂಗಮ–ಪಾದೋದಕ–ಪ್ರಸಾದ–ವಿಭೂತಿ–ರುದ್ರಾಕ್ಷಿ–ಮಂತ್ರಗಳಿಗೆ ಅನ್ವಯ ವಾಗುತ್ತದೆ.

ಸೂಫಿಗಳ ''ಸಾತ್‌ಹಲ್''ಗಳು (ಸಮಯಾಚಾರಗಳು) ಶರಣರ ಪಂಚಾಚಾರ (ಲಿಂಗಾಚಾರ–ಸದಾಚಾರ–ಶಿವಾಚಾರ–ಗಣಾಚಾರ–ಭೃತ್ಯಾಚಾರ)ಗಳಿಗೆ ಅನ್ವಯವಾಗುತ್ತದೆ.

ಸೂಫಿಗಳ ಹಾಗೂ ಶರಣರ ಸಾಧನೆಯಲ್ಲಿ ಪುರೋಹಿತರ ಅಗತ್ಯವಿಲ್ಲ. ಭಗವಂತನೊಂದಿಗೆ ಇವರ ಸಂಬಂಧ ನೇರವಾಗಿರುತ್ತದೆ. ಶರಣರು ಆತ್ಮನನ್ನು ಸ್ತ್ರೀರೂಪದಲ್ಲೂ, ಪರಮಾತ್ಮನನ್ನು ಪುರುಷರೂಪದಲ್ಲೂ ಕಂಡರೆ ಸೂಫಿಗಳು ಅದಕ್ಕೆ ವ್ಯತಿರಿಕ್ತವಾಗಿ ಆತ್ಮನನ್ನು ಪುರುಷರೂಪದಲ್ಲೂ ಪರಮಾತ್ಮನನ್ನು–ಸ್ತ್ರೀರೂಪದಲ್ಲಿ ಕಾಣುತ್ತಾರೆ.

ಶರಣರು ಮತ್ತು ಸೂಫಿಗಳು ಗೃಹಸ್ಥರು, ಸ್ತ್ರೀ–ಪುರುಷರಿಬ್ಬರೂ ಸಾಧಕರು. ನಡೆ–ನುಡಿಗಳಲ್ಲಿ ಒಂದಾಗಿ ಬಾಳಿದವರು. ಅವರ ಜೀವನಸ್ಫಟಿಕ ದಂತೆ ನಿರ್ಮಲವಾಗಿರುತ್ತದೆ. ಸೂಫಿಗಳ ಮತ್ತು ಶರಣರ ಬದುಕು ತೋರಿಕೆಯಾಗಿರದೆ, ಪ್ರಾಮಾಣಿಕವಾಗಿತ್ತು. ಸೂಫಿಗಳ ಅನುಭಾವ ಸಾಹಿತ್ಯ ಹೃದ್ಯವಾದ ಗದ್ಯದಲ್ಲಿ ಪಾರ್ಸಿ ಮತ್ತು ಅರಬ್ಬಿ ಭಾಷೆಯಲ್ಲಿ ಮೂಡಿ ಬಂದರೆ, ಶರಣರ ಅನುಭಾವ ಸಾಹಿತ್ಯ, ಗದ್ಯ–ಪದ್ಯಗಳ ನಡುವಣ ವಚನ ರೂಪದಲ್ಲಿ ಕನ್ನಡದಲ್ಲಿ ಮೈದಳೆಯಿತು. ಇಬ್ಬರೂ ಅನುಭಾವಿಗಳಿಂದ ಆಯಾ ಭಾಷೆಗಳು ದೇವವಾಣಿಯಾಗಿ ಜನವಾಣಿಯಾಗಿ ಮೆರೆದವು.

ಸಾಧನಾಪಥದಲ್ಲಿ ಸೂಫಿಗಳಿಗೂ ಶರಣರಿಗೂ ಅಂತರವೂ ಇದೆ. ಶರಣರ ಸಾಧನಾ ಪಥ ಧಾರ್ಮಿಕ–ಸಾಮಾಜಿಕ–ಆರ್ಥಿಕ ರಂಗದಲ್ಲಿ ವ್ಯಾಪಕವಾದ ಕಾರ್ಯಕ್ಷೇತ್ರವನ್ನೊಳಗೊಂಡಿತ್ತು. ಅವರ ಕಾಯಕ–ದಾಸೋಹ ವಿಚಾರ ಅರ್ಥಶಾಸ್ತ್ರಕ್ಕೆ ಬಹು ದೊಡ್ಡ ಕೊಡುಗೆ. ಸೂಫಿಗಳ

ಕಾರ್ಯಕ್ಷೇತ್ರ ಸೀಮಿತವಾಗಿದ್ದು ಕೇವಲ ಸಾಧನೆ–ಭಜನೆಗಳಲ್ಲಿ ಅದು ಸಾಗಿತ್ತು. ಕಾಯಕ ನಿಷ್ಠೆ ಶರಣರಲ್ಲಿ ಕಂಡುಬರುವಂತೇ ಸೂಫಿಗಳಿಲ್ಲಿ ಆದರ ನಿಷ್ಠೆ ಅಷ್ಟಾಗಿ ಕಂಡುಬರುವುದಿಲ್ಲ. ಶರಣರು ಕಾಯಕ–ಜ್ಞಾನ ಆರಾಧನೆ ಗಳನ್ನು ಜೊತೆ ಜೊತೆಯಲ್ಲಿಯೇ ಸಾಧಿಸಿದರು. ಸೂಫಿಗಳು ಜ್ಞಾನ ಆರಾಧನೆ ಯನ್ನು ಮಾತ್ರ ಸಾಧಿಸಿದರು. ಶರಣರಿಗೆ ಕಾಯಕವೇ ಕೈಲಾಸವಾಗಿತ್ತು. ಸೂಫಿಗಳಿಗೆ ಅಲ್ಲಾಹನ ಸಾನಿಧ್ಯವೇ ಕೈಲಾಸವಾಗಿತ್ತು. ಶರಣರು ಸ್ವಾವಲಂಬಿ ಗಳು. ತಾವು ದುಡಿದಿದ್ದನ್ನೆ ಉಂಡರು. ಇತರರಿಗೂ ಉಣ್ಣಿಸಿದರು. ದುಡ್ಡು ಸ್ಥಾವರ–ದುಡಿಮೆ ಜಂಗಮವೆಂದರು. ''ಸ್ಥಾವರ ಕ್ಕಳಿವುಂಟು–ಜಂಗಮಕ್ಕಳಿ ವಿಲ್ಲ'' ಎಂಬುದು ಅವರ ದೃಢವಾದ ನಿಲುವು. ಸೂಫಿಗಳು (ಕೆಲವರು ಸನ್ಯಾಸಿಗಳು) ಆರ್ಥಿಕವಾಗಿ ಪರಾವಲಂಬಿಗಳಾಗಿದ್ದರು. ಹೀಗಾಗಿ ಅವರಲ್ಲಿ ಕೆಲವರು ಭಿಕ್ಷುಕರಾಗಿದ್ದರು. ಸನ್ಯಾಸಿ ಸೂಫಿಗಳು ದೇವರಲ್ಲಿ ಅತಿಯಾಗಿ ನಂಬಿಕೆ ಇಟ್ಟು ದುಡಿಯದೆ ಕೊನೆಗೆ ಭಿಕ್ಷಕ್ಕೂ ಹೋಗದೆ ಆಹಾರ ತನ್ನಷ್ಟಕ್ಕೆ ತಾನೇ ಅಲ್ಲಾ ಕೊಡುತ್ತಾನೆಂದು ಸುಮ್ಮನೆ ಕುಳಿತವರಿದ್ದರು. ಈ ಭಾವನೆ ಬರಬರುತ್ತಾ ನಿರುದ್ಯೋಗಕ್ಕೂ ಸೋಮಾರಿತನಕ್ಕೂ ಇಳಿದುಬಿಟ್ಟಿತು.

ಶರಣರ ಅನುಭಾವ ಮಂಟಪದಂತೆ ಸೂಫಿಗಳ ಧರ್ಮಪ್ರಸಂಗ ನಡೆಯುತ್ತಿದ್ದರೂ ಅನುಭವ ಮಂಟಪದ ವ್ಯವಸ್ಥೆ ಹಾಗೂ ಮುಕ್ತ ಮನಸ್ಸಿನ ಚರ್ಚೆ ಅಲ್ಲಿ ನಡೆಯುತ್ತಿರಲಿಲ್ಲ. ಶರಣರು ''ಅಲ್ಲಮ'' ನನ್ನ ಗುರುವೆಂದು ಭಾವಿಸಿದ್ದರೆ, ಸೂಫಿಗಳು ''ಅಲೀ''ಯನ್ನು ಗುರುವೆಂದು ಭಾವಿಸುತ್ತಾರೆ. ಸೂಫೀ ತತ್ತ್ವಗಳಿಗೆ ಮಾರುಹೋಗಿ ಅನೇಕ ಜನರು ಅರಬ್–ಇರಾನ್–ಚಾನಾ–ಸಿರಿಯಾ–ಈಜಿಪ್ತ್‌ನಿಂದ ಬರುತ್ತಾರೆ. ಹೀಗೆ ಸೂಫೀ ಧರ್ಮ ಅಂತರ್‌ರಾಷ್ಟ್ರೀಯ ರಂಗದಲ್ಲಿ ಪ್ರಚಾರವನ್ನು ಪಡೆಯಿತು. ಶರಣ ತತ್ತ್ವಗಳಿಗೆ ಮಾರು ಹೋಗಿ ಗುಜರಾತ್–ಆಂಧ್ರ–ಕಾಶ್ಮೀರ– ತಮಿಳು ನಾಡುಗಳಿಂದ ಜನರು ಬಂದು ಶರಣರಾದರು. ಆದರೆ ದುರ್ದೈವದಿಂದ ಶರಣರ ತತ್ತ್ವ ಭಾರತದ ಗಡಿಯನ್ನು ದಾಟಲಿಲ್ಲ. ಅದರಲ್ಲೂ ಕರ್ನಾಟಕದ ಗಡಿಯನ್ನೂ ಅದು ದಾಟಲಿಲ್ಲ ಎಂಬುದು ಸತ್ಯಸಂಗತಿ. ಕಾರಣ ಭಾಷೆಯ ತೊಡಕು, ಸ್ವಾಭಿಮಾನ ಶೂನ್ಯತೆ ಎಂದು ತೋರುತ್ತದೆ. ಹೀಗೆ ಸೂಫಿಗಳಲ್ಲೂ ಶರಣರಲ್ಲೂ ಅನೇಕ ಸಾಮ್ಯ–ಅಂತರಗಳನ್ನು ಗುರ್ತಿಸಿದರೂ ಈ ಎಲ್ಲಾ

ಅನುಭಾವಿಗಳ ಉದ್ದೇಶ ಲೋಕಕಲ್ಯಾಣ, ಸಕಲ ಜೀವಿಗಳಿಗೂ ಲೇಸನ್ನೇ ಬಯಸುದಾಗಿತ್ತು. ಆ ಬಯಕೆಯಲ್ಲಿ ಆತ್ಮ ಕಲ್ಯಾಣವೂ ಅಡಗಿತ್ತು.

## ಸಹಾಯಕ ಸಾಹಿತ್ಯ

೧. ಇಸ್ಲಾಂ ಸಂಸ್ಕೃತಿ : ಅನು : ಬಿ.ಎಂ. ಶ್ರೀಕಂಠಯ್ಯ

೨. ಸೂಫಿ ಪ್ರೇಮದರ್ಶನ : ಮ.ಸು. ಕೃಷ್ಣಮೂರ್ತಿ

೩. ಸೂಫಿ ಮತ್ತು ಶರಣರ ಅನುಭಾವ ಪಥ : ಷಣ್ಮುಖಯ್ಯ ಅಕ್ಕೂರಮಠ

೪. ಯುಗಯಾತ್ರೀ ಭಾರತೀಯ ಸಂಸ್ಕೃತಿ (ನ.ಸಂ)
ಸಂ|| ಹರಿದಾಸ ಭಟ್ಟಾಚಾರ್ಯ

೫. ಜಲಾಲುದ್ದೀನ್ ರೂಮಿ : ಅಬ್ದುಲ್ ಮಜೀದ್ ಖಾನ್

೬. ಉತ್ತರೀಭಾರತ ಕಿ ಸಂತ ಪರಂಪರಾ (ಹಿಂದಿ) : ಪರಶುರಾಮ ಚತುರ್ವೇದಿ

೭. ಸಿದ್ಧಸಾಹಿತ್ಯ (ಹಿಂದಿ) : ಡಾ. ಧರ್ಮವೀರ ಭಾರತೀ

೮. ಭಕ್ತಿಸಾಹಿತ್ಯ (ಹಿಂದಿ) : ಡಾ. ಹರವಂತ್ ಲಾಲ್‌ಶರ್ಮ

೯. ಮಾನವ ಸಮಾಜ (ಹಿಂದಿ) : ರಾಹುಲ ಸಾಂಕೃತ್ಯಾಯನ

೧೦. ರೆವಲ್ಯುಷನ್ ಆಫ್ ಮಿಸ್ಟಿಕ್ಸ್ (ಇಂಗ್ಲೀಷ್) : ಡಾ|| ಜಿ. ಪಿ. ಸ್ಕಾಟೆನ್

೧೧. ಇಸ್ಲಾಂ ಧರ್ಮ ಕ್ಯಾಕಹತಾ ಹೈ? (ಹಿಂದಿ) : ಶ್ರೀ ಕೃಷ್ಣದತ್ತ ಭಟ್ಟ

೧೨. ಸೂಫೀಜಮಂ (ಇಂಗ್ಲೀಷ್) : ಎ.ಜೆ. ಆರ್‌ಬೆರ್ರಿ.



## ಕಾಯಕ - ದಾಸೋಹ ತತ್ತ್ವಗಳಲ್ಲಿರುವ ನೈತಿಕ ಮೌಲ್ಯಗಳು

ನಾವು ವಾಸಿಸುತ್ತಿರುವ ಭೂಮಿ, ಸೂರ್ಯನ ಸುತ್ತ ಸುತ್ತುತ್ತಿದೆ, ಎನ್ನುವುದು ವೈಜ್ಞಾನಿಕ ಸತ್ಯವಾಗಿರುವಂತೆ, ಭೂಮಿಯ ಮೇಲೆ ವಾಸಿಸುತ್ತಿರುವ ನಾವು, ಹಣದ ಸುತ್ತ ಸುತ್ತುತ್ತೇವೆ ಎನ್ನುವುದು ವಾಸ್ತವಿಕ ಸತ್ಯವಾಗಿದೆ. ಹಣವಿದ್ದರೆ ದೇವರನ್ನು ಕೂಡಾ ಅಲುಗಿಸಬಹುದು; ಹಣವಿಲ್ಲದಿದ್ದರೆ ಮನುಷ್ಯನನ್ನು ಕೂಡಾ ಅಲುಗಿಸಲಿಕ್ಕಾಗುವುದಿಲ್ಲ. ನಮಗೆ ಆಶೆ ಆಕಾಶದಷ್ಟು ಎತ್ತರವಿದ್ದರೂ, ಅದನ್ನು ಹತ್ತುವುದಕ್ಕೆ ಹಣದ ಏಣಿ ಬೇಕು. ಬಲ್ಲವರೆಲ್ಲ ಏನೇ ಹೇಳಲಿ, ನಗದು ಹಣವೇ ಮಾನವನ ಅಸ್ತಿತ್ವ. ಅರ್ಥಃ ಬಹಿಶ್ಚರ ಪ್ರಾಣಃ ಎನ್ನುತ್ತಾನೆ ಕೌಟಿಲ್ಯ. ಅಂದರೆ ಹಣ ಹೊರಗೆ ಸಂಚರಿಸುವ ಪ್ರಾಣ. ''ಹಣವಿಲ್ಲದವ ಹೆಣಕ್ಕಿಂತ ಕಡೆ'', ''ಅರ್ಥವಿಲ್ಲದವನ ಬಾಳು ವ್ಯರ್ಥ'', ''ಕಾಸಿದ್ದರೆ ಕೈಲಾಸ'', ''ದುಡ್ಡೇ ದೊಡ್ಡಪ್ಪ'' ಎನ್ನುವ ಗಾದೆ ಮಾತುಗಳು ಹಣದ ಮಹತ್ವವನ್ನು ಸಾರಿ ಹೇಳುತ್ತವೆ. ಹೀಗೆ ಬಲ್ಲವರು ಹಣದ ಮಹತ್ತ್ವವನ್ನು ನಾನಾ ವಿಧವಾಗಿ ಹೇಳುತ್ತಾರೆ. ಮನುಷ್ಯನಿಗೆ ಹಣ ಬೇಕು ನಿಜ. ಆದರೆ ಅದು ಮನುಷ್ಯನ ಎಲ್ಲ ಸಮಸ್ಯೆಗಳನ್ನು ಬಗೆಹರಿಸಲಾರದು, ಅದಕ್ಕೂ ಒಂದು ಮಿತಿ ಇದೆ. ಆದರೂ ನಮ್ಮ ಬದುಕಿನ ವ್ಯವಹಾರಕ್ಕೆ ಅನಿವಾರ್ಯ ಸಾಧನ ಎನ್ನುವ ಮಾತನ್ನು ಅಲ್ಲಗಳೆಯುವಂತಿಲ್ಲ. ಹಣವನ್ನು ಹೀಯಾಳಿಸಿ ಮಾತನಾಡುವವರಲ್ಲಿ ನೂರಕ್ಕೆ ನೂರು ಜನ ಹೆಚ್ಚಾಗಿ ಹಣ ಕಾಣದವರೇ ಎನ್ನುವ ಮಾತೂ ನಿಜ. ಹಣ ದೇವರೆಂದು, ನಮ್ಮ ಬದುಕಿಗೆ ನೀರು–ಗಾಳಿ–ಬೆಳಕುಗಳಂತೆ ಮೂಲಾಧಾರವೆಂದು ಅದನ್ನು ಸಂಪಾದಿಸುವುದು ಒಳ್ಳೆಯದೇ, ಆದರೆ ಹಣ ಗಳಿಸುವ ಹವ್ಯಾಸದಲ್ಲಿ ಹಣದಿಂದ ಕೊಳ್ಳಲಿಕ್ಕೆ ಬಾರದ ಜೀವನ ಮೌಲ್ಯಗಳು ಕಳೆದು ಹೋಗದಂತೆ ಎಚ್ಚರಿಸಬೇಕು. ಮತ್ತೆ ನಮ್ಮ ಜೀವನದ ಅವಶ್ಯಕತೆಗೆ ಹಣದ ಅಗತ್ಯವೆಷ್ಟು ಎನ್ನುವ ವಿವೇಕದ ಎಚ್ಚರ ಬೇಕಾಗುತ್ತದೆ.

ನಮ್ಮ ಬದುಕಿಗೆ ಆಧಾರ ಹಾಗೂ ಅನಿವಾರ್ಯವಾದ, ಹಣದ ಸಂಪಾದನೆಗೆ ನ್ಯಾಯ, ನೀತಿ–ನಿಯಮಗಳಿರಬೇಕು. ನಮ್ಮ ಪ್ರಾಚೀನರು ಧರ್ಮ–ಅರ್ಥ–ಕಾಮ–ಮೋಕ್ಷಗಳೆಂಬ ಚತುರ್ವಿಧದ ಪುರುಷಾರ್ಥಗಳನ್ನು ಹೇಳಿದ್ದಾರೆ. ಅರ್ಥ–ಕಾಮ–ಮೋಕ್ಷಗಳು ಧರ್ಮದ ಮಾರ್ಗದಲ್ಲಿಯೇ ನಡೆಯಬೇಕು. ಇಲ್ಲವಾದರೆ ಅವುಗಳಿಗೆ ಬೆಲೆಬರುವುದಿಲ್ಲ. ''ಜೇಷ್ಠ ಭ್ರಾತ್ರಾವಮಾನೇನ ತ್ರಯೋ ಕುಪ್ಯಂತಿ ಸಹೋದರಾಃ'' ಎನ್ನುವ ಮಾತಿದೆ. ಹಿರಿಯ ಅಣ್ಣನಿಗೆ (ಧರ್ಮ) ಅವಮಾನವಾದರೆ ಉಳಿದ ಮೂರು ಜನ ಸಹೋದರರಿಗೂ ಕೋಪ ಬರುತ್ತದೆ ಎಂದು. ಆದರೆ ಧರ್ಮದ ಮಾರ್ಗದಲ್ಲಿ, ಧರ್ಮಕ್ಕೆ ಅವಮಾನವಾಗದ ರೀತಿಯಲ್ಲಿ ಅರ್ಥ–ಕಾಮ–ಮೋಕ್ಷಗಳು ಸಾಗಬೇಕೆಂದು ನಮ್ಮ ಸಂಸ್ಕೃತಿ.

ಜಾಗತಿಕ ಭಕ್ತಿ ಪಂಥಗಳ ಅಧ್ಯಯನ ಮಾಡಿದಾಗ ಕರ್ನಾಟಕದಲ್ಲಿ ೧೨ನೇ ಶತಮಾನದಲ್ಲಿ ನಡೆದ ಶರಣರ ವಿಚಾರದ ಬೆಳಕಿನಲ್ಲಿ ಹೊಳೆದ ಕಾಯಕ ಹಾಗೂ ದಾಸೋಹ ತತ್ತ್ವಗಳು, ಜೀವನ ಮೌಲ್ಯದ ಮುತ್ತು–ರತ್ನಗಳು. ಮನುಷ್ಯನ ಬದುಕಿಗೆ ಆಸರೆಯಾದ ಹಣವನ್ನ ಸಂಪಾದಿಸುವ ವಿಧಾನ ಹೇಗೆ ? ಅದರ ರೀತಿ–ನೀತಿಗಳೇನು? ಮಾನದಂಡ ಯಾವುದು ? ಸಂಪಾದನೆಯ ಸದ್ವಿನಿಯೋಗ ಹೇಗೆ ? ಇದರಿಂದ ವ್ಯಕ್ತಿ–ಸಮಾಜ–ರಾಷ್ಟ್ರಕ್ಕೆ ಕಲ್ಯಾಣವಾಗುವ ಹಾದಿ ಯಾವುದು ? ಎಂದು ಅನುಭವ ಮಂಟಪದಲ್ಲಿ ಶರಣರ ವಿಚಾರದ ಮಂಥನದ ಫಲವಾಗಿ ಕಾಯಕ–ದಾಸೋಹ ತತ್ತ್ವಗಳೆಂಬ ನವನೀತ ಮೂಡಿ ಬಂದಿತು.

ಹಣದ ನ್ಯಾಯವಾದ ಗಳಿಕೆ ಹಾಗೂ ನ್ಯಾಯವಾದ ಬಳಕೆಗಳ ನೀತಿ – ನಿಯಮಗಳನ್ನು ತಿಳಿಸುವ ತತ್ತ್ವಗಳೇ ಕಾಯಕ–ದಾಸೋಹ ತತ್ತ್ವಗಳು. ಇವು ಅರ್ಥಪ್ರಪಂಚದ ಆದರ್ಶ ತತ್ತ್ವಗಳು ಮತ್ತು ಅರ್ಥಶಾಸ್ತ್ರದ ಅರ್ಥಪೂರ್ಣ ಸೂತ್ರಗಳು.

ಹಣದ ಸಂಪಾದನೆಗೆ ಯಾವುದಾದರೊಂದು ಕಾಯಕ ಬೇಕೇಬೇಕು. ಬದುಕಿಗೆ ಊರುಗೋಲು ಕಾಯಕ, ಕಾಯಕದಿಂದ ಸಂಪಾದನೆ, ಸಂಪಾದನೆಯಿಂದ ಜೀವನ ನಿರ್ವಹಣೆ ಇವು ಒಂದಕ್ಕೊಂದು ಸಂಬಂಧ. ದುಡಿತವೇ ದುಡ್ಡಿನ ತಾಯಿ, ದುಡ್ಡು ಸ್ಥಾವರ, ದುಡಿಮೆ ಜಂಗಮ, ಸ್ಥಾವರಕ್ಕಳಿವುಂಟು

ಜಂಗಮಕ್ಕಳಿವಿಲ್ಲ ಎನ್ನುವ ಮಾತುಗಳು ದುಡಿತಕ್ಕೂ ದುಡ್ಡಿಗೂ, ಕಾಯಕಕ್ಕೂ ಕಾಸಿಗೂ ಅನ್ಯೋನ್ಯ ಸಂಬಂಧವನ್ನು ಸೂಚಿಸುತ್ತವೆ. ಕಾಯಕ ಎನ್ನುವ ಶಬ್ದ ಮೊದಲು, ದೇಹಕ್ಕೆ ಸಂಬಂಧಪಟ್ಟ ಪರಿಶ್ರಮ ಅನ್ನುವ ಸೀಮಿತ ಅರ್ಥದಲ್ಲಿದ್ದು ಅನಂತರ ಅದು ಮಾನಸಿಕ, ಬೌದ್ಧಿಕ ಹಾಗೂ ಮಾನವನ ಎಲ್ಲ ಕ್ರಿಯಾ ಪ್ರಕ್ರಿಯೆಗೂ ಅನ್ವಯವಾದಂತೆ ತೋರುತ್ತದೆ. ಯಾವುದೇ ಕ್ರಿಯೆಯಲ್ಲಿ ಶುದ್ಧತೆ, ಪ್ರಾಮಾಣಿಕತನವಿರಬೇಕು ಆಗ ಅದು ಸತ್ಯ ಶುದ್ಧ ಕಾಯಕವಾಗುತ್ತದೆ ಎನ್ನುತ್ತಾರೆ ಶರಣರು. ಶರಣರ ಕಾಯಕ ದಾಸೋಹ ತತ್ತ್ವಗಳು ಆರ್ಥಿಕ ಜೀವನಕ್ಕೆ ಹೊಸ ತಿರುವು ನೀಡಿದವು. ಸಮಾಜದ ಮೇಲು–ಕೀಳು ಭಾವನೆಗಳಿಗೆ, ಜಾತಿಗಳು ಕಾರಣವಾಗಿದ್ದವು. ಈ ಜಾತಿಯ ಕಲ್ಪನೆ ಉದ್ಯೋಗ ಮೂಲದಿಂದ ಬಂದಿತ್ತು. ''ವೃತ್ತಿ ವ್ಯತ್ಯಾಸಗಳು ಹೆಪ್ಪುಗಟ್ಟಿ ಜಾತಿಗಳಾದವು'' ಎನ್ನುವ ಮಾತನ್ನು ಡಾ|| ರಾಧಾಕೃಷ್ಣನ್‌ರು ತಿಳಿಸುತ್ತಾರೆ. ಜಾತಿಗಳಲ್ಲಿ ಮೇಲು–ಕೀಳು ಕಲ್ಪನೆಗಳಿರುವಂತೆ, ಉದ್ಯೋಗದಲ್ಲೂ ಮೇಲು–ಕೀಳು ಭಾವನೆಗಳು ಅಂಟಿಕೊಂಡು ಬಂದಿದ್ದವು. ಸಮಾಜದ ಈ ಅಸಮಾನತೆಯನ್ನು ಹೋಗಲಾಡಿಸಲು ಶರಣರು ಕಾಯಕವೆಂಬ ಆರ್ಥಿಕ ಹಾಗೂ ಆಧ್ಯಾತ್ಮಿಕ ಕಲ್ಪನೆಯ ಮೂಲಕ ದುಡಿಮೆಗೆ ಗೌರವಭಾವನೆ ಬರುವಂತೆ ಮಾಡಿದರು.

ವ್ಯಕ್ತಿ ಸೋಮಾರಿಯಾಗಿ, ಪರೋಪಜೀವಿಯಾಗಿ ಬದುಕವುದನ್ನು ಖಂಡಿಸಿದ ಶರಣರು ಕಾಯಕವಿಲ್ಲದೆ, ಬೇಡಿ ಉಣ್ಣುವುದನ್ನು ಅಲ್ಲಗಳೆದರು. ''ಭಕ್ತರ ಭವನಂಗಳ ಹೊಕ್ಕು ಕಾಯಕ ಸತ್ತು ಹಣ–ಹೊನ್ನ ಬೇಡಿಹೆನೆಂಬುದು ಕಷ್ಟವಲ್ಲವೇ ಸದ್ಭಕ್ತಂಗೆ'' ಎಂದು ಕೇಳುತ್ತಾರೆ. ಆದ್ದರಿಂದ ವ್ಯಕ್ತಿ ಸ್ವಾವಲಂಬಿಯಾಗಿ ಜೀವನೋಪಾಯಕ್ಕೆ ಬೇಕಾಗುವ ಹಣವನ್ನು ತಾನೇ ಸಂಪಾದಿಸಬೇಕು. ಹಾಗಲ್ಲದೆ ತನು–ಮನ ಬಳಲದ ಉದ್ದಂಡ ವೃತ್ತಿಯಲ್ಲಿ ಧನವ ಗಳಿಸಿ ಗುರುಲಿಂಗ ಜಂಗಮರಿಂದ ಮೆಚ್ಚುಗೆ ಪಡೆದರೂ, ಅವನು ಶ್ರೇಷ್ಠವ್ಯಕ್ತಿಯಾಗಲಾರ. ಅವನು ಸಂಪಾದಿಸಿದ ಹಣ, ನೀತಿ ಬಾಹಿರವಾಗುತ್ತದೆ. ಅವನು ಪರಧನ ಚೋರಕ, ಅವ ಪಾಪಿ, ಕೋಪಿ, ಪರಿಭ್ರಷ್ಟನೆಂದು ಚನ್ನಬಸವಣ್ಣನವರು ದೂಷಿಸುತ್ತಾರೆ. ತಾವು ಗಳಿಸಿದ ದುಡಿಮೆ ಇಲ್ಲದ ಸಂಪತ್ತು ನೀತಿಹೀನ ಹಣದಲ್ಲಿ ದೇವರಿಗೆ ಪಾಲು ಕೊಟ್ಟು

ದೇವರೊಂದಿಗೆ ರಾಜಿಯಾಗಬೇಕೆಂಬ ಅನೀತಿಯ ಅಡ್ಡಹಾದಿಯನ್ನು ಶರಣರು ತೀವ್ರ ಪ್ರತಿಭಟಿಸಿದ್ದಾರೆ. ಮಾಡುವ ವೃತ್ತಿಯಲ್ಲಿ ಪರಿಶುದ್ಧ ಮನಸ್ಸು, ನಿಷ್ಠೆ, ತಾದಾತ್ಮ್ಯ ಸಂಬಂಧ ಪ್ರಾಮಾಣಿಕತನ, ಅವಧಾನ ವಿರಬೇಕು. ಮತ್ತೊಂದು ಮಹತ್ವದ ಸಂಗತಿಯೆಂದರೆ ಮಾಡುವ ಕೆಲಸದಲ್ಲಿ ಕೇವಲ ಹಣ ಸಂಪಾದನೆಯ ಗುರಿ ಇರಬಾರದು. ಹಾಗೆ ಆದಾಗ, ವೃತ್ತಿಗೆ ತಾತ್ತ್ವಿಕ ಬುನಾದಿ ಹಾಗೂ ನೈತಿಕ ಹೊಣೆಗಾರಿಕೆ ಇಲ್ಲವಾಗುತ್ತದೆ. ಅಷ್ಟೆ ಅಲ್ಲ, ಕಾಯಕಕ್ಕೆ ಅಪಚಾರ ಮಾಡಿದಂತಾಗುತ್ತದೆ ಎಂಬುದು ವಚನಕಾರರ ನಿಲುವು. ಗೀತೆಯ ''ಕರ್ಮಣ್ಯೇವಾಧಿಕಾರಸ್ತೆ ಮಾ ಫಲೇಷು ಕದಾಚನ'' ಎನ್ನುವ ಅರ್ಥವೂ ಇದಕ್ಕೆ ಸಂವಾದಿಯಾಗುತ್ತದೆ. ಕರ್ತವ್ಯವನ್ನು ಕೇವಲ ಫಲದಾಸೆಗಾಗಿ ಮಾಡಬಾರದು. ನಿಷ್ಠೆಯಿಂದ ಕರ್ತವ್ಯ ನಿರ್ವಹಿಸಿದಲ್ಲಿ ಫಲ ಸಿಕ್ಕೇ ಸಿಗುತ್ತದೆ ಎನ್ನುವ ಭಾವ ಇಲ್ಲಿದೆ.

ಡಾಕ್ಟರ್ ಸ್ಯಾಮುಯಲ್ ಸ್ಮೈಲ್ಸ್‌ನ ಮಾತು ಕೇಳಿ : 'ಕಾಯಕ' ಕುರಿತು ಅವನ ಮಾತು ಅರ್ಥಪೂರ್ಣ. "Duty is based upon a sense of Justice, Justice is inspired by love which is the most perfect form of goodness." 'ಉದ್ಯೋಗ' ನ್ಯಾಯಪ್ರಜ್ಞೆಯ ತಳಹದಿಯ ಮೇಲಿರಬೇಕು. ನ್ಯಾಯವು ಪ್ರೀತಿಯಿಂದ ಪ್ರಭಾವಿತವಾಗಿರಬೇಕು. ಆಗ ಅದು ಪರಿಪೂರ್ಣ ಒಳ್ಳೆಯತನದ ವಿಧಾನವೆಂದು ತಿಳಿಸುತ್ತಾ ಮತ್ತೆ ಹೇಳುತ್ತಾನೆ : "Duty is closely allied to truthfullness of character and the dutiful man is above all things truthful in his words as in his action." ಸತ್ಯಶುದ್ಧ ನಡವಳಿಕೆಗೂ ಉದ್ಯೋಗಕ್ಕೂ ನಿಕಟ ಸಂಬಂಧವಿದೆ. ನಮ್ಮ ಶುದ್ಧ ಕಾಯಕಜೀವಿ ತನ್ನ ನಡೆನುಡಿಯಲ್ಲಿ ಶ್ರೇಷ್ಠನಾಗಿದ್ದಾನೆ ಎಂದು ಹೀಗೆ ಅವನ ಮಾತುಗಳು, ದುಡಿಮೆ ಹಾಗೂ ದುಡಿಯುವವನ ಬಗ್ಗೆ ಗೌರವ ಭಾವನೆಯನ್ನುಂಟು ಮಾಡುತ್ತವೆ. ಎಲ್ಲರೂ ಕಾಯಕವನ್ನು ಮಾಡಬೇಕು. ತಾನು ದೊಡ್ಡವನು, ಪೂಜ್ಯ, ತನಗೆ ಕಾಯಕವನ್ನು ಮಾಡುವ ಅವಶ್ಯಕತೆಯಿಲ್ಲ ಎನ್ನುವಂತಿಲ್ಲ ''ಗುರುವಾದರೂ ಕಾಯಕದಿಂದಲೇ ಮುಕ್ತಿ, ಲಿಂಗವಾದರೂ ಕಾಯಕದಿಂದಲೇ ಶಿಲೆಯ ಕುರುಹು ಹರಿವುದು, ಜಂಗಮವಾದರೂ ಕಾಯಕದಿಂದಲೇ ವೇಷದ ಪಾಶ

ಹರಿವುದು'' ಎನ್ನುವ ಚಂದಯ್ಯನ ಮಾತು ಅರ್ಥಪೂರ್ಣ. ಚಂದಯ್ಯ ಒಬ್ಬ ಕಾಯಕಯೋಗಿ. ಅವನ ಜೀವನದಲ್ಲಿ ನಡೆದ ಘಟನೆಯಲ್ಲಿ ಲಿಂಗಯ್ಯ ಮನುಷ್ಯ ರೂಪ ತಾಳಿ ಕಾಯಕ ಮಾಡುವ ಕಲ್ಪನೆ ಅದ್ಭುತವಾದದ್ದು. ದೇವರಿಗೆ ಕಾಯಕ ಬಿಟ್ಟಿದ್ದಲ್ಲ ಎನ್ನುವ ನೈತಿಕವಾದ ಇಲ್ಲಿದೆ. ವಚನಕಾರರಲ್ಲಿ ಆಯ್ದಕ್ಕಿ ಮಾರಯ್ಯ ಅಷ್ಟು ಪ್ರಸಿದ್ಧನಲ್ಲದಿದ್ದರೂ ಅವನು ನುಡಿದ ಮಾತು 'ಕಾಯಕವೇ ಕೈಲಾಸ'' ಭೂಲೋಕದಿಂದ ಕೈಲಾಸದವರೆಗೂ ಪ್ರಸಿದ್ಧ ವಾಗಿದೆ. ಆತನು ''ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು'' ಎಂದು ದೇವರಿಗೆ, ಕಡ್ಡಾಯವಾಗಿ 'ಕಾಯಕ' ವಿಧಿಸಿದ್ದಾನೆ.

'ಕಾಯಕ' ಜೀವನೋಪಾಯ ಹಾಗೂ ಆಧ್ಯಾತ್ಮಿಕ ಸಿದ್ಧಿಗೆ ಸಾಧನ ವಾಗಿದೆ. ದುಡಿಮೆ–ಆರಾಧನೆ ಜೊತೆಜೊತೆಗೆ ಸಾಗಬೇಕು. ಕಾಯಕದಿಂದ ಬರುವ ಫಲದಷ್ಟೇ ಅದನ್ನು ಸತ್ಯ ಶುದ್ಧವಾಗಿ ಸಾಧಿಸುವ ಸಾಧನವೂ ಪವಿತ್ರವಾಗಿರಬೇಕು. (Means and ends are both important) ಇವು ಕಾಯಕದ ನೈತಿಕ ಮೌಲ್ಯಗಳು. ಕಾಯಕದಲ್ಲಿ ಮೇಲು–ಕೀಳು ಎಂಬ ಕುಬ್ಜ ಕಲ್ಪನೆ ಸಲ್ಲದು. ಎಲ್ಲವೂ ಸಮಾನವೆಂದೇ ಶರಣರ ನೈತಿಕ ನಿಲುವು. ''ಆವ ಕಾಯಕ ಮಾಡಿದರೂ ಒಂದೇ ಕಾಯಕವಯ್ಯಾ'' ಎಂದು ಹೇಳುವ ಶರಣೆ ಗಂಗಮ್ಮನ ಮಾತು ಗಮನಾರ್ಹವಾಗಿದೆ. ''ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ'' ಎಂದು ಬಸವಣ್ಣನವರ ವಚನದಲ್ಲಿ ಮಾನಸಿಕ, ದೈಹಿಕ ಹಾಗೂ ಬೌದ್ಧಿಕ ಶ್ರಮದಲ್ಲಿ ಮೇಲು–ಕೀಳುಗಳಿಲ್ಲ ಎನ್ನುವ ಅಭಿಪ್ರಾಯ ವ್ಯಕ್ತವಾಗಿದೆ. ಕಲ್ಯಾಣದಲ್ಲಿ ಬಸವಣ್ಣನವರ ಬೌದ್ಧಿಕ ಮಂತ್ರಿ ಕೆಲಸವಾಗಲಿ, ಮೋಳಿಗೆ ಮಾರಯ್ಯನ ಸೌದೆ ಮಾರಿ ಜೀವಿಸುವ ಕ್ರಿಯೆಯಲ್ಲಾಗಲಿ ಯಾವ ವ್ಯತ್ಯಾಸ ವಿಲ್ಲವೆಂಬುದೇ, ಕಾಯಕದ ಬಗ್ಗೆ ಶರಣರ ನೈತಿಕ ನಿಲುವು. ಹೊಟ್ಟೆಯ ಪಾಡಿಗಾಗಿ, ಹಣಕ್ಕಾಗಿ ಮಾಡುವ ಕೇವಲ ಕೆಲಸವಲ್ಲ, ಕಾಯಕ. ಇವುಗಳನ್ನು ಮೀರಿ ಆಧ್ಯಾತ್ಮಿಕ ದೃಷ್ಟಿಯ ಆರಾಧನೆಯಾಗಿತ್ತು, ಅಷ್ಟೇ ಅಲ್ಲ ಕಾಯಕವೇ ಪೂಜೆಯಾಗಿತ್ತು; ದೇವರನ್ನು ಕಾಣುವ ಸಾಧನವಾಗಿತ್ತು.

ಕಾಯಕದ ಬಗ್ಗೆ ಶರಣರು ಚಿಂತನೆ ಮಾಡಿದ ನೈತಿಕ ಮೌಲ್ಯಗಳು ಹೀಗಿವೆ :

೧. ಸೋಮಾರಿತನ ನಿಷಿದ್ಧ. ೨. ಭಿಕ್ಷಾ ವೃತ್ತಿಯ ನಿರಾಕರಣೆ. ೩. ದೈಹಿಕ ಶ್ರಮದ ಬಗ್ಗೆ ಗೌರವ. ೪. ಸತ್ಯಶುದ್ಧ ಕಾಯಕಕ್ಕೆ ಪ್ರಾಶಸ್ತ್ಯ ೫. ಆಶೆ ಮಾಡದೆ ಶ್ರಮಕ್ಕೆ ತಕ್ಕ ಫಲ, ಅಸಂಗ್ರಹ. ೬. ಕಾಯಕದಲ್ಲಿ ಸಮಾನ ಗೌರವ. ೭. ಕಾಯಕದಲ್ಲಿ ಆಧ್ಯಾತ್ಮಿಕ ದೃಷ್ಟಿಕೋನ. ೮. ನ್ಯಾಯಮಾರ್ಗದಲ್ಲಿ ಗಳಿಕೆ ಮತ್ತು ಬಳಕೆ; ಮಿತವ್ಯಯ. ೯. ಸರಳ ಜೀವನ ಪ್ರಾಮಾಣಿಕ ಬದುಕು. ೧೦. ಅನೈತಿಕ ಸಂಪಾದನೆ ಮಾಡದಿರುವುದು ಇತ್ಯಾದಿ. ಇವು ಕಾಯಕ–ದಾಸೋಹ ತತ್ತ್ವಗಳ, ನೀತಿ ಸೂತ್ರಗಳು ಅಷ್ಟೇ ಅಲ್ಲ; ನಮ್ಮ ಬದುಕಿನಲ್ಲಿ ನಿತ್ಯವೂ ಆಚರಿಸಲೇಬೇಕಾದ ನೈತಿಕ ಮೌಲ್ಯಗಳು. ಅರ್ಥಶಾಸ್ತ್ರವನ್ನು ಬರೆದ ಕೌಟಿಲ್ಯ ಅರ್ಥವೆಂದರೆ ಅವನ ದೃಷ್ಟಿಯಲ್ಲಿ 'ಹಣವಲ್ಲ', 'ಭೂಮಿ'. ಕಾರಣ ಎಲ್ಲಾ ಉತ್ಪಾದನೆಗಳ ಮೂಲ ಭೂಮಿಯೇ ಆಗಿರುವುದರಿಂದ ಅರ್ಥಕ್ಕೆ ಪರ್ಯಾಯ ನಾಮ. ಪೃಥ್ವಿಯಲ್ಲಿಯೇ ಮನುಷ್ಯ ಕಾಯಕದಿಂದ ಸನ್ಮಾರ್ಗದತ್ತ ಸಾಗಬೇಕು. ಸತ್ಯಶುದ್ಧ ಕಾಯಕದಿಂದ ದ್ರವ್ಯದಲ್ಲಿ ಚಿತ್ತ ವಿಚ್ಛಿಂದವಾಗದಿರಬೇಕು. ಅಸಿವಾಗಲಿ, ಕೃಷಿಯಾಗಲಿ ಯಾಚಕ ವಾಣಿಜ್ಯ ಮಸಿಯಾಗಲಿ, ಮಾಡುವಲ್ಲಿ ಹುಸಿ ಇಲ್ಲದಿರಬೇಕು. ''ಮನ ಶುದ್ಧವಿಲ್ಲದವರಿಗೆ ದ್ರವ್ಯದ ಬಡತನವಲ್ಲದೆ ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು''. ಕಾಯಕದಲ್ಲಿ ಹುಸಿ ಇಲ್ಲದಿರಬೇಕು. ಬಂದ ಹಣದಲ್ಲಿ ಮನಸ್ಸು ಪಲ್ಲಟವಾಗಬಾರದು. ಇತ್ಯಾದಿ ಮಾತುಗಳಲ್ಲಿ ನೈತಿಕ ಮೌಲ್ಯಗಳು ತುಂಬಿ ತುಳುಕುತ್ತಿರುವುದನ್ನು ಕಾಣಬಹುದಾಗಿದೆ. ಕಾಯಕಕ್ಕೆ ತಕ್ಕ ಫಲ ; ಹೆಚ್ಚು ಬೇಡ, ಕಡಿಮೆಯೂ ಬೇಡ ಎನ್ನುತ್ತಾರೆ ಶರಣರು. ''ಹಾಗದ ಕಾಯಕವ ಮಾಡಿಕೊಂಡು ಹಣವಡ್ಡತಾ'' ಎಂಬಲ್ಲಿ ಸತ್ಯ ಕಾಯಕವುಂಟೇ ? ಎಂದು ಪ್ರಶ್ನಿಸುವಲ್ಲಿ, ಕೆಲಸಕ್ಕೆ ತಕ್ಕ ಫಲವನ್ನು ಮಾತ್ರ ಬಯಸಬೇಕೆನ್ನುವ ಧ್ವನಿ ಇದೆ. ಕಾಯಕದಿಂದ ಸಂಪಾದಿಸಿದ ಧನ ಗುರುಲಿಂಗಜಂಗಮಕ್ಕೆ ಮಾತ್ರ ಸಲ್ಲಬೇಕು. ''ಇಂದಿಂಗೆ, ನಾಳಿಂಗೆ'' ಎಂದು ಕೂಡಿಡುವ ಪ್ರವೃತ್ತಿ ಸಲ್ಲದು. ಅದು ಎಂಜಲು ಕೂಳಾದಿತು ಎಂದು ಶರಣರು ಎಚ್ಚರಿಸುತ್ತಾರೆ. ಒಸಿ ಕೂಳಿಗಾಗಿ ಅಂದಂದಿನ ಕಾಯಕ ಲೇಸು, 'ಇಂದಿಂಗೆ ನಾಳಿಂಗೆ ಎಂದು ಚಿಂತಿಸಲೇಕೆ ? ತಂದಿಕ್ಕುವ ಶಿವಂಗೆ ಬಡತನವೆ ?' ಎಂದು ಶರಣರ ಅಚಲ

ನಂಬಿಕೆ. ''ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದದ್ದು ಲಿಂಗಾರ್ಪಿತ. ದುರಾಸೆಯಿಂದ ಬಂದದ್ದು ಅನರ್ಪಿತ'' ಎಂಬುದು ಅವರ ನಿಷ್ಠೆ. ಒಂದು ದಿನ ಕಲ್ಯಾಣ ಬೀದಿಯಲ್ಲಿ ಆಯ್ದಕ್ಕಿ ಮಾರಯ್ಯ ದಿನಕ್ಕಿಂತಲೂ ಹೆಚ್ಚು ಅಕ್ಕಿ ತಂದುದು ಹೆಂಡತಿ ಲಕ್ಕಮ್ಮನಿಗೆ ಅಪರಾಧವಾಗಿ ಕಂಡಿತು, ಕೂಡಲೇ ಗಂಡನನ್ನು ಕೇಳುತ್ತಾಳೆ : ''ಒಮ್ಮನವ ಮೀರಿ ಇಮ್ಮನದಲ್ಲಿ ತಂದಿರಿ, ಇದು ಅಮರೇಶ್ವರ ಲಿಂಗಕ್ಕೆ ಸಲ್ಲದ ಬೋನ, ಇಂದೇಕೆ ಇಷ್ಟೊಂದು ಅಕ್ಕಿ ಎನ್ನಾಳ್ದ? 'ಆಸೆ' ಎಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೇ ಅಯ್ಯಾ ? ಈಸಕ್ಕಿಯಾಸೆ ನಿಮಗೇಕೆ ? ಈಶ್ವರನೊಪ್ಪ.'' ಈ ಲಕ್ಕಮ್ಮನ ವಚನ ಇಡೀ ವಚನ ಸಾಹಿತ್ಯದಲ್ಲಿ ಕಾಯಕಕ್ಕೆ ಬರೆದ ನೈತಿಕ ಮೌಲ್ಯದ ವ್ಯಾಖ್ಯಾನವಾಗಿದೆ.

ಇನ್ನೊಂದು ಪ್ರಸಂಗ ಹೀಗಿದೆ : ಒಂದು ದಿನ ಕಾಯಕಕ್ಕೆ ಹೋದ ಮೋಳಿಗೆ ಮಾರಯ್ಯನು ಮನೆಗೆ ಬರುವಷ್ಟರಲ್ಲಿ ಬಸವಣ್ಣನವರು ಮನೆಗೆ ಬಂದು ಆರೋಗಣೆ ಮುಗಿಸಿ, ದೇವರ ಮನೆಯಲ್ಲಿ ಎರಡು ಸಾವಿರ ಹೊನ್ನುಗಳ ಎರಡು ಜಾಳಿಗೆಗಳನ್ನು ಮರೆ ಮಾಡಿಟ್ಟು ಹೋಗಿದ್ದರು. ಮಧ್ಯಾಹ್ನ ಮನೆಗೆ ಬಂದು ಇದನ್ನು ಕಂಡ ಮಾರಯ್ಯ ಇದೇನು ? ಎಲ್ಲಿಂದ ಬಂದವು ? ಯಾರು ಕೊಟ್ಟರು? ಎಂದು ಪತ್ನಿ ಮಹಾದೇವಿಯನ್ನು ಕೇಳುತ್ತಾನೆ. ಆಕೆ ನಾನರಿಯೆ ಎನ್ನುತ್ತಾಳೆ. ಅಣ್ಣನವರೇ ಬಂದಿರಬೇಕು. ನಾವು ಬಣಗು ಭಕ್ತರೆಂದು ಹಣವನ್ನಿರಿಸಿ ಹೋಗಿರಬೇಕೆಂದು ಊಹಿಸುತ್ತಾನೆ. ಈ ಹೊಲೆ ಹಣ ನಮಗೇಕೆ ? ಶ್ರಮವಿಲ್ಲದ ಈ ಹಣ, ಅನಾಯಾಸವಾಗಿ ಬಂದ ಅನೈತಿಕ ಧನ ತಮಗೆ ಬೇಡವೆಂದು ತಿರಸ್ಕರಿಸುತ್ತಾನೆ. ''ದುಡಿಯಲಾಗ ದವರು ಒಡೆಯರಾಗಿದ್ದರೂ ಬಡವರೇ. ದುಡಿಯುವವರು ಬಡವರಾಗಿ ದ್ದರೂ ಒಡೆಯರೇ'' ಎಂದು ಹೇಳುವ ಅವನ ಮಾತು ಕಾಯಕ ತತ್ತ್ವಕ್ಕೆ ಬರೆದ ನೈತಿಕಭಾಷ್ಯವಾಗಿದೆ. ಕಾಯಕ ಕಾಯದ ಗುಣಗಳನ್ನು ಕಳೆದು ಮನದ ವಿಕಾರ ಮಾಣಿಸಿ, ಆತ್ಮದ ಐಸಿರಿಯನ್ನು ಒದಗಿಸುವ ದಿವ್ಯ ಸಾಧನ. ಅದು ಜೀವನೋಪಾಯ, ಸ್ವಾವಲಂಬನ ಸ್ವತಂತ್ರಗಳ ಸಂಗಮವೆಂದು ಕಾಯಕದ ವೈಶಿಷ್ಟ್ಯವನ್ನು ಸಾರಿದ್ದಾರೆ. ಇನ್ನು ಎರಡನೆಯ ತತ್ತ್ವ, ದಾಸೋಹ. ಕಾಯಕ–ದಾಸೋಹ ಈ ಅವಳಿ ತತ್ತ್ವಗಳು ಒಂದೇ ನಾಣ್ಯದ ಎರಡು ಮುಖಗಳು. ದಾಸೋಹವೆಂದರೆ ನಾನು ಶಿವನಿಗೆ ದಾಸ ಎಂಬ

ಭಾವನೆಯಿಂದ ಮಾಡುವ ಕ್ರಿಯೆ. ಕಾಯಕದಲ್ಲಿ ಗಳಿಕೆಯ ಮೌಲ್ಯ ವಿರುವಂತೆ ದಾಸೋಹದಲ್ಲಿ ಬಳಕೆಯ ಮೌಲ್ಯವಿದೆ. ಕಾಯಕದಿಂದ ಬಂದ ಸಂಪಾದನೆಯಲ್ಲಿ ಗುರು–ಲಿಂಗ–ಜಂಗಮರಿಗೂ ಅರ್ಪಿಸಬೇಕು. ನಿರ ಹಂಕಾರ ಭಾವನೆಯಿಂದ ಅರ್ಪಿಸಬೇಕೆಂದು ಶರಣರು ತಿಳಿಸುತ್ತಾರೆ. ವ್ಯಕ್ತಿ ತನ್ನ ಅಗತ್ಯಕ್ಕೆ ತಕ್ಕಷ್ಟು ಬಳಸಿಕೊಂಡು, ಮಿಕ್ಕದನ್ನು ಗುರು–ಜಂಗಮರಿಗೆ ಬಳಸಬೇಕು. ಇಲ್ಲಿ ಬಳಸುವ ಗಳಿಸುವ ಪ್ರಶ್ನೆಯೇ ಇಲ್ಲ. ಅಂದಿನ ಜಮಾ ಅಂದಿಗೆ ಖರ್ಚಾಗಬೇಕು. ಇದು ಶರಣರ ಕಡ್ಡಾಯದ ನೈತಿಕ ನಿಯಮ ವಾಗಿತ್ತು. ಸೋಹಂ ಎಂದರೆ ಅಂತರಂಗದ ಗರ್ವ, ಶಿವೋಹಂ ಎಂದರೆ ಬಹಿರಂಗದ ಅಹಂಕಾರ. ಈ ಉಭಯವಳಿದು ದಾಸೋಹಂ ಭಾವನೆ ಕರುಣಿಸಿ ಬದುಕಿಸು ಎಂದು ಶರಣರು ದೇವರನ್ನು ಬೇಡುವ ಮೂಲಕ, ದಾಸೋಹ ಶಬ್ದದ ಅರ್ಥಪೂರ್ಣ ವ್ಯಾಖ್ಯಾನ ಮಾಡುತ್ತಾರೆ. ವೀರಶೈವರಲ್ಲಿ ಲಿಂಗ (ದೈವ) ಗುರು (ಜ್ಞಾನಿ) ಜಂಗಮ (ಸಮಾಜ) ಎನ್ನುವ ವಿಶೇಷ ಅರ್ಥಗಳೂ ಇವೆ. ಇದರಲ್ಲಿ ಜಂಗಮ– ದಾಸೋಹ ಅತ್ಯಂತ ಕಠಿಣವೆಂದು ಶರಣರ ಅಭಿಪ್ರಾಯ. ಬಸವಣ್ಣನವರ ವಚನವೊಂದರಲ್ಲಿ ದಾಸೋಹ ಕರಕಷ್ಟವೆಂದು ದೃಷ್ಟಾಂತದೊಂದಿಗೆ ತಿಳಿಸುತ್ತಾರೆ :

ಲಿಂಗಪೂಜೆ ಮುಂಜಾವಿನ ಬಿಸಿಲು
ಅಂಗಕ್ಕೆ ಹಿತವೆನಿಸಿತ್ತಯ್ಯಾ
ಜಂಗಮ ದಾಸೋಹ ಮಧ್ಯಾಹ್ನದ ಬಿಸಿಲು
ಅಂಗಕ್ಕೆ ಕರಕಷ್ಟವಯ್ಯಾ

"ತನು–ಮನ ಬಳಲಿಸಿ ತಂದು ದಾಸೋಹ ಮಾಡುವ ಪರಮ ಸದ್ಭಕ್ತನ ಪಾದವ ತೋರಯ್ಯಾ ಎನಗೆ" ಎಂದು ಚನ್ನಬಸವಣ್ಣನವರು ಹೇಳುತ್ತಾ, ಸತ್ಯಶುದ್ಧ ಕಾಯಕದಿಂದ ಬಂದದ್ದನ್ನ ದಾಸೋಹ ಮಾಡುವವನೆ ಸದ್ಭಕ್ತ ಎನ್ನುತ್ತಾರೆ.

ಕಾಯಕವೆಂದು ಕಾಯವ ಬಳಲಿಸದೆ ತನು ಕರಗದೆ, ಮನ ನೋಯದೆ, ಬೇಡಿ ಕಾಡಿ ಮಾಡುವುದು ದಾಸೋಹವೆ ? ಎಂದು ಪ್ರಶ್ನಿಸುತ್ತಾನೆ ಶಿವಲೆಂಕ ಮಂಚಣ್ಣ. ಈ ಎಲ್ಲ ಶರಣರ ವಾಕ್ಯಗಳನ್ನು ಗಮನಿಸಿದಾಗ ಸತ್ಯಶುದ್ಧ ಕಾಯಕ ಎಲ್ಲರೂ ಮಾಡಬೇಕು, ನಿರಹಂಕಾರ

ಭಾವನೆಯಿಂದ 'ದಾಸೋಹ' ಮಾಡಬೇಕು. ಎಲ್ಲರೂ ದುಡಿಯಬೇಕು. ದುಡಿದವರಿಗೆ ಮಾತ್ರ ಬದುಕುವ ಹಕ್ಕಿದೆ. ನೀನು ಬದುಕು, ಇನ್ನೊಬ್ಬರಿಗೂ ಬದುಕಲು ಬಿಡು (Live and Let Live) ಎನ್ನುವ ನೈತಿಕ ಮೌಲ್ಯಗಳನ್ನು ಶರಣರು ಸಾರಿದರು.

''ಜಂಗಮ ದಾಸೋಹಕ್ಕೆ ಸತ್ಯಶುದ್ಧ ನಿಜ ಕಾಯಕದಿಂದ ನುಲಿಯ ಮಾಡಿ ಹಾಗಕ್ಕೆ ಮಾರಿ, ತಂದ ದ್ರವ್ಯದಿಂ ಪದಾರ್ಥಮಂ ತಂದು ಜಂಗಮಕ್ಕೆ ನೀಡಿ ತತ್‌ಪ್ರಸಾದಮಂ ಲಿಂಗ ಭೋಗೋಪಭೋಗಿಯಾಗಿರುತ್ತಿದ್ದ ನುಲಿಯ ಚಂದಯ್ಯ.'' ಈ ವಾಕ್ಯಗಳನ್ನು ಪರಿಭಾವಿಸಿದಾಗ ನುಲಿಯ ಚಂದಯ್ಯ ಕಾಯಕ–ದಾಸೋಹ ತತ್ತ್ವಗಳ ಆಚರಣೆಯಲ್ಲಿ ಆದರ್ಶವಾಗಿ ಕಾಣಿಸುತ್ತಾನೆ ಹಾಗೂ ಕಾಯಕ ದಾಸೋಹ ತತ್ತ್ವಗಳಿಗೆ ಉಜ್ವಲ ಉದಾಹರಣೆಯಾಗುತ್ತಾನೆ. ''ವೃತ್ತಿಯನ್ನು ತತ್ತ್ವಮಯ ಮಾಡಿದ ದುಡಿತವನ್ನು ದೇವಪೂಜೆಯನ್ನಾಗಿಸಿದ ಕರ್ಮ ನಿರ್ಮಳ ಮಾಡಿ ಧರ್ಮವನ್ನಾಗಿಸಿದ, ಪವಾಡ ಕಾಯಕದಲ್ಲಿ, ಅರ್ಥದ ಸಾರ್ಥಕತೆ ಇಲ್ಲದಿದ್ದರೆ, ಕಾಪಾಡುವ ಅರ್ಥವೇ ಕಾಡುವ ಶನಿಯಾಗುತ್ತದೆ. ಹಾಗಾಗದಂತೆ ನೋಡಿಕೊಳ್ಳಬೇಕೆಂದು'' ಕಾಯಕ–ದಾಸೋಹದ ಬಗ್ಗೆ ಅರ್ಥಪೂರ್ಣವಾಗಿ ಹೇಳಿದ್ದಾರೆ ಡಾ॥ ಸಿದ್ಧಯ್ಯ ಪುರಾಣಿಕರು.

ಎಂದಿನಿಂದ ಸಮಾಜದಲ್ಲಿ ಖಾಸಗಿ ಆಸ್ತಿಯ ಒಡೆತನ ಅಸ್ತಿತ್ವದಲ್ಲಿ ಬಂದಿತೋ ಅಂದಿನಿಂದ ಸಮಾಜದಲ್ಲಿ ಒಡೆಯ–ಸೇವಕರು, ಶ್ರೀಮಂತರು–ಬಡವರು ಎನ್ನುವ ವರ್ಗಭೇದ ಉಂಟಾಯಿತು. ಆಸ್ತಿವಂತರು ಬಡವರನ್ನು ದುಡಿಸಿಕೊಂಡು ಅವರ ಶ್ರಮದ ಬೆವರಿನ ನೀರಿನಲ್ಲಿ ಪನ್ನೀರೆಂದು ಸ್ನಾನ ಮಾಡಿದರು. Haves and Have nots ಉಳ್ಳವರು ಹಾಗೂ ಬಡವರ ಮಧ್ಯೆ ದ್ವೇಷ, ಅಸೂಯೆ, ಮತ್ಸರ ಭಾವನೆಗಳುಂಟಾದವು. ಸಮಾಜದ ಈ ಆರ್ಥಿಕ ಅಸಮತೋಲನವನ್ನು ನಿವಾರಿಸಲು ''ಸರ್ವರಿಗೆ ಸಮಪಾಲು ಸರ್ವರಿಗೂ ಸಮಬಾಳು'' ತತ್ತ್ವವನ್ನು ಕಾಯಕ–ದಾಸೋಹಗಳ ಮೂಲಕ ಶರಣರು ಸಾರಿದರು. ವರ್ಗಕಲಹ ನಿವಾರಿಸಲು ದಾಸೋಹ ತತ್ತ್ವ ಕಾರಣವಾಯಿತು. ವರ್ಣ ಕಲಹ ನಿವಾರಿಸುವಲ್ಲಿ ಕಾಯಕ ತತ್ತ್ವ ಕಾರಣವಾಯಿತು. ಈ ೨೦ ನೇ ಶತಮಾನದಲ್ಲಿ ಶ್ರಮವಿಲ್ಲದ ದುಡಿಮೆಯಿಂದ ದಿಡೀರನೆ ಶ್ರೀಮಂತ

ರಾಗಬೇಕೆಂದು ನಾ ಮುಂದೆ, ತಾ ಮುಂದೆ ಎಂದು, ಒಬ್ಬರ ಕಾಲು ಒಬ್ಬರು ತುಳಿಯುತ್ತಾ, ಒಬ್ಬರ ಕತ್ತು ಒಬ್ಬರು ಹಿಚಕುತ್ತಾ ಮುನ್ನುಗುತ್ತಿರುವ 'ಲಾಟರಿ' ರಾಜ್ಯದಲ್ಲಿ ಕೌನ್ ಬನೇಗಾ ಕರೋಡಪತಿ ? ಎನ್ನುವ ನಾಡಿನಲ್ಲಿ ಬದುಕುವ ಜನರಿಗೆ ಶರಣರ ಆರ್ಥಿಕವಾದಗಳು ಅದರ ನೈತಿಕ ಮೌಲ್ಯಗಳು ದಾರಿದೀಪವಾಗಬೇಕಾಗಿದೆ.

''ನೇಮದ ಕೂಲಿಯಂದಿನ ನಿತ್ಯ ನೇಮದಲ್ಲಿ ಸಂದಿರಬೇಕು. ನೇಮದ ಕೂಲಿಯನ್ನ ಬಿಟ್ಟು ಹೇಮದಾಸೆಗೆ, ಕಾಯಿಸಿ ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ ನಷ್ಟವಯ್ಯಾ'' ಎಂದು ನುಲಿಯ ಚಂದಯ್ಯನ ಮಾತಿನಲ್ಲಿ ದುಡಿಮಗೆ ತಕ್ಕ ಫಲವಿರಬೇಕು, ದುಡಿಮೆಗಿಂತ ಅಧಿಕ ಲಾಭಸಂಪಾದನೆಗೆ ಕಾಯಕ ತತ್ತ್ವ ಕಡು ವಿರೋಧವಾಗಿದೆ.

ಶ್ರಮಜೀವನ ನಿಸರ್ಗ ನಿಯಮ. ದುಡಿಮೆ ಇಲ್ಲದ ಅನ್ನ ಸಂಪಾದನೆ 'ಚೌರ್ಯ'ವೆಂದು ಎಲ್ಲ ಮಹಾನುಭಾವರೂ ಹೇಳಿದ್ದಾರೆ. ಶ್ರಮಜೀವನ, ಸ್ವಾತಂತ್ರ್ಯ ಹಾಗೂ ಸಮಾನತೆಗಳಿಗೆ ವೈರಿಯಾದ 'ಆಸ್ತಿ ಸಾಮ್ರಾಜ್ಯ'ವನ್ನು ಬುದ್ಧ, ಬಸವ, ಮಾರ್ಕ್ಸ್ ಮೊದಲಾದವರೆಲ್ಲ ಅಲ್ಲಗಳೆದಿದ್ದಾರೆ. ''ನಿನ್ನ ಬೆವರಿನಿಂದಲೇ ನಿನ್ನ ಆಹಾರವನ್ನು ಗಳಿಸಿಕೊ, ದುಡಿಯದವನು ತಿನ್ನಬಾರದು'' ಎಂದು ಬೈಬಲ್ ಹೇಳಿದರೆ ''ಶ್ರಮ ಜೀವನವೇ ನಿಜವಾದ ಯಜ್ಞ''ವೆಂದು ಗೀತೆ ಬೋಧಿಸುತ್ತದೆ. ''ಬೆವರು ಸುರಿಸಿ ಸಂಪಾದಿಸಿದ್ದೇ ಪವಿತ್ರವಾದ ಆಹಾರ, ಯಾಚಕ ವೃತ್ತಿಗಿಂತ ಕಾಡಿನಿಂದ ಸೌದೆ ತಂದು ಮಾರಿ ಜೀವನ ಸಂಪಾದನೆ ಮಾಡುವವನೆ ಅಲ್ಲಾನಿಗೆ ತೀರ ಹತ್ತಿರವಾದವನೆಂದೂ, ವ್ಯಾಪಾರದಲ್ಲಿ ವಂಚನೆ ಸಲ್ಲದೆಂದೂ, ಲಂಚ ರುಷುವತ್ತು ಪಾಪಕರವೆಂದೂ ಪ್ರವಾದಿ ಮಹಮ್ಮದರು ಬೋಧಿಸಿದ್ದಾರೆ.

''ಶ್ರಮ ಜೀವನ ಗೌರವಾರ್ಹವಾದದ್ದೆಂಬ ಪಾಠವನ್ನ ತಂದೆ ಮಕ್ಕಳಿಗೆ ಕಲಿಸಬೇಕೆಂದೂ, ಯಾವೊಬ್ಬನೂ ಮತ್ತೊಬ್ಬನಿಗೆ ಹೊರೆಯಾಗ ಕೂಡ ದೆಂದೂ, ಸಂಸಾರ ನಿರ್ವಹಣೆಯ ನಂತರ ಉಳಿದ ಹಣವನ್ನು ಸಮಾಜಕ್ಕೆ ಅರ್ಪಿಸಬೇಕೆಂದು'' ತಾತ್ವಿಕವಾದಿ ರಾಬರ್ಟ್ ಇಂಗರ್‌ಸಾಲ್ ಹೇಳುತ್ತಾನೆ.

''ತಾನೂ ದುಡಿಯದೆ ಸೋಮಾರಿತನದಿಂದ ಬದುಕು ನಡೆಸುವವನು 'ಮಹಾಚೋರ'ನೆಂದೂ ರೂಸೋ ತಿಳಿಸುತ್ತಾನೆ. ಸ್ವಾವಲಂಬನೆಯಿಂದ

ಸಮಾಜದ, ಕುಟುಂಬದ ಪ್ರಗತಿ ಸಾಧ್ಯ, ಈ ಸ್ವಾವಲಂಬನೆಗೆ, ಕಾಯಕವೇ ಮುಖ್ಯ ಅವಲಂಬನೆ. ಜನರಿಗೆ ಸ್ವಾವಲಂಬನೆಯ ಪಾಠ ಕಲಿಸದಿದ್ದರೆ ಜಗತ್ತಿನ ಶ್ರೀಮಂತಿಕೆಯೆಲ್ಲ ಒಂದು ಸಣ್ಣ ಹಳ್ಳಿಯನ್ನು ರಕ್ಷಿಸಲಾರದು'' ಎಂದು ಸ್ವಾಮಿ ವಿವೇಕಾನಂದರು ಅಭಿಪ್ರಾಯ ಪಡುತ್ತಾರೆ. ಒಂದು ದೇಶದ ಆರ್ಥಿಕ ಪ್ರಗತಿ ಅಲ್ಲಿಯ ಜನರ ಕ್ರಿಯಾಶಕ್ತಿಯನ್ನು ಅವಲಂಬಿಸಿದೆ. ಇದಕ್ಕೆ ಉದಾಹರಣೆ ಜಪಾನ್ ಹಾಗೂ ಪಾಶ್ಚಮಾತ್ಯ ಕೆಲವು ರಾಷ್ಟ್ರಗಳು, ರೈತರಿಗೆ, ಕಾರ್ಮಿಕರಿಗೆ, ಅಧಿಕಾರಿಗಳಿಗೆ ಹೆಚ್ಚು ಹೆಚ್ಚು ಹಣ ಬೇಕು. ದುಡಿಯದೇ ಅವೆಲ್ಲ ಹೇಗೆ ಬರುತ್ತವೆ ? ದುಡಿದರೆ ದುಡ್ಡು, ದುಡ್ಡಿದ್ದರೆ ಎಲ್ಲಾ. ಮನುಷ್ಯನಿಗೆ ದುಡಿಯಲು ನಿಸರ್ಗ ಕೈಗಳನ್ನು ಕೊಟ್ಟಿದೆ. ಕೈಯಿಂದಲೇ ಕಾಯಕ ಸಾಗಬೇಕು. ಈ ಕಾಯಕದಿಂದಲೇ ಸಂಪತ್ತು. ಕೈಗೆ ಸಹಕಾರಿಗಳಾಗಿ ಕಾಲು–ಕಣ್ಣು ಬುದ್ಧಿಗಳಿವೆ, ಇದನ್ನು ಬಳಸಿಕೊಳ್ಳದಿರುವ ಮಾನವನ ದುಃಸ್ಥಿತಿಗೆ ಅವನೇ ಕಾರಣ ಹೊರತು ಅನ್ಯರಲ್ಲ. ಶರಣರು ಜೀವನ ಸರಳವಾಗಿರಬೇಕು. ಸಂಪತ್ತಿನ ಸಂಗ್ರಹ ಬೇಡ. ಅವಶ್ಯಕತೆಯನ್ನ ಅನುಸರಿಸಿ ಖರ್ಚು ಮಾಡಬೇಕು. ಮಿಕ್ಕಿದ್ದನ್ನು ಸಮಾಜರೂಪಿ ಜಂಗಮರಿಗೆ ಹಂಚಬೇಕು. ಅತಿ ಆಶೆ ಬೇಡ. ಮಿತವ್ಯಯ ಬಿಡಬೇಡ. ಕಾಯಕ– ದಾಸೋಹ ವ್ರತದಂತೆ ನಡೆಸಬೇಕು. ನೈತಿಕ ಜೀವನವೊಂದೇ, ಆರ್ಥಿಕ ಸುಸ್ಥಿತಿಗೆ, ಸಾಮಾಜಿಕ ಆರೋಗ್ಯಕ್ಕೆ ಹಾಗೂ ಜಗತ್ತಿನ ಕ್ಷೇಮಕ್ಕೆ ಕಾರಣವೆಂದು ಕಾಯಕ ಹಾಗೂ ದಾಸೋಹ ತತ್ತ್ವಗಳ ಮೌಲ್ಯಗಳನ್ನು ಜಗತ್ತಿಗೆ ಸಾರಿದರು.



## ಕೈವಲ್ಯ ಸಾಹಿತ್ಯದಲ್ಲಿ ನಿಜಗುಣರ ನಿಲುವು

ಆಧ್ಯಾತ್ಮ ಲೋಕದ ಅನಭಿಷಿಕ್ತ ಸಾಮ್ರಾಟರು ಶ್ರೀ ನಿಜಗುಣ ಶಿವಯೋಗಿಗಳು. ಕವಿ, ದಾರ್ಶನಿಕ, ಕನ್ನಡ ನುಡಿಗೆ ಅಪಾರ ಸೇವೆಸಲ್ಲಿಸಿದ ಹಿರಿಯ ಚೇತನ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದಾಗ ನಮಗೆ ಮೂರು ಜನ ನಿಜಗುಣರು ಸಿಗುತ್ತಾರೆ. ೧೨ನೇ ಶತಮಾನದ ನಿಜಗುಣ ದೇವನೆಂಬ ವಚನಕಾರ, ೧೫ನೇ ಶತಮಾನದ ನಿಜಗುಣಶಿವಯೋಗಿ, ೧೭ನೇ ಶತಮಾನದ ಅದ್ಭುತ ರಾಮಾಯಣ ರಚಿಸಿದ ನಿಜಗುಣ ಕವಿ. ಈ ಮೂವರಲ್ಲಿ ೧೫ನೇ ಶತಮಾನದ ನಿಜಗುಣ ಶಿವಯೋಗಿಗಳು ತಮ್ಮ ಆಧ್ಯಾತ್ಮಿಕ ಸಾಹಿತ್ಯದ ಕೊಡುಗೆಯಿಂದಾಗಿ ಚಿರಸ್ಮರಣೀಯರಾಗಿದ್ದಾರೆ.

ಶ್ರೀ ನಿಜಗುಣರು ಆಧ್ಯಾತ್ಮದ ಗೌರೀಶಂಕರ ಶಿಖರ, ಸಂಸ್ಕೃತದ ವೇದಾಂತ ಗಂಗೆಯನ್ನು ಕನ್ನಡಕ್ಕೆ ತಂದ ಭಗೀರಥ. ಕನ್ನಡದ ಪುಣ್ಯವೋ ಎನ್ನುವಂತೆ, ಶ್ರೀ ನಿಜಗುಣರಿಂದ ಕನ್ನಡದ ಆಧ್ಯಾತ್ಮ ಭಂಡಾರ ಶ್ರೀಮಂತ ವಾಯಿತು.

ಪ್ರಸ್ತುತ ಪ್ರಬಂಧದ ವಿಷಯ, ಕೈವಲ್ಯ ಸಾಹಿತ್ಯದಲ್ಲಿ ನಿಜಗುಣರ ನಿಲುವನ್ನು ಅವಲೋಕಿಸುವುದಾಗಿದೆ. ಕನ್ನಡ ಸಾಹಿತ್ಯದ ವಿಭಿನ್ನ ಪ್ರಕಾರ ಗಳಲ್ಲಿ ಇತ್ತೀಚಿಗೆ ತತ್ತ್ವಪದ ಸಾಹಿತ್ಯ–ಅಥವಾ ಕೈವಲ್ಯ ಸಾಹಿತ್ಯ ಎನ್ನುವ ವಿಶಿಷ್ಟ ಪ್ರಕಾರವನ್ನು ವಿದ್ವಾಂಸರು ಗುರುತಿಸುತ್ತಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ತತ್ತ್ವಪದಗಳು–ಕೈವಲ್ಯ ಪದಗಳು–ಅನುಭಾವಗೀತೆಗಳು ಎಂಬ ಬೇರೆ–ಬೇರೆ ಹೆಸರಿನಿಂದ ಕರೆಯುವ ಈ ಪದಗಳ ಸಾಹಿತ್ಯ ವಿಪುಲವಾಗಿದೆ, ವಿಸ್ತಾರವಾಗಿದೆ. ಇವುಗಳ ಆಶಯ ಒಂದೇ ಆಗಿದೆ. ಜನ ಜೀವನವನ್ನು ಹಸನಗೊಳಿಸಲು ಸೃಷ್ಟಿಯಾದ ಈ ಸಾಹಿತ್ಯದ ಹಾಡುಗಳು. ಅಂತರಂಗದ ಅರಿವಿನ ಮೂಲಭೂತ ತತ್ತ್ವವನ್ನು ಪ್ರತಿಪಾದಿಸುವುದರಿಂದ ಇವು ತತ್ತ್ವಪದಗಳೂ ಹೌದು, ಅನುಭಾವ ಗೀತೆಗಳೂ ಹೌದು.

ಜೀವಾತ್ಮ-ಪರಮಾತ್ಮ ಹಾಗೂ ಈ ಜಗತ್ತನ್ನು ಕುರಿತ ಹಾಗೂ ಭಕ್ತಿ-ಜ್ಞಾನ ವೈರಾಗ್ಯದ ವಿಷಯಗಳ ವಿವೇಚನೆಯೇ ಕೈವಲ್ಯ ಸಾಹಿತ್ಯದ ಕೇಂದ್ರವಸ್ತು.

ಕನ್ನಡ ಸಾಹಿತ್ಯ ಚರಿತ್ರೆಯನ್ನು ಅನುಲಕ್ಷಿಸಿ ಹೇಳುವುದಾದರೆ ಕ್ರಿ.ಶ. ಸುಮಾರು ೧೫ನೇ ಶತಮಾನಕ್ಕೆ ಸೇರಿದ ನಿಜಗುಣ ಶಿವಯೋಗಿಗಳು ಕೈವಲ್ಯ ಸಾಹಿತ್ಯದ ಆದ್ಯ ಪ್ರವರ್ತಕರು. ಆಧ್ಯಾತ್ಮದ ಗಹನ-ಗಂಭೀರ ತತ್ತ್ವಗಳನ್ನು, ಜನಸಾಮಾನ್ಯರಿಗಾಗಿ ಗೀತೆಗಳ ಮೂಲಕ ಸರಳ-ಹಾಗೂ ಸುಲಭ ರೂಪದಲ್ಲಿ ಬೋಧಿಸಿದ್ದಾರೆ. ಇದಕ್ಕೆ ಅವರ ಕೈವಲ್ಯ ಪದ್ಧತಿ ಕೃತಿಯೇ ಸಾಕ್ಷಿಯಾಗಿದೆ. ಇವರ ಹಾದಿಯಲ್ಲಿಯೇ ಸಾಗಿದ ಸರ್ಪಭೂಷಣ ಶಿವಯೋಗಿಗಳು ತಮ್ಮ ತತ್ತ್ವಪದಗಳ ಸಂಕಲನ ಕೃತಿಗೆ ಕೈವಲ್ಯ ಕಲ್ಪವಲ್ಲರಿ ಎಂದು ಕರೆದಿದ್ದಾರೆ. ಬಾಲಲೀಲಾ ಮಹಾಂತ ಶಿವಯೋಗಿಗಳು ತಮ್ಮ ತತ್ತ್ವಪದಗಳ ಸಂಕಲನ ಕೃತಿಗೆ 'ಕೈವಲ್ಯ ದರ್ಪಣ' ಎಂದು ಕರೆದಿದ್ದಾರೆ. ಇದು ಕನ್ನಡ ಸಾಹಿತ್ಯದಲ್ಲಿ ಸಾಗಿ ಬಂದ ಕೈವಲ್ಯ ಸಾಹಿತ್ಯ ಪರಂಪರೆ. ೧೮ ಹಾಗೂ ೧೯ನೆಯ ಶತಮಾನವನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ 'ಕೈವಲ್ಯ'ಸಾಹಿತ್ಯದ ಯುಗವೆಂದು ಕರೆಯಬಹುದಾಗಿದೆ. ಈ ಕಾಲದಲ್ಲಿ ಮಹಲಿಂಗರಂಗ, ಚಿದಾನಂದ ಅವಧೂತರು, ಮುಪ್ಪಿನ ಷಡಕ್ಷರಿಗಳು, ಸರ್ಪಭೂಷಣರು, ಬಾಲಲೀಲಾ ಮಹಾಂತರು, ಮೈಲಾರ ಬಸವಲಿಂಗ ಶರಣರು, ಕಡಕೋಳದ ಮಡಿವಾಳಪ್ಪನವರು, ಕೂಡಲೂರೇಶ, ನಿಂಬರಗಿ ಮಹಾರಾಜ ಶಂಕರಾನಂದ, ಶಿಶುನಾಳ ಶರೀಫ, ನಾಗಲಿಂಗಯತಿ ಹೀಗೆ ಕನ್ನಡ ನಾಡಿನಲ್ಲಿ ತತ್ತ್ವಪದಕಾರರ ದೊಡ್ಡ ಪರಂಪರೆ ಇದೆ. ಈ ತತ್ತ್ವ ಪದಕಾರರು ತಾವು ರಚಿಸಿದ ಹಾಡುಗಳಿಗೆ ತತ್ತ್ವಪದಗಳೆಂದೇ ಕರೆದಿದ್ದಾರೆ. ರೂಪ-ರಚನೆಯ ದೃಷ್ಟಿಯಿಂದ ಅವು ಹಾಡುಗಳಾದರೂ ವಸ್ತುವಿನ ದೃಷ್ಟಿಯಿಂದ ಎಲ್ಲವೂ ತತ್ತ್ವಪದಗಳೇ. ಇವುಗಳ ಹಾದಿ, ಕೈವಲ್ಯವಾದ ದ್ದರಿಂದ ಇವುಗಳನ್ನು ಕೈವಲ್ಯ ಪದಗಳೆಂದು ವಿದ್ವಾಂಸರು ಗುರುತಿಸಿದ್ದಾರೆ.

ಕೈವಲ್ಯ ಶಬ್ದಕ್ಕೆ ಮೋಕ್ಷ, ಕೈವಲ್ಯ-ನಿರ್ವಾಣ ಎನ್ನುವ ಪರ್ಯಾಯ ಪದಗಳಿವೆ. ತ್ರಿಕಾಲಗಳ, ಸರ್ವವಸ್ತುಗಳ, ಸಮಗ್ರಜ್ಞಾನವನ್ನು 'ಕೇವಲ ಜ್ಞಾನ' ಎಂದು ಜೈನ ಧರ್ಮ ಹೇಳುತ್ತದೆ.

ಕೈವಲ್ಯ ಪದಕ್ಕೆ ಲೌಕಿಕ ಸಂಪರ್ಕದಿಂದ ದೂರ ನಿಲ್ಲುವ ನಿರ್ಲಿಪ್ತ ಸ್ಥಿತಿ ಎನ್ನುವ ಅರ್ಥದಿಂದ ಹಿಡಿದು, ಆತ್ಮ-ಪರಮಾತ್ಮರ, ಶಿವ-ಜೀವೈಕ್ಯರ ಸಮರಸದಿಂದ ಲಭಿಸುವ ನಿರ್ವಿಕಲ್ಪ ಸ್ಥಿತಿ ಎನ್ನುವವರೆಗೂ ಇದರ ಅರ್ಥ ವಿಸ್ತಾರ ಬೆಳೆದಿದೆ. ಇದು ಆತ್ಯಂತಿಕ ಆನಂದ. ಇನ್ನೂ ವಿಶಾಲ ಅರ್ಥದಲ್ಲಿ-ಆತ್ಮಾನುಭವ. ಈ ಅನುಭವಕ್ಕೆ ಕಾರಣವಾದ ಸಾಹಿತ್ಯವನ್ನು ಕೈವಲ್ಯ ಸಾಹಿತ್ಯವೆಂದು ಕರೆದಿದ್ದಾರೆ.

ಶಿವ-ಜೀವರ ಅವಿನಾಭಾವ ಸಂಬಂಧದಿಂದ ಮೂಡಿದ ಕೇವಲ ಅನುಭವವನ್ನು, ಕೈವಲ್ಯವೆಂದು ಕರೆಯುತ್ತಾರೆ.

'ಕೈವಲ್ಯ' ಎನ್ನುವ ಹೆಸರಿನಿಂದ ಒಂದು ಕೃತಿಯನ್ನು ಕರೆದಿರುವವರಲ್ಲಿ ಕನ್ನಡದಲ್ಲಿ ನಿಜಗುಣರೇ ಮೊದಲಿಗರು ಎಂದು ತೋರುತ್ತದೆ.

ಕೈವಲ್ಯ ಪದ್ಧತಿಯ ಹಾಡುಗಳು, ಮಾತುಮನಂಗಳಿಂದತ್ತತ್ತ ಮೀರಿದ ಅನುಭವದ ಮಾರ್ಗವನ್ನು ಮುಖ್ಯವಾಗಿ ತಿಳಿಸುವುದರಿಂದ, ಕೈವಲ್ಯ ಪದ್ಧತಿ ಎಂದು ತಮ್ಮ ಕೃತಿಗೆ ಹೆಸರಿಸಿದ್ದು, ತುಂಬಾ ಅನ್ವರ್ಥಕ ಎನಿಸುತ್ತದೆ. ಇಲ್ಲಿ ಕೇವಲ ಭಕ್ತಿ ಪ್ರಧಾನವಾದ ಆದೇಶವಾಗಲಿ, ನೀತಿ ಪ್ರಧಾನವಾದ ಉಪದೇಶಗಳಾಗಲಿ ಇಲ್ಲ. ಶಿವಯೋಗ ಸಾಧನೆಯ ಶಿಖರವನ್ನೇರುತ್ತಾ ಹೋಗುವ, ಅನುಭಾವಿಗಳ ಆಧ್ಯಾತ್ಮ ಗೀತೆಗಳು ಇವು. ಕರ್ನಾಟಕದ ಆಧ್ಯಾತ್ಮ ಪರಂಪರೆಯಲ್ಲಿ ನಿಜಗುಣರ ಸಾಧನೆ-ಸಿದ್ಧಿಗಳು ವಿಶಿಷ್ಟವಾದವುಗಳು, ಅವರು ಆಧ್ಯಾತ್ಮ ತತ್ತ್ವದ ಉತ್ತುಂಗ ಶಿಖರ. ನಿಜಗುಣರು ಕನ್ನಡಕ್ಕೆ ಷಟ್ ಶಾಸ್ತ್ರಗಳನ್ನು ನೀಡಿದ್ದಾರೆ. ಅನುಭವಸಾರ, ಪಾರಮಾರ್ಥಗೀತೆ, ಪರಮಾನುಭವ ಬೋಧೆ, ಕೈವಲ್ಯಪದ್ಧತಿ, ಪರಮಾರ್ಥ ಪ್ರಕಾಶಿಕೆ ಹಾಗೂ ವಿವೇಕ ಚಿಂತಾಮಣಿ. ಈ ಕೃತಿಗಳ ಹೆಸರುಗಳೇ ಆಯಾ ಗ್ರಂಥಗಳ ವಿಷಯವನ್ನು ಸಾರಿ ಹೇಳುತ್ತವೆ. ವಿವೇಕ ಚಿಂತಾಮಣಿ ಕನ್ನಡದ ವಿಶ್ವಕೋಶ, ಸುಮಾರು ೭೬೦೦ ಗ್ರಂಥಗಳನ್ನು ನೋಡಿ ವಿಷಯವನ್ನು ಸಂಗ್ರಹಿಸಿ, ಕೃತಿ ರಚನೆ ಮಾಡಿದುದಾಗಿ ಗ್ರಂಥದ ಕೊನೆಯಲ್ಲಿ ತಿಳಿಸುತ್ತಾರೆ. ಕನ್ನಡದ ಈ ವಿಶ್ವಕೋಶ ಸಂಸ್ಕೃತದ ಚಾಲುಕ್ಯ ಸೋಮೇಶ್ವರನ ಮಾನಸೋಲ್ಲಾಸ, ಕೆಳದಿ ಬಸವ ಭೂಪಾಲನ 'ಶಿವತತ್ವರತ್ನಾಕರ ಗ್ರಂಥಗಳಿಗೆ ಹೊಯ್‌ಕೈಯ್‌ಯಾಗಿ ನಿಲ್ಲುವ ಶ್ರೇಷ್ಠ ಕೃತಿಯಾಗಿದೆ.

ನಿಜಗುಣರ ಕೈವಲ್ಯ ಪದ್ಧತಿ ಅನುಭಾವ ಗೀತೆಗಳ ಸಂಕಲನ, ಇವು ಅಂತರಂಗದ ಅನುಭವದ ಗೀತೆಗಳು. ಭಾವಗಳಿಗೆ ಅನುಗುಣವಾಗಿ ವಿವಿಧ ರಾಗಗಳಲ್ಲಿ ಇಲ್ಲಿನ ಹಾಡುಗಳು ರಚನೆಯಾಗಿವೆ. ಭಕ್ತಿ–ಜ್ಞಾನ–ವೈರಾಗ್ಯ ತತ್ತ್ವಗಳ ಬೋಧನೆ ಇಲ್ಲಿದೆ, ಅಲ್ಲದೆ ವೇದ ವೇದಾಂತದ ಸಾರಸರ್ವಸ್ವವೂ ಈ ಗೀತೆಗಳಲ್ಲಿ ಅಡಗಿದೆ. ಈ ದೃಷ್ಟಿಯಿಂದ ನಿಜಗುಣರು ಕವಿಗಳು, ದಾರ್ಶನಿಕರು ಹಾಗೂ ಶ್ರೇಷ್ಠ ವಾಗ್ಗೇಯಕಾರರೂ ಆಗಿದ್ದಾರೆ. ಈ ಕೃತಿಯಲ್ಲಿ ನಿಜಗುಣರ ಅನುಭಾವದ ಎತ್ತರ–ಬಿತ್ತರಗಳ ಅಪೂರ್ವ ಸಿದ್ಧಿಯನ್ನು ಕಾಣುತ್ತೇವೆ. 'ಕೈವಲ್ಯ ಪದ್ಧತಿ' ಗಾತ್ರದಲ್ಲಿ ಕಿರಿದಾದರೂ, ಆಧ್ಯಾತ್ಮಿಕ ವಿಷಯಗಳ ಪಾತ್ರದಲ್ಲಿ ಹಿರಿದಾಗಿದೆ. ಇದರಲ್ಲಿ ೧೭೪ ಗೀತೆಗಳಿವೆ. ಇವು ಅರ್ಥಪೂರ್ಣವಾದ 'ಸ್ಥಲ ಕಟ್ಟು'ಗಳ ಕ್ರಮದಲ್ಲಿವೆ.

ಶಿವಕಾರುಣ್ಯ ಸ್ಥಲದಲ್ಲಿ–೨೮, ಜೀವಸಂಬೋಧನಾಸ್ಥಲದಲ್ಲಿ–೨೨, ನೀತಿ ಕ್ರಿಯಾಚರ್ಯಸ್ಥಲದಲ್ಲಿ ೨೬, ಯೋಗ ಪ್ರತಿಪಾದನಾಸ್ಥಲದಲ್ಲಿ ೩೯, ಜ್ಞಾನ ಪ್ರತಿಪಾದನಾ ಸ್ಥಲದಲ್ಲಿ ೫೯ ಹೀಗೆ ಒಟ್ಟು ೧೭೪ ಹಾಡುಗಬ್ಬಗಳಿವೆ.

ನಿಜಗುಣರು ನಿರ್ಮಿಸಿದ ಈ ಐದು ಸ್ಥಲಗಳು, ಸಾಧಕನ ಮನೋವಿಕಾಸದ ಹಾಗೂ ಅಂತರಂಗ ವಿಕಾಸದ ವಿವಿಧ ಹಂತಗಳು, ಇವು ಯೋಗ ವಿಜ್ಞಾನ ಹಾಗೂ ಮನೋವಿಜ್ಞಾನದ ಹಂತಗಳು ಇವುಗಳಲ್ಲಿ ಮೊದಲ ಮೂರು ಸ್ಥಲಗಳು ಕೈವಲ್ಯ ಮಾರ್ಗದ ಸೋಪಾನಗಳಾದರೆ, ಕೊನೆಯ ಎರಡು ಸ್ಥಲಗಳು ಕೈವಲ್ಯ ಶಿಖರಗಳೆಂದು ಭಾವಿಸಬಹುದಾಗಿದೆ.

ನಿಜಗುಣರ ಈ ಐದುಸ್ಥಲದ ವಿಭಜನೆಯಲ್ಲಿ ಅವರ ಆಧ್ಯಾತ್ಮಿಕ ಜಾಣ್ಮೆ ಎದ್ದು ಕಾಣುತ್ತದೆ. ಶಿವಕಾರುಣ್ಯ ಸ್ಥಲದಲ್ಲಿ ಸಾಧಕನ ಜೀವ, ಈ ಲೋಕದ ವಿಷಮ ವೈಪರೀತ್ಯಗಳನ್ನು ಕಂಡು, ನೊಂದು–ಬೆಂದು ಇದರಾಚೆಯ ಅನುಭವವನ್ನು ಪಡೆಯಲು ಹಂಬಲಿಸುತ್ತದೆ. ಇದು ಸಾಧಕನ ತಳಮಳದ ಸ್ಥಿತಿ, ಎಲ್ಲ ಸಾಧಕರಿಗೂ ಈ ಅನುಭವವಾಗುತ್ತದೆ. ಈ ಸ್ಥಿತಿಯನ್ನು– 'Dark night of the soul' ಅಂದರೆ 'ಸಾಧನೆಯ ಕಾಳರಾತ್ರಿ' ಎಂದು ಪಾಶ್ಚಾತ್ಯ ವಿದ್ವಾಂಸರು ಕರೆದಿದ್ದಾರೆ. ಈ ಸ್ಥಿತಿಯನ್ನು ಪಡೆಯದವರು ಅನುಭಾವಿಗಳೇ ಅಲ್ಲ ಎಂದೂ ಅವರು ಹೇಳುತ್ತಾರೆ. ಈ ಅವಸ್ಥೆಯಲ್ಲಿ ಜೀವ ಶಿವಕೃಪೆಗೆ ಹಾರೈಸುತ್ತದೆ. ಶಿವಕಾರುಣ್ಯವನ್ನು ಬಯಸುತ್ತದೆ. ಆಗ ಜೀವನದಲ್ಲಿ ಎಚ್ಚರ

ಮೂಡುತ್ತದೆ. ಎಚ್ಚರವಿಲ್ಲದ ಸಾಧನೆ ವ್ಯರ್ಥವಾಗುತ್ತದೆ. ಇದು ಎರಡನೆಯ ಹಂತ, ಜೀವಸಂಬೋಧನಾಸ್ಥಲವೆಂದು ಕರೆದಿದ್ದಾರೆ. ಎಚ್ಚರವಿಲ್ಲದ ಜೀವನದಲ್ಲಿ ನೀತಿ ಧರ್ಮಾಚರಣೆಗೆ ಅವಕಾಶವೇ ಇಲ್ಲ. ಆದ್ದರಿಂದ ಮೂರನೆಯ ಅವಸ್ಥೆಯನ್ನು ನೀತಿ ಕ್ರಿಯಾಚರ್ಯಸ್ಥಲವೆಂದು ಕರೆದಿದ್ದಾರೆ. ಸಾಧಕನಿಗೆ ನಾಲ್ಕನೆಯ ಹಂತ ಯೋಗಸ್ಥಲ, ಸಾಧಕನ ಅಂತರಂಗ–ಬಹಿರಂಗ ಶುದ್ಧಿಗಾಗಿ ಯೋಗಸಾಧನೆ ಬೇಕೇ ಬೇಕು. ಕೊನೆಯ ಐದನೆಯ ಹಂತ 'ಜ್ಞಾನಸ್ಥಲ' ಯೋಗಸಾಧನೆ ಇಲ್ಲದೆ ಜ್ಞಾನಕ್ಕೆ ಅವಕಾಶವಿಲ್ಲ; ನಿಜಜ್ಞಾನ ವಿಲ್ಲದೆ ಅಜ್ಞಾನ ಪರಿಹಾರವಾಗದು. ಇಲ್ಲಿ ಸ್ಥಲಕ್ಕೆ ಮುಮುಕ್ಷುಗಳ (ಸಾಧಕರ) ಆತ್ಮವಿಕಾಸದ ಹಂತವೆಂದೇ ಅರ್ಥ. ಕೈವಲ್ಯಪದಕ್ಕೆ 'ಕೇವಲಸ್ಯಭಾವಃ ಕೈವಲ್ಯಂ' ಅಂದರೆ ನಿರ್ಲಿಪ್ತತೆ, ಏಕತೆ, ಸತ್ಯಜ್ಞಾನ, ''ಮುಕ್ತಿ'' ಇತ್ಯಾದಿ ಅರ್ಥಚ್ಛಾಯೆಗಳಿವೆ. ಈ ಸ್ಥಿತಿಯನ್ನು ಪಡೆಯುವುದೇ ಕೈವಲ್ಯ. ಇದೇ ಈ ಕೃತಿಯ ಆಶಯ. ಇದೇ ನಿಜಗುಣರ ನಿಲುವು.

ಮನುಷ್ಯನ ವಿವೇಚನೆ ವಿಕಾಸವಾದಂತೆ, ನಾನಾರು ? ಎಲ್ಲಿಂದ ಬಂದೆ ? ಎಲ್ಲಿ ಇದ್ದೇನೆ ? ಹೋಗುವುದೆಲ್ಲಿಗೆ ? ಈ ಬದುಕಿನಲ್ಲಿ ಸಾಧನೆ ಮಾಡಬೇಕಾದುದೇನು ? ಸಾರ್ಥಕ ಬದುಕು ಯಾವುದು ? ಇತ್ಯಾದಿ ಪ್ರಶ್ನೆಗಳು ಮನುಷ್ಯನನ್ನು ಕಾಡುತ್ತಲೇ ಇವೆ. ಇವುಗಳಿಗೆ ಉತ್ತರವನ್ನು ಹುಡುಕುವುದಕ್ಕಾಗಿಯೇ ಮನುಷ್ಯ ಆಧ್ಯಾತ್ಮ ಸಾಧನೆ ಮಾಡಬೇಕಾಗಿದೆ. ಕೇನ, ಪ್ರಶ್ನೆ ಕಠೋಪನಿಷತ್ತುಗಳ ಕಾಲದಿಂದಲೂ ಈ ಪ್ರಶ್ನೆಗಳು ಮನುಷ್ಯನಿಗೆ ಸವಾಲುಗಳಾಗಿ ಕಾಡುತ್ತಿವೆ. ಎಲ್ಲೋ ವಿರಳರಲ್ಲಿ ವಿರಳರಾದ ಸಂತಮಹಾಂತರು, ಈ ಪ್ರಶ್ನೆಗಳಿಗೆ ಉತ್ತರ ಕಂಡಿದ್ದಾರೆ. ಬಹು ಪಾಲುಜನ ಅವುಗಳ ಉತ್ತರದ ಹುಡುಕಾಟದಲ್ಲಿಯೇ ತೊಳಲಾಡುತ್ತಿದ್ದಾರೆ.

ಈ ಪ್ರಶ್ನೆಗಳಿಗೆ ನಿಜಗುಣರು ತಮ್ಮ ಕೈವಲ್ಯ ಪದ್ಧತಿಯಲ್ಲಿ ಸಾಧಕರಿಗೆ ಸಮುಚಿತ ಉತ್ತರಗಳನ್ನು ನೀಡಿದ್ದಾರೆ. ಕೈವಲ್ಯ ಪಥದತ್ತ ಸಾಗುವ ಸಾಧಕನ ಆತ್ಮ ವಿಕಾಸದ ಐದು ಹೆಜ್ಜೆಗಳನ್ನಿಡುತ್ತಾ ಸಾಗುವಾಗ ಮೊದಲು ಮೂರು ಸ್ಥಲಗಳಲ್ಲಿ ಮಲದೋಷ ನಿವಾರಣೆಯಾಗುತ್ತದೆ, ಯೋಗಸ್ಥಲದಲ್ಲಿ ವಿಕ್ಷೇಪ ದೋಷ ನಿವಾರಣೆಯಾಗುತ್ತದೆ. ಜ್ಞಾನಸ್ಥಲದಲ್ಲಿ ಆವರಣ ದೋಷ ಪರಿಹಾರವಾಗಿ ಕೈವಲ್ಯ ಪ್ರಾಪ್ತಿಯಾಗುತ್ತದೆ ಎಂದು ತಿಳಿಸುತ್ತಾರೆ.

ಹಿಂದೆ ಹೇಳಿದ ಪ್ರಶ್ನೆಗಳಿಗೆ ವಿಜ್ಞಾನಿಗಳು, ಆಧ್ಯಾತ್ಮವಾದಿಗಳು ತಮ್ಮ ತಮ್ಮ ವಿಚಾರದಂತೆ, ಉತ್ತರ ನೀಡಿದ್ದಾರೆ. ಹುಟ್ಟು–ಸಾವು, ಬದುಕು, ಸುಖ–ದುಃಖ ಈ ಜಗತ್ತಿನ ವ್ಯಾಪಾರ, ವ್ಯವಹಾರಗಳು, ವಿಶ್ವದ ಸ್ವಭಾವ ಹಾಗೂ ಸಹಜ ಕ್ರಿಯೆಗಳು. ಅವುಗಳಿಗೆ ವಿಶೇಷವಾದ ಅರ್ಥ ಹೇಳುವ ಆಗತ್ಯವಿಲ್ಲ ಎನ್ನುತ್ತಾರೆ ಭೌತವಾದಿಗಳು. (Natural Phenomena) ಆಧ್ಯಾತ್ಮವಾದಿಗಳು ಇದು ಪರಮಾತ್ಮನ ಲೀಲೆ ಅನ್ನುತ್ತಾರೆ. ಈ ಜಗತ್ತಿನ ನಿಯಮವನ್ನು ಕುರಿತು ಐನ್‌ಸ್ಟೀನ್ (೧೮೭೯–೧೯೫೫) ಎಂಬ ವಿಜ್ಞಾನಿ, ಹೇಳುತ್ತಾರೆ– ಈ ವಿಶ್ವ ಒಂದು ಆವಿರ್ಭಾವ, ಇಲ್ಲಿಯ ಪದಾರ್ಥಗಳು ಬೇರೆ ಬೇರೆ ಎಂದು ತೋರಿದರೂ, ಅವೆಲ್ಲ ಒಂದು ಶಕ್ತಿಯ (ಎನರ್ಜಿ) ವಿವಿಧ ರೂಪಗಳು, ಇವು ಒಂದು ನಿಯಮಕ್ಕೆ ಒಳಪಟ್ಟಿವೆ. ವಿಶ್ವದ ಯಾವ ಘಟನೆಯೂ ನಿಯಮ ರಹಿತವಾಗಿಲ್ಲ. ವಿಶ್ವ ಶಕ್ತಿಯು ಹೂಡಿರುವುದು ಒಂದು ಲೆತ್ತದಾಟವಲ್ಲ ಅದೊಂದು ನಿಯಮ ಎನ್ನುತ್ತಾರೆ.

ಮನುಷ್ಯ ಜೀವನದಲ್ಲಿ ಸುಖ–ದುಃಖಗಳಿವೆ. ಇವೆರಡು ವೇದನೆಗಳು. ಅನುಕೂಲವೇದನೆ ಸುಖವೆನಿಸಿದರೆ, ಪ್ರತಿಕೂಲವೇದನೆ ದುಃಖವೆನಿಸುತ್ತದೆ. ಬೇಕಾದದ್ದು ಸುಖ–ಬೇಡವಾದದ್ದು ದುಃಖ. ಇದೊಂದು ಮನೋವ್ಯಾಪಾರ. ನಮ್ಮ ಜ್ಞಾನೇಂದ್ರಿಯ, ಕರ್ಮೇಂದ್ರಿಯ ಹಾಗೂ ಮನಸ್ಸಿನ ಚಲನ ವಲನಗಳನ್ನು ಕೇಂದ್ರೀಕರಿಸುವ ಶಕ್ತಿ ಆತ್ಮ, ಜೀವಾತ್ಮನಿಗೆ, ಆಂತರಿಕ ಆತ್ಯಂತಿಕ ಅನುಭವ ಇಷ್ಟವಾಗುತ್ತದೆ. ಈ ಅನುಭಾವವಾದರೆ, ಉಳಿದೆಲ್ಲ ಅನುಭವಗಳೂ ವ್ಯರ್ಥ, ಅವು ಅವಶ್ಯವಿಲ್ಲ ಎನಿಸುತ್ತವೆ.

ವಿಷಯ ಸುಖ ಎಷ್ಟೇ ಅಪರಿಮಿತವಿದ್ದರೂ, ಅದರಲ್ಲಿ ದುಃಖಾಂಶ ವಿದೆ. ಆದ್ದರಿಂದ ಮನುಷ್ಯ ಆತ್ಯಂತಿಕ, ಆಂತರಿಕ ಸುಖವನ್ನು ಹೊರಗೆ ಹುಡುಕದೆ ತನ್ನ ಆತ್ಮನಲ್ಲಿ ಹುಡುಕಲು ಪ್ರಯತ್ನಿಸುತ್ತಾನೆ.

''ಯದ್ಯತ್ ಪರವಶಂ ದುಃಖಂ। ಯದ್ಯತ್ ಆತ್ಮವಶಂ ಸುಖಂ'' ಹೊರಗಿನದು ದುಃಖಮಯ, ಆತ್ಮವಶ ಸ್ವಾಧೀನವಿದ್ದುದೆಲ್ಲವೂ ಸುಖಮಯ. ಇದು ಉಪನಿಷತ್ತಿನ ಸಂದೇಶ. ಉಪನಿಷತ್ತು 'ಆನಂದಂ ಬ್ರಹ್ಮೇತಿ ವ್ಯಜಾನಾತ್' ಎಂದಿದೆ. ಇಲ್ಲಿ ಆನಂದವೆಂದರೆ ನಿರಾಲಂಬ ಆನಂದ, ಸಹಜ ಆನಂದ, ಆತ್ಮಾನಂದ, ಇದೇ ಕೈವಲ್ಯ ಸ್ಥಿತಿ, ಆತ್ಮವೇ ನಿತ್ಯ ಸತ್ಯ. ದೇಹ,

ಪ್ರಾಣ, ಮನಸ್ಸು, ಬುದ್ಧಿ, ಚಿತ್ತಗಳು ವಿಷಯ ಸುಖಕ್ಕಾಗಿ ಬಳಕೆಯಾಗದೆ, ಆಧ್ಯಾತ್ಮ ಪ್ರಗತಿಗಾಗಿ, ಆತ್ಮನ ವಿಕಾಸಕ್ಕಾಗಿ ಬಳಕೆಯಾಗಬೇಕು. ವಿಷಯ ಸುಖದಾಚೆಗೆ, ಆತ್ಮಾನಂದ ಎಂಬುದಿದೆ. ಆಧ್ಯಾತ್ಮ ಜ್ಞಾನ, ನಿತ್ಯತ್ವ ಎಂಬುದು ಅದರ ಮುಖ್ಯ ಲಕ್ಷಣ. ಆಧ್ಯಾತ್ಮವಾದಿಗಳು ಆತ್ಮವನ್ನರಿತರೆ ಎಲ್ಲವನ್ನು ಅರಿತಂತೆ ಎಂದು ಕೇಳುತ್ತಾರೆ. ಆತ್ಮ ಜ್ಞಾನವೇ ಪರಮಾನಂದ, ಅದೇ ಕೈವಲ್ಯ ಸ್ಥಿತಿ. ಇದನ್ನು ಪಡೆಯುವುದೇ ಕೈವಲ್ಯ ಸಾಹಿತ್ಯದ ಗುರಿ, ನಿಜಗಣರ ನಿಲುವು.

ತನುವಿನಲ್ಲಿ ನಿರ್ಮೋಹ
ಮನದಲ್ಲಿ ನಿರಹಂಕಾರ
ಪ್ರಾಣದಲ್ಲಿ ನಿರ್ಭಯ
ಚಿತ್ತದಲ್ಲಿ ನಿರಪೇಕ್ಷೆ
ವಿಷಯದಲ್ಲಿ ಉದಾಸೀನತೆ
ಭಾವದಲ್ಲಿ ದಿಗಂಬರ
ಜ್ಞಾನದಲ್ಲಿ ಪರಮಾನಂದ ನೆಲೆಗೊಂಡ ಬಳಿಕ
ಸೌರಾಷ್ಟ್ರ ಸೋಮೇಶ್ವರ ಲಿಂಗವು, ಬೇರಿಲ್ಲ .

ಈ ವಚನ ಸಾಧಕನ ಕೈವಲ್ಯ ನಿಲುವಿಗೆ ಭಾಷ್ಯ ಬರೆದಂತಿದೆ. ಆತ್ಮಜ್ಞಾನವೇ ಪರಮಾನಂದ ನೆಲೆ. ಜಗತ್ತಿನ ದಾರ್ಶನಿಕರು ಆತ್ಮೋನ್ನತಿ, ಆತ್ಮೋದ್ಧಾರ, ಆತ್ಮ ದರ್ಶನ, ಆತ್ಮಾನಂದ ಎಂದು ನಾನಾವಿಧವಾಗಿ ತಮ್ಮ ಅನುಭವವನ್ನು ತಿಳಿಸುತ್ತಾರೆ.

ಆತ್ಮನನ್ನು ಕುರಿತು ಪೂರ್ಣಜ್ಞಾನವನ್ನು ಮಾಡಿಕೊಡುವ ಶಾಸ್ತ್ರವೇ ಆಧ್ಯಾತ್ಮಶಾಸ್ತ್ರ. ಇದೇ ನಿಜಗುಣರ ಶಾಸ್ತ್ರ. ''ಯದಾ ಪಂಚಾವತಿಷ್ಟಂತ ಜ್ಞಾನಾನಿ ಮನಸಾ ಸಹ, ಬುದ್ಧಿಶ್ಚನ ವಿಚೇಷ್ಟತಿ ತಾಮಾಹುಃ ಪರಮಾಗತಿಂ'' ಯಾವ ಚಿದವಸ್ಥೆಯಲ್ಲಿ ಮನಸ್ಸಿನೊಡನೆ ಪಂಚೇಂದ್ರಿಯಗಳು, ಚಲನವಲನ ರಹಿತವಾಗಿ ಬುದ್ಧಿ ಸ್ಥಬ್ಧವಾಗಿ ನಿಲ್ಲುವುದೋ ಅದೇ ಆತ್ಮನ ಆತ್ಯಂತಿಕ ಶ್ರೇಷ್ಠಗತಿ ಎಂದು ಕಠೋಪನಿಷತ್ತು, ಆತ್ಮನ ಗತಿ–ಸ್ಥಿತಿಯನ್ನು, ಸುಂದರವಾಗಿ ತಿಳಿಸುತ್ತದೆ. ಕಠೋಪನಿಷತ್ತು ಕೂಡಾ–ಪ್ರಪಂಚದ ಸುಳಿವು ಇಲ್ಲದ ಸ್ಥಿತಿ ಯಾವುದು ಏನೂ ಇಲ್ಲದ ಸ್ಥಿತಿ, ಕೇವಲ ಶುದ್ಧ ಆತ್ಮನಿಂದಲೇ ಪ್ರತೀತವಾಗುವ ಸ್ಥಿತಿ– ಇದು ಆತ್ಮನ ತುರೀಯ ಸ್ಥಿತಿ, ಎಂದು ಬಣ್ಣಿಸುತ್ತದೆ.

ಈ ಅನುಭಾವದ, ಕೈವಲ್ಯದ, ಸ್ಥಿತಿಯನ್ನು ಗೀತೆ, ''ಸುಖಮಾತ್ಯಂತಿಕಂ ಯತ್–ತತ್ ಬುದ್ಧಿ ಗ್ರಾಹ್ಯಮತೀಂದ್ರಿಯಮಂ'' ಎಂದು ಸ್ಪಷ್ಟವಾಗಿ ತಿಳಿಸಿದೆ. ಇಂತಹ ಸ್ಥಿತಿಯನ್ನು ಪಡೆಯುವತ್ತ ಮನುಷ್ಯ ಸಾಗಬೇಕು, ಆಗ ನರ ಹರನಾಗುತ್ತಾನೆ. ಭೂಲೋಕ ಶಂಭು ಲೋಕವಾಗುತ್ತದೆ. ಎನ್ನುವುದೇ ಕೈವಲ್ಯ ಸಾಹಿತ್ಯದ ನಿಲುವು.

ಈ ಸ್ಥಿತಿಯನ್ನು ಪಡೆಯಲು ನಿಜಗುಣರು ತಮ್ಮ ಕೈವಲ್ಯ ಪದ್ಧತಿಯಲ್ಲಿ ಉದ್ದಕ್ಕೂ ಸಾಧಕನಿಗೆ ಮಾರ್ಗನಿರ್ದೇಶನ ಮಾಡುತ್ತಾರೆ. ಅವರು ಹೇಳುತ್ತಾರೆ– 'ಪಾಪ ಕರ್ಮ ಮಾಡಬೇಡ' 'ಪುಣ್ಯಕಾರ್ಯಮಾಡು' 'ಶಿವನನ್ನು ಭಜಿಸು' 'ಶಾಂತಚಿತ್ತನಾಗಿರು' ಪ್ರಾಣಿಗಳಲ್ಲಿ ದಯೆ ಇರಲಿ, ನೀತಿವಂತನಾಗು, ಆಶ್ರಿತರನ್ನು ರಕ್ಷಿಸು, ಪರದೂಷಣೆ ಮಾಡಬೇಡ, ಮನಬಂದಂತೆ ನಡೆಯದಿರು, ಅಹಿತ ಕಾರ್ಯ ಮಾಡಬೇಡ, ಕಾಮಾದಿ ವೈರಿಗಳನ್ನುಗೆಲ್ಲು, ಜನನ ಮರಣ ಚಕ್ರದಲ್ಲಿ ಸಿಲುಕಬೇಡ, ಸಿರಿಬಂದಾಗ ಅಹಂಕಾರಿಯಾಗಬೇಡ, ಜಗತ್ತಿನ ಹೊರಗೆ ದ್ವೈತವಿದೆ, ಜಗತ್ತಿನ ವ್ಯವಹಾರವೇ ಹಾಗೆ, ಎಲ್ಲರೂ, ಎಲ್ಲವೂ, ಒಂದೇ ಎಂದು ಅದ್ವೈತವನ್ನು ಬಳಸದಿರು, ಆದರೆ ಎಲ್ಲರನ್ನು ಒಂದೇ ದೃಷ್ಟಿಯಲ್ಲಿ ಕಾಣುವ ದೃಷ್ಟಿ ನಿನ್ನಲ್ಲಿ ಗಟ್ಟಿಯಾಗಿರಲಿ, ಧರ್ಮಾಚರಣೆ ಮಾಡು, ಭಕ್ತಿ ಇರಲಿ, ನಾನಾರು? ಎಂಬುದು ನೆನಪಿರಲಿ, ಮತ್ತೆ ಮತ್ತೆ ವಿಚಾರಿಸು, ಈ ಸಂಸಾರ ಒಂದು ಕನಸೆಂದು ತಿಳಿ. ದೈವವನ್ನು ಮೆಚ್ಚಿಸಿ, ನೆಲೆ ಇಲ್ಲದ ಸುಖದಲ್ಲಿ ನೆಲಸು, ಇದು ಗುರುವಿನ ಉಪದೇಶ, ಇದನ್ನು ಆಲಿಸಿ–ಆಚರಿಸಿದಾಗ, ಮುಕ್ತಿ ದೊರೆಯುತ್ತದೆ ಎಂದು ನಿಜಗುಣರು ಕೈವಲ್ಯ ಸಾಹಿತ್ಯದ ಸಾರಾಂಶವನ್ನು ಸೂತ್ರ ರೂಪದ ವಾಕ್ಯಗಳಲ್ಲಿ ಮನುಕುಲಕ್ಕೆ ಸಂದೇಶ ನೀಡಿದ್ದಾರೆ. ಇದೇ ನಿಜಗುಣರ ನಿಲುವೂ ಹೌದು.

ಶ್ರೀ ನಿಜಗುಣರು ತಮ್ಮ 'ಕೈವಲ್ಯ ಪದ್ಧತಿ'ಯಲ್ಲಿ ಸಾಧಕನಿಗೆ ಪ್ರತಿ ಹಂತದಲ್ಲೂ ಮಾರ್ಗದರ್ಶನ ಮಾಡುತ್ತಾ, ತಾವು ಸಾಧಕರಾಗಿ, ಸಿದ್ಧಸ್ಥಿತಿಗೇರಿದ ನಿಲುವನ್ನು ಅಥವಾ ಆತ್ಮದ ವಿಕಾಸದ ನಿಲುವನ್ನು ವಿಸ್ತಾರವಾಗಿ ವಿವರಿಸುತ್ತಾರೆ.

ಶಿವಕಾರುಣ್ಯಸ್ಥಲದ ಸಾಧನೆಯ ಪ್ರಥಮಾವಸ್ಥೆಯಲ್ಲಿ– ನಿಜಗುಣರು ತಮ್ಮ ಅಂತರಂಗದ ಅಳಲನ್ನು ಗುರುಶಂಭುಲಿಂಗನಲ್ಲಿ ಹೇಳಿಕೊಳ್ಳುತ್ತಾರೆ. ''ಕಾಡುವ ಬಾಧೆ ನೂರುಸಾಸಿರ ಕೋಟಿಯುಂಟು–ಶಂಕರ ನೀನೆ ತೊಲಗಿಸಿ, ಸುಖದ ಸೂರೆಗೊಡು'' ಎಂದು, ಅನನ್ಯವಾಗಿ ಪ್ರಾರ್ಥಿಸುತ್ತಾರೆ. ದೈವ ಕರುಣೆಗಾಗಿ ಮೊರೆಹೋಗುತ್ತಾರೆ. ಜೀವಸಂಬೋಧನಾಸ್ಥಲದ ಸಾಧಕನ ಎರಡನೆಯ ಹಂತದಲ್ಲಿ ''ಸುಮ್ಮನೆ ಕಾಲವನು ಕಳೆದು ಸಾವುದುಚಿತವೆ ನೆಮ್ಮಿ ನಿಜವನು ಮುಕ್ತಿ ಪಡೆಯದೆ ಮನುಜ'' ಎಂದು ಕಾಲದ ಮಹತ್ವ ಹಾಗೂ ಜೀವನದ ಸಾರ್ಥಕತೆಯನ್ನು ಕುರಿತು ಎಚ್ಚರಿಸುತ್ತಾರೆ. ಮತ್ತೆ ಹೇಳುತ್ತಾರೆ, ಚೈತನ್ಯ ಸ್ವರೂಪನಾದ ನೀನು 'ದೇಹ ನಾನು' ಎಂದು ಭ್ರಮಿಸಿರುವೆ. ಅಜ್ಞಾನಿಯಲ್ಲವೆ ನೀನು ಜೀವನೆ, ಸುಜ್ಞಾನಿ ಎಂದು ನುಡಿವರೆ, ಎಂದು ಆತ್ಮನ ನಿತ್ಯಸತ್ಯವನ್ನು ಸಾರುತ್ತಾರೆ. ಮತ್ತೆ ''ಕೆಡುವ ತನುವನೆ ಬಿಡದೆ ಬರಿಯ ರಂಜನೆಯ ಸತಿ, ರತಿಗಾಗಿ ಕೆಡೆದಿರೆಲವೋ, ಶಂಭುಲಿಂಗವ ನುಳಿದು'' ಎಂದು ದೇಹದ ಅನಿತ್ಯತೆ, ಹಾಗೂ ಭೋಗ ಜೀವನದ ರಂಜನೆಯನ್ನು ನಿರಾಕರಿಸುತ್ತಾರೆ.

ಕೈವಲ್ಯ ಪದ್ಧತಿಯ ಸಾಧನಾಪಥದ ಮೂರನೆಯ ಅವಸ್ಥೆಯಲ್ಲಿ– (ನೀತಿ ಕ್ರಿಯಾಚರ್ಯಸ್ಥಲದಲ್ಲಿ) ಸಾಧಕನಿಗೆ ಬೋಧಿಸುವ ನೀತಿ ಮನೋಜ್ಞವಾಗಿದೆ. ಇಲ್ಲಿಯ ಇಂಗಿತ ಅರಿತವನೇ ಜ್ಞಾನಿ ಎಂದು ಸ್ಪಷ್ಟಪಡಿಸುತ್ತಾರೆ. ಅಧಿಕ ಪಾಪ ಯಾವುದು ? ಪರನಿಂದೆ. ಜೀವನ್ಮರಣ ಯಾವುದು ? –ಚಿಂತೆ. ನಶ್ವರ ದೇಹದ ಉತ್ತಮ ಫಲ?– ಪರಹಿತ. ಗುಲಾಮಗಿರಿ ಯಾವುದು? ದುರಾಶೆ. ಪ್ರಾಣಕ್ಕೆ ಸಮಾನ ಅಭಿಮಾನ. ಉತ್ತಮ ಜಾಗರಣ ?– ವಿವೇಕ. ಬೆಳೆದಿಂಗಳಂತೆ ತಂಪಾದುದು? –ಶಮೆ. ಅಮೃತ ಧಾರೆ ಯಾವುದು ? ಮೃದುವಚನ. ತಡವಿಲ್ಲದೆ ನಡೆಯಬೇಕಾದ್ದು ಏನು ?– ಭವನಿವಾರಣೆ. ಅಗ್ಗಳಿಕೆ ಯಾವುದು ? ಸಚ್ಚಾರಿತ್ರ. ಮನುಷ್ಯ ಜನ್ಮದಲ್ಲಿ ಹುಟ್ಟಿ ಪಡೆಯಬೇಕಾದ ಉತ್ತಮ ಲಾಭ ಯಾವುದು ?– ಆತ್ಮಜ್ಞಾನ, ಶೌರ್ಯ ಯಾವುದು ? ಮನ್ಮಥ ಜಯ. ದೊಡ್ಡಸ್ತಿಕೆ ಯಾವುದು ? ಔದಾರ್ಯ. ಉತ್ತಮ ಆಭರಣ ಯಾವುದು ? –ವಿದ್ಯೆ. ಮಂಗಳ ಯಾವುದು ? ಸತ್ಸಂಗ. ವ್ರತ ಯಾವುದು ? ಶಿವಧರ್ಮ, ಇಹಪರದಲ್ಲಿ ಹಿತ ಯಾವುದು ? –ಧರ್ಮರತಿ. ಸದ್ಗತಿ ಯಾವುದು ?–ಶಂಭುಲಿಂಗ.

'ಎಲ್ಲರೊಡನೆ ವೈರವಿಲ್ಲದೆ ಕೂರ್ಪುದೇ ಚಂದಮಾಮಾ' ಇತ್ಯಾದಿ– ಅನಂತ ನೀತಿ ವಾಕ್ಯ ಮಾಣಿಕ್ಯಗಳ ಮೂಲಕ ಉಪದೇಶ ಮಾಡಿದ್ದಾರೆ. ಕೈವಲ್ಯದ ನಿಲುವಿಗೆ ಏರಲು ಸಾಧಕ ಈ ಗುಣಶೀಲಗಳನ್ನು ಅರಿತು ಆಚರಿಸಲು ಕರೆ ನೀಡುತ್ತಾರೆ. ಮತ್ತೆ ಹೇಳುತ್ತಾರೆ. ಜ್ಞಾನಿ ಇಹ– ಪರಗಳನ್ನು ಸಮನ್ವಯಮಾಡಿ ಬಾಳುತ್ತಾನೆ. ಇದಕ್ಕೊಂದು ಸುಂದರ ದೃಷ್ಟಾಂತವನ್ನು ಕೊಡುತ್ತಾರೆ– ಮಗುವು ತಾಯಿಯ, ಒಂದು ಮೊಲೆಯ ಹಾಲನ್ನು ಕುಡಿಯುತ್ತಿರುವಂತೆ ಇನ್ನೊಂದು ಮೊಲೆಯ ಮೇಲೆ ಕೈಹಿಡಿದು ಕೊಂಡಿರುವಂತೆ, ಮನುಷ್ಯ ಇಹಲೋಕದ ಸುಖವನ್ನು ಅನುಭವಿಸುತ್ತಾ ಪರಲೋಕದ ಸಾಧನೆ ಮಾಡಬೇಕೆಂದು ಎಚ್ಚರಿಸುತ್ತಾರೆ.

ಜೀವನದಲ್ಲಿ ಆಧ್ಯಾತ್ಮ ಸಾಧನೆ ಮಾಡಲು 'ಮನಸ್ಸು' ಬಹಳ ಮುಖ್ಯ. 'ಮನಸ್ಸೇ ಮನುಷ್ಯಾಃ ಅದರ ನಿಗ್ರಹ ತುಂಬಾ ಕಷ್ಟ' ನಿಜಗುಣರು ಹೇಳುತ್ತಾರೆ. ''ಭೂಮಿಯನ್ನು ಚರ್ಮದ ಹಾಗೆ, ಸುರುಳಿಸುತ್ತಬಹುದು ಮೇರು ಪರ್ವತವನ್ನು ಬೆರಳತುದಿಯಲ್ಲಿ ನಿಲ್ಲಿಸಬಹುದು. ಸಮುದ್ರವನ್ನು ಕುಡಿಯಬಹುದು, ಮನುಷ್ಯನ ಮನಸ್ಸನ್ನು ಕ್ಷಣಕಾಲವಾದರೂ ನಿಲ್ಲಿಸುವುದು ಅಸಾಧ್ಯ''ವೆಂದು ತಿಳಿಸಿ, ಇದಕ್ಕೆ ಪರಿಹಾರವಿಲ್ಲವೇ ? ಎಂದರೆ ಅವರೇ ಮನಸ್ಸಿನ ನಿಶ್ಚಲತೆಗೆ ಉಪಾಯವನ್ನು ಸೂಚಿಸುತ್ತಾರೆ. ಶಂಭುಲಿಂಗನ ಪ್ರೀತಿಯನ್ನು ಪಡೆಯದೆ ಸುಮ್ಮನೆ ಮನಸ್ಸನ್ನು ಗೆಲ್ಲುವುದು ಸಾಧ್ಯವಿಲ್ಲ ಎನ್ನುತ್ತಾರೆ. ಅಂದರೆ ಮನೋನಿಗ್ರಹಕ್ಕೆ ಶಂಭುಲಿಂಗನಲ್ಲಿ ಅಚಲ ಹಿಮಾಚಲದ ನಿಷ್ಠೆ ಅಗತ್ಯವೆನ್ನುತ್ತಾರೆ.

ಸಾಧಕನ ನಾಲ್ಕನೆಯ ಹಂತದ, 'ಶಿವಯೋಗ'ಸ್ಥಲದಲ್ಲಿ–ಸಾಧಕ ಏನನ್ನು ಬಯಸಬೇಕು ? ಕೋಪವಿಲ್ಲದ ತಪಸ್ಸು, ಪರಸ್ತ್ರೀ ಬಯಸದ ಇಂದ್ರಿಯ ನಿಗ್ರಹ, ದಿವ್ಯಸುಖ, ಮೋಸವಿಲ್ಲದ ಧರ್ಮದಲ್ಲಿ ಆಸಕ್ತಿ. ವ್ಯಕ್ತಿ ಕೈವಲ್ಯದ ನಿಲುವಿಗೇರಲು ಇನ್ನೇನು ಬೇಕು ? ಈ ಗುಣಗಳೇ ಸಾಕು ಎನಿಸುತ್ತದೆ. ನಿಜಗುಣರು, ಯೋಗಸಾಧನೆಯ ಗೊತ್ತುಗುರಿಗಳನ್ನು ಮಾರ್ಮಿಕವಾಗಿ ಅರ್ಥಪೂರ್ಣವಾಗಿ ತಿಳಿಸುತ್ತಾರೆ.

ಸಾಧಕ, ''ರೇಚಕ, ಪೂರಕ, ಕುಂಭಕ''ಗಳೆಂಬ ಮೂರು ವಾಯು ನಾಳಗಳು ಕೂಡಿರುವ, ಮಧ್ಯಸ್ಥಾನದಲ್ಲಿ ಮುಳುಗಿ, ಆಧ್ಯಾತ್ಮಿಕ, ಆದಿದೈವಿಕ,

ಆದಿಭೌತಿಕಗಳೆಂಬ ಮೂರು ಕೊಳೆಗಳನ್ನು ಹೋಗಲಾಡಿಸಿ ಸತ್ವ–ರಜಸ್ಸು–ತಮಸ್ಸುಗಳೆಂಬ ಮೂರು ಗುಣಗಳನ್ನು ದಾಟಿ, ಕಾಣುವ ಜ್ಯೋತಿಯಲ್ಲಿ ಮನಸ್ಸು–ಉಸಿರು–ದೃಷ್ಟಿ ಈ ಮೂರು ಎರಕಹೊಯ್ದು, ಪ್ರತಿಮೆಯಂತೆ ನಿಶ್ಚಲವಾಗಬೇಕೆಂದು ಯೋಗದ ವೈಶಿಷ್ಟ್ಯವನ್ನು ತಿಳಿಸುತ್ತಾ, ಚಿತ್ತವೃತ್ತಿ ನಿರೋಧದ ತತ್ತ್ವವನ್ನು ಸಾರುತ್ತಾರೆ.

ನಿಜಗುಣರು ಶಿವಯೋಗ ಸಾಧನೆಯ ಹಾಗೂ ಶಿವಪೂಜೆಯ ಮಹತ್ತ್ವವನ್ನು ಅತ್ಯಂತ ಸೊಗಸಾಗಿ ಗುಣಾತ್ಮಕವಾಗಿ –ಹೀಗೆ ವಿವರಿಸುತ್ತಾರೆ–ಶಿವಪೂಜೆ ಯಾವುದು? ಕೇಳಿ–

ಶಿವತತ್ತ್ವ ಮೂವತ್ತಾರು ತತ್ತ್ವಗಳ ನಿಶ್ಚಯ ಜ್ಞಾನವೇ ನಮಸ್ಕಾರ, ಯೋಗ ಮಾರ್ಗದಿಂದ, ಪರತರ ಶಂಭುಲಿಂಗದಲ್ಲಿ ಲೀನವಾಗುವಂತೆ ಮಾಡುವುದೇ ವಿಸರ್ಜನೆ. ಇದು ನಿಜವಾದ ಶಿವಪೂಜೆ ಎಂದು ನಿಜಗುಣರ ನಿಲುವು. ಮತ್ತೆ ಹೇಳುತ್ತಾರೆ–ನಿರ್ಮಲಶಾಂತಿ ಅಭಿಷೇಕ ; ಭಕ್ತಿ–ವಸ್ತ್ರ; ಶಿವಧ್ಯಾನ–ಗಂಧ ; ಮನಸ್ಸೇ ಹೂ ; ವಿಷಯಾಭಿಲಾಷೆ ಇಲ್ಲದಿರುವುದೇ ಧೂಪ ; ಭೇದ ಬುದ್ಧಿ, ಇಲ್ಲದಿರುವುದೇ–ನೈವೇದ್ಯ ; ಸತ್ವಗುಣಗಳೇ–ತಾಂಬೂಲ ; ಪ್ರಣವನಾದವೇ–ವಾದ್ಯ ; ಆ ಪರಶಿವನೇ ನಾನು, ಎಂಬುದು ಪ್ರದಕ್ಷಿಣೆ; ಎಂಥ ವಿಶಾಲ ತತ್ತ್ವದ–ಗುಣಾತ್ಮಕ ಮಹಾಪೂಜೆ ಇದು!! ಇದುವೆ ಪ್ರಾಣಲಿಂಗದ ಪೂಜೆ.

ಕೊನೆಯ 'ಜ್ಞಾನ ಪ್ರತಿಪಾದನಾಸ್ಥಲ'ದಲ್ಲಿ ಸಾಧಕನಿಗೆ, ಶ್ರೀನಿಜಗುಣರು ಜ್ಞಾನದ ಮಹತ್ತ್ವವನ್ನು ತಿಳಿಸುತ್ತಾರೆ :

"ಬ್ರಹ್ಮವೆಂಬುದು ನಿನ್ನಲ್ಲಿದೆ, ಅದನ್ನು ನೀನು ವಿವೇಕದಿಂದ ಅನುಭವಿಸಿದರೆ ಮುಕ್ತ. ಹಿಂದೆ, ಇಂದು, ಹಾಗೂ ಮುಂಬರುವ ದೇಹಗಳು, ಬೇರೆಯಾಗಿದ್ದರೂ, ಅವುಗಳಲ್ಲಿ ಇದ್ದವನು ನೀನೊಬ್ಬನೇ (ಆತ್ಮ) ಕರ್ಮಾನುಸಾರವಾಗಿ ದೇಹಗಳು ಭಿನ್ನವಾದವು, ಜ್ಞಾನಾ–ಜ್ಞಾನಗಳನ್ನು ಅದ್ವಿತೀಯವಾಗಿ ಅರಿಯುವ ಚಿತ್ಸ್ವರೂಪನೇ ನೀನಾದ್ದರಿಂದ, ನಿನ್ನಲ್ಲಿಯೇ 'ಬ್ರಹ್ಮ'ವನ್ನು ತಿಳಿ–ಜಗತ್ತು ಅಸ್ಥಿರ–ಬ್ರಹ್ಮವೊಂದೇ ಸ್ಥಿರ. "ಅರಿವೇ ತಾನೆಂದು ತಿಳಿದುಕೊಳ್ಳುವುದೇ ಮುಕ್ತಿ" "ಮನಸ್ಸಿನ ಸಂಕಲ್ಪ ವಿಕಲ್ಪಗಳು ಹೋಗಿ, ಜೀವಾಭಾವವನ್ನು ನೀಗಿ ಶಂಭುಲಿಂಗನ ಪ್ರೀತಿಯು ತುಂಬಿ ಕೈವಲ್ಯ

ಪಡೆಯುವವನೇ ಯೋಗಿ'' ಎಂದು ತಿಳಿಸುತ್ತಾ ಸ್ಥೂಲ-ಸೂಕ್ಷ್ಮ- ಕಾರಣವೆಂಬ, ಮೂರು ದೇಹಗಳು, ಜಾಗ್ರತ-ಸ್ವಪ್ನ-ಸುಷುಪ್ತಿ, ಎಂಬ ಮೂರು ಅವಸ್ಥೆಗಳು, ಸತ್ವ-ರಜ-ತಮವೆಂಬ ಮೂರು ಗುಣಗಳು, ವಿಶ್ವ-ತೈಜಸ-ಪ್ರಜ್ಞರೆಂಬ ಮೂರು ಆತ್ಮರು, ಆಣವ--ಮಾಯಾ- ಕಾರ್ಮಿಕವೆಂಬ ಮಲತ್ರಯಗಳ ದೋಷಗಳಿಂದ ದೂರನಾಗಿ ಬ್ರಹ್ಮಸ್ವರೂಪವೇ ತಾನೆಂದು ತಿಳಿದ ಮೇಲೆ, ಹುಟ್ಟು-ಸಾವುಗಳುಂಟೆ ? ಎನ್ನುತ್ತಾರೆ. ಈ ಸ್ಥಿತಿಗೆ ಏರಿದ ನಿಲುವೇ ಕೈವಲ್ಯ-ಇದನ್ನು ಸಮಗ್ರವಾಗಿ ಬೋಧಿಸುವುದೇ ಕೈವಲ್ಯ ಸಾಹಿತ್ಯ, ಎಲ್ಲರೂ ಕೈವಲ್ಯವನ್ನು ಪಡೆಯಿರಿ ಎನ್ನುವುದೇ ನಿಜಗುಣರ ಸಂದೇಶ, ಇದೇ ಅವರ ನಿಲುವು.

ನಿಜಗುಣರ ಸಮಗ್ರ ಕೈವಲ್ಯ ಸಾಹಿತ್ಯದಲ್ಲಿ ಅದ್ವೈತ ತತ್ತ್ವವೇ ವಿಶೇಷವಾಗಿ ಪ್ರತಿಪಾದಿತವಾಗಿದೆ. ಆತ್ಮ, ಬ್ರಹ್ಮತತ್ತ್ವವೇ ಪರಮಾರ್ಥ ಶಾಸ್ತ್ರ. ಬೃಹವ್ರೀಹಿ ವೃದ್ಧೌ ಧಾತುವಿನಿಂದ ನಿಷ್ಪನ್ನವಾದುದು ಬ್ರಹ್ಮ ಶಬ್ದ. ''ಬ್ರಹತ್ವಾತ್, ಬ್ರಹ್ಮಣತ್ವಾತ್ ಚ ಆತ್ಮಾಬ್ರಹ್ಮೇತಿ ಕೀರ್ತ್ಯತೇ'' ಎನ್ನುವ ಮಾತು ಇದೆ. ''ಬ್ರಹ್ಮಸತ್ಯಂ-ಜಗನ್ಮಿಥ್ಯಾ-ಜೀವೋ ಬ್ರಹ್ಮೈವ ನಾಪರಃ'' ಇದು ಕೈವಲ್ಯ ಸಾಹಿತ್ಯದ ಮೂಲ ತಿರುಳು.

'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಇದು ಬ್ರಹ್ಮನ ಸ್ವರೂಪ ಲಕ್ಷಣ. ಕಾಲತ್ರಯುಪಿ ಅಬಾಧ್ಯಮಾನತ್ವಾತ್-ಅಂದರೆ ತ್ರಿಕಾಲದಲ್ಲೂ ಒಂದೇ ರೀತಿಯಾಗಿರುವ ಸತ್ಯವನ್ನು ಬ್ರಹ್ಮನಲ್ಲಿ ಕಾಣುವುದರಿಂದ 'ಬ್ರಹ್ಮ ಸತ್ಯ' ಎಂದರು. ಈ ಜಗತ್ತು ಕ್ಷಣ-ಕ್ಷಣಕ್ಕೂ ಬದಲಾಗುತ್ತಿರುವುದರಿಂದ ಇದು 'ಮಿಥ್ಯೆ' ಎಂದರು. (ಪ್ರಪಂಚೋ ಯದಿ ವಿದ್ಯೇತ ಸವರ್ತೇತ ನ ಸಂಶಯಃ)

ಪ್ರಪಂಚ ಸೃಷ್ಟಿ-ಸ್ಥಿತಿ-ಲಯಗಳಿರುವುದರಿಂದ, ವಿನಾಶಿ, ಯಾವುದು-ಹುಟ್ಟುತ್ತದೋ ಅದು ನಷ್ಟವಾಗುತ್ತದೆ. (ಯಜ್ಜನ್ಯಂ ತದನಿತ್ಯಂ) ಅದ್ವೈತ ವೇದಾಂತದ, ಪರಿಕಲ್ಪನೆಯಲ್ಲಿ, ಪಾರಮಾರ್ಥಿಕ ಸತ್ಯವೇ ಬ್ರಹ್ಮ, ವ್ಯಾವಹಾರಿಕ ಸತ್ಯವೇ ಜಗತ್ತು, ಪ್ರಾತಿಭಾಸಿಕ ಸತ್ಯವೇ ನಮಗೆ ಕಾಣುವುದು (ಹಗ್ಗದಲ್ಲಿ ಹಾವಿನ ಭ್ರಮೆ).

ಮೋಕ್ಷವೆಂದರೆ ಹೊಸದಾಗಿ ಪಡೆಯುವುದಲ್ಲ; ಅದು ಆತ್ಮದ ಸಿದ್ಧರೂಪ. ನಮ್ಮಲ್ಲಿರುವ ಅಜ್ಞಾನದ ಕತ್ತಲೆಯನ್ನು ಜ್ಞಾನದ ಬೆಳಕಿನಿಂದ

ಪಕ್ಕಕ್ಕೆ ಸರಿಸಿದಾಗ, ಬೆಳಕಿನ ಅನುಭವವಾಗುತ್ತದೆ. ಇದೇ 'ಮೋಕ್ಷ' 'ಕೈವಲ್ಯ' ಈಶೋಪನಿಷತ್ತು ಇದನ್ನೇ ಸಮರ್ಥಿಸುತ್ತದೆ.

''ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ–ಮುಖಂ ತತ್ತ್ವಂ–ಪೂಷನ್–ಅಪಾವೃಣು ಸತ್ಯಧರ್ಮಾಯ ದೃಷ್ಟಯೇ'' ಬ್ರಹ್ಮನಿಗಿಂತ ತಾನು ಭಿನ್ನನಲ್ಲ ಎನ್ನುವ ಸ್ಥಿತಿಯೇ, ''ಮೋಕ್ಷ'' ಇದು ಸ್ವ–ಸ್ವರೂಪ ದರ್ಶನ. (ಸ್ವ–ಸ್ವರೂಪಾನಂದಾವಿರ್ಭಾವ ಏವ ಮೋಕ್ಷಃ) ಜೀವಿಯು ದೇಹಧಾರಿ ಯಾಗಿರುವಾಗಲೇ ಬ್ರಹ್ಮಜ್ಞಾನವನ್ನು ಪಡೆದು, ಸಂಸಾರದ ಸಕಲ ದುಃಖದಿಂದ ವಿಮುಕ್ತನಾಗಿ, ಬ್ರಹ್ಮಾನಂದದಿಂದಿರುವುದೇ ಜೀವನ್ಮುಕ್ತಿ. ಇದೇ ಕೈವಲ್ಯ ಸ್ಥಿತಿ.

ಸಾಧಕ ಕೈವಲ್ಯ ಸ್ಥಿತಿಗೇರುವುದು ಸಾಹಸ ಕೆಲಸ, ಒಂದು ಭೌತಿಕ ಪರ್ವತವನ್ನೇರಿ ಶಿವಶಿಖರವನ್ನು ತಲುಪಿದ ತೇನಸಿಂಗನ ಸಾಹಸಕ್ಕಿಂತಲೂ ಕಠಿಣವಾದದ್ದು. ಇದಕ್ಕೆ ಮನಸ್ಸಿನ ನಿಶ್ಚಲತೆ, ಧೃಢಸಂಕಲ್ಪ, ವೈರಾಗ್ಯಭಾವ ಮುಖ್ಯವಾಗುತ್ತವೆ. ವೈರಾಗ್ಯ ಮನಸ್ಸಿನ ಸ್ಥಿತಿ. ಇದರಲ್ಲಿ ಡಾಂಭಿಕತೆ ಇರಕೂಡದು. ಯಾವುದೂ ನನ್ನದಲ್ಲ, ಎಲ್ಲಾ ದೇವರದು ಎಂದು ಸ್ವಂತ ಸುಖಕ್ಕಾಗಿ ಏನನ್ನು ಬಯಸದೆ ಇರುವುದು ನಿಜವಾದ ತ್ಯಾಗ, ಇದು ಶುದ್ಧವಾದ ವಿರಕ್ತಿ, ನಮ್ಮ ವೈರಾಗ್ಯ ಶ್ರೀಮಂತನ ಸಹಜ ವೈರಾಗ್ಯ ವಾಗಬೇಕು. ಬಡವನ ಅಭಾವ ವೈರಾಗ್ಯವಾಗಬಾರದು. ಭಕ್ತಿಎಂದರೆ, ಬರೀ ಭಜನೆ, ಧ್ಯಾನವಲ್ಲ, ಅದು ಕೆಲಸವಾಗಬೇಕು. ಆ ಕೆಲಸ ಲೋಕ ಜೀವನಕ್ಕೆ ಉಪಯೋಗವಾಗಬೇಕು. ನಮ್ಮದು ಕಣ್ಣೀರಿನ ಭಕ್ತಿಯಾಗಬಾರದು, ಗಟ್ಟಿ ದುಡಿತದ ಭಕ್ತಿಯಾಗಬೇಕು. ವಿಚಾರವಂತರಿಗೆ ಬಾಳ್ವೆ ಒಳ್ಳೆಯದೇ ಹೊರತು, ಕೆಟ್ಟದ್ದಲ್ಲವೆಂದು ವೇದಾಂತ ಬೋಧಿಸಿದೆ.

ನಿಜಗುಣರು ಬೋಧಿಸುವ ''ಶ್ರೀಗುರು ವಚನೋಪದೇಶವ ನಾಲಿಸಿದಾಗಳೇ ಅಹುದು ನರರಿಗೆ ಮುಕುತಿ'' ಎನ್ನುವ ಪದ್ಯದ ಸಾರಾಂಶ ವನ್ನೇ ತೈತ್ತರಿಯ ಉಪನಿಷತ್ತು ಬೋಧಿಸುತ್ತದೆ. ಸತ್ಯನುಡಿ, ಧರ್ಮದಂತೆ ನಡೆ, ಒಳ್ಳೆಯದನ್ನು ಸಾಧಿಸುವ ಎಚ್ಚರವಿರಲಿ, ಗುರು–ಹಿರಿಯರ, ಬಂಧು ಗಳ ಹಾಗೂ ಲೋಕವಿಷಯದಲ್ಲಿ ನೀತಿಯಿಂದ ಸರ್ವ ಹಿತಕರವಾದ ರೀತಿಯಲ್ಲಿ ನಡೆ. ಪುಣ್ಯ ಕಾರ್ಯಮಾಡು, ಅನ್ನ ಪಾನಾದಿ ಜೀವನ

ಸಾಮಗ್ರಿಯನ್ನು ಸಮೃದ್ಧಗೊಳಿಸು, ಯೋಗಕ್ಷೇಮಗಳನ್ನು ಸಾಧಿಸು, ಜಗತ್ತಿನಲ್ಲಿ ಸಾರಭೂತವಾದದ್ದು ದೈವಾಂಶ, ಎಲ್ಲ ವ್ಯಾಪಾರವೂ ದೈವೀ ಸೇವೆ. ಎಲ್ಲವೂ ದೈವ ಪ್ರಸಾದ. ಈ ಬುದ್ಧಿಯಿಂದ ಬದುಕಿ ಬಾಳಿದರೆ ದೇವರ ಸನ್ನಿಧಿ ಸೇರುವೆ. ಈ ಬುದ್ಧಿ ನಮ್ಮ ಜನಕ್ಕೆ ಬಂದಾಗ ಮಾತ್ರ ಕೈವಲ್ಯ ಸಾಹಿತ್ಯದ ಅರ್ಥ ಸಾರ್ಥಕವಾಗುತ್ತದೆ. ದೈವ ಸ್ವರೂಪ–ಆತ್ಮ ಸ್ವರೂಪ ಇವು ಅನುಭಾವದ ಅಂತರ್‌ದೃಷ್ಟಿಯಿಂದ ಕಾಣುವಂತವುಗಳು. ಬುದ್ಧಿ– ಮನಸ್ಸುಗಳ ಪರಿಪಾಕದಿಂದ ಇವುಗಳ ಸಿದ್ಧಿ. ಜ್ಞಾನವನ್ನು, ಶಾಸ್ತ್ರ ವ್ಯಾಸಂಗದಿಂದ ಸಂಪಾದಿಸಿದರೆ, ಹೃದಯದ ಬೆಳಕನ್ನು–ಲೋಕಜೀವನ, ಸಂಪರ್ಕದಿಂದಲೇ ಸಂಪಾದಿಸಬೇಕು. ಲೋಕ ಜೀವನದ ವಿಸ್ತಾರದಲ್ಲಿ ಆತ್ಮವನ್ನು ವಿಸ್ತಾರ ಮಾಡಿಕೊಳ್ಳಬೇಕು.

"ದೇವರೇ ನಮ್ಮ ತಂದೆ
ನಾವೆಲ್ಲ ಒಂದೇ"

ಈ ಮಾತು ಹೇಳುವುದು ಸುಲಭ. ಇದರ ಅರ್ಥ ನಮ್ಮ ಬದುಕಿನಲ್ಲಿ ಕಾಣಬೇಕಾದರೆ, ನಾವು ಸ್ವಾರ್ಥವನ್ನು ಸಂಪೂರ್ಣವಾಗಿ ಅಳಿಸಬೇಕಾಗುತ್ತದೆ.

ಅದಂ ತಮಃ ಪ್ರವಿಶಂತಿ । ಯೇ ವಿದ್ಯಾಮುಪಾಸತೇ ।
ತತೋ ಭೂಯ ಇವತೇ ತಮೋ । ಯಉ ವಿದ್ಯಾಯಾಂ ರತಾಃ ॥

ಅವಿದ್ಯೆಯಿಂದ ಲೌಕಿಕವನ್ನೇ ಆರಾಧಿಸುವವರು, ಕುರುಡುಗತ್ತಲೆಗೆ ಧಾವಿಸಿದರೆ, ವಿದ್ಯೆಯಿಂದ, ಆಧ್ಯಾತ್ಮವನ್ನು, ಉಪಾಸಿಸುವವರು, ಅದಕ್ಕಿಂತ ಕಾಡುಗತ್ತಲೆಗೆ ಪ್ರವೇಶಿಸುತ್ತಾರೆಂದು, ಉಪನಿಷತ್ತು ಎಚ್ಚರಿಸುತ್ತದೆ. ಆದ್ದರಿಂದ ನಮ್ಮ ಬದುಕು ಬೆಳಕಾಗಲು, ಅಲೌಕಿಕ ಹಾಗೂ ಲೌಕಿಕ ಎಂಬ ಎರಡೂ ವಿದ್ಯೆಗಳು ಬೇಕು. ಕೊನೆಯದಾಗಿ ಕೈವಲ್ಯ ಪದ್ಧತಿಯ, 'ಜ್ಯೋತಿ ಬೆಳಗುತಿದೆ' ಈ ಮಹೋನ್ನತ ಪದ್ಯದ ಆಶಯ, ಕೈವಲ್ಯ ಸಾಹಿತ್ಯಕ್ಕೆ ಶಿಖರ ಪ್ರಾಯವಾಗಿದೆ. ಆ ಜ್ಯೋತಿ, ಅಂತರಂಗದ ಬೆಳಗು, ಅದು ಅಣುಮಾತ್ರವೂ ಚಲಿಸದಿರುವ ನಿಶ್ಚಲ ಬೆಳಕು. ಅದು ಬೇರೆ ಬೆಳಕಲ್ಲ; ಶಂಭುಲಿಂಗವೇ ತಾನಾಗಿ ಪರಿಣಮಿಸಿರುವ 'ಮೋಕ್ಷ ಚಿಂತಾಮಣಿ'. ಇದು ಮಂಗಳಾರತಿ ಗೀತೆ ಮಾತ್ರವಲ್ಲ; ಮಾತಿಗೆ ಮೀರಿದ ಅನುಭಾವ ಜ್ಯೋತಿ.

ಕೈವಲ್ಯ ಪದ್ಧತಿ, ಕೈವಲ್ಯ ಸಾಹಿತ್ಯಕ್ಕೆ ಕಳಶಪ್ರಾಯವಾಗಿದೆ. ಕನ್ನಡ ಸಾಹಿತ್ಯದ–ಕೈವಲ್ಯ ಸಾಹಿತ್ಯಕ್ಕೆ ಅದರ ಎಲ್ಲ ಧಾರೆಗಳಿಗೂ ಮೂಲ ಸ್ರೋತ್ರ ಶ್ರೀ ನಿಜಗುಣರು.

ಕೈವಲ್ಯ ಸಾಹಿತ್ಯದಲ್ಲಿ 'ಕೈವಲ್ಯ ಪದ್ಧತಿ ಮಕುಟಮಣಿ,'

ಮುಮುಕ್ಷುಗಳಿಗೆ–ದೀಪ ಸ್ಥಂಭ, ಸಾಧಕರ ಕೈದೀವಿಗೆ. ಅನುಭಾವದ ನೆಲೆ–ಕಲೆ–ಮುಕ್ತಿಯ ದರ್ಶನವನ್ನು ಇಲ್ಲಿ ಕಾಣಬಹುದು. ನಿಜಗುಣರ ಕೈವಲ್ಯ ಸಾಹಿತ್ಯವನ್ನು ಓದಿದ ಮೇಲೆ ಇವರು ನಿಷೇಧಾತ್ಮಕ ತತ್ತ್ವ (Negative Philosophy) ವನ್ನು ಬೋಧಿಸುತ್ತಾರೆ. ಎನ್ನುವ ಅವಸರದ ತೀರ್ಮಾನಕ್ಕೆ ಬರಬಾರದು. ಜ್ಞಾನಿ ಈ ಜೀವನದಲ್ಲಿ ಲೌಕಿಕ ಬದುಕನ್ನು ಹಸನುಗೊಳಿಸುತ್ತಾ ಪಾರಮಾರ್ಥಿಕದೆಡೆಗೆ ಸಾಗುವ ದಾರಿ ತೋರಿದ್ದಾರೆ. ಜೀವನ ನಶ್ವರ, ಜಗತ್ತು ಅಸ್ಥಿರ, 'ಬ್ರಹ್ಮಸ್ಥಿರ', ಎನ್ನುವ ಚರಮ ಸತ್ಯವನ್ನು ತಿಳಿಸಿ, ಈ ಲೋಕದಲ್ಲಿ ಸಂಸಾರವೆಂದರೆ, ಅದು ಹೊರಗಿಲ್ಲ ನಮ್ಮ ಮನಸ್ಸಿನಲ್ಲಿದೆ ಎಂದು ತಿಳಿಸುತ್ತಾರೆ. ಸಂಸಾರದಲ್ಲಿ ಅಂಟಿಯೂ, ಅಂಟದಂತಿರು, ಎಚ್ಚರವಾಗಿರು, ನಿನ್ನ ಗುರಿಯಕಡೆಗೆ ಸದಾಲಕ್ಷ್ಯವಿಡು, ಬದುಕಿನ ಸಾರ್ಥಕತೆಯನ್ನು ಅರಿ, ಈ ಜಗತ್ತಿನಿಂದ ಓಡಿ ಹೋಗಬೇಡ. ನಿನ್ನ ಪಾಲಿನ ಕರ್ತವ್ಯವನ್ನು ಶಂಭುಲಿಂಗನ ಸಾಕ್ಷಿಯಾಗಿ ನಿರ್ವಹಿಸು, ಹೇಡಿಯಾಗಬೇಡ. ಆಧ್ಯಾತ್ಮ ಧೀರನಾಗು. ಏಳು ! ಎಚ್ಚರವಾಗು !! ಗುರಿ ಮುಟ್ಟುವವರೆಗೂ ನಿಲ್ಲಬೇಡ ಎನ್ನುವ ಉಪನಿಷತ್ ಸಂದೇಶವನ್ನೇ ನಿಜಗುಣರ ಕೈವಲ್ಯ ಸಾಹಿತ್ಯದಲ್ಲಿ ಸಾರಿ–ಸಾರಿ ಹೇಳುತ್ತಾರೆ. ಇದೇ ನಿಜಗುಣರ ನಿಜವಾದ ನಿಲುವಾಗಿದೆ.

■■

# ಕೈವಲ್ಯ ದರ್ಪಣ : ಒಂದು ಅವಲೋಕನ

ಯೋಗಿಯ ಕಂಡಿರೇನೆ ಪರಶಿವ ಮಹಾ
ಯೋಗಿಯ ಕಂಡಿರೇನೆ
ಆಗಮ ನಿಗಮಾಗೋಚರ ಶಿಶುವಾಗಿ
ತೂಗಾಡುತಿಹನು ಭಕ್ತರ ಮನೋಭಾವದೊಳ್ ॥

## ಕೈವಲ್ಯ ಸಾಹಿತ್ಯ :

ಕನ್ನಡ ಸಾಹಿತ್ಯದ ವಿಭಿನ್ನ ಪ್ರಕಾರಗಳಲ್ಲಿ ಇತ್ತೀಚೆಗೆ ತತ್ತ್ವಪದಸಾಹಿತ್ಯ ಅಥವಾ ಕೈವಲ್ಯ ಸಾಹಿತ್ಯ ಎನ್ನುವ ವಿಶಿಷ್ಟ ಪ್ರಕಾರವನ್ನು ವಿದ್ವಾಂಸರು ಗುರುತಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ತತ್ತ್ವ ಪದಗಳು, ಕೈವಲ್ಯ ಪದಗಳು, ಅನುಭಾವಗೀತೆಗಳು ಹಾಗೂ ಸ್ವರವಚನಗಳು ಎಂದು ಬೇರೆ–ಬೇರೆ ಹೆಸರಿನಿಂದ ಕರೆಯುವ ಈ ಪದಗಳ ಸಾಹಿತ್ಯ ವಿಪುಲವಾಗಿದೆ ; ವಿಸ್ತಾರವಾಗಿದೆ. ಆದರೆ ಇವುಗಳ ಆಶಯ ಒಂದೇ ಆಗಿದೆ. ಜನಜೀವನವನ್ನು ಹಸನಗೊಳಿಸಲು ಸೃಷ್ಟಿಯಾದ ಈ ಸಾಹಿತ್ಯದ ಹಾಡುಗಳು ಅಂತರಂಗದ ಅರಿವಿನ ಮೂಲಭೂತ ತತ್ತ್ವವನ್ನು ಪ್ರತಿಪಾದಿಸುವುದರಿಂದ ಇವು ತತ್ತ್ವ ಪದಗಳೂ ಹೌದು ; ಅನುಭಾವ ಗೀತೆಗಳೂ ಹೌದು. ಜೀವ–ಶಿವ–ಹಾಗೂ ಈ ಜಗತ್ತನ್ನು ಕುರಿತ ಭಕ್ತಿ–ಜ್ಞಾನ–ವೈರಾಗ್ಯದ ವಿಷಯಗಳ ವಿವೇಚನೆಯೇ ಕೈವಲ್ಯ ಸಾಹಿತ್ಯದ ಕೇಂದ್ರವಸ್ತು.

ಕನ್ನಡ ಸಾಹಿತ್ಯ ಚರಿತ್ರೆಯನ್ನು ಅನುಲಕ್ಷಿಸಿ ಹೇಳುವುದಾದರೆ ಕ್ರಿ.ಶ. ೧೫ನೇ ಶತಮಾನಕ್ಕೆ ಸೇರಿದ ನಿಜಗುಣ ಶಿವಯೋಗಿಗಳು ಕೈವಲ್ಯ ಸಾಹಿತ್ಯದ ಆದ್ಯ ಪ್ರವರ್ತಕರು ಆಧ್ಯಾತ್ಮದ ಗಹನ ಗಂಭೀರ ತತ್ತ್ವಗಳನ್ನು ಜನ ಸಾಮಾನ್ಯರಿಗಾಗಿ ಗೀತೆಗಳ ಮೂಲಕ ಸರಳ ಹಾಗೂ ಸುಲಭರೂಪದಲ್ಲಿ ಬೋಧಿಸಿದ್ದಾರೆ. ಇದಕ್ಕೆ ಅವರ ಕೈವಲ್ಯ ಪದ್ಧತಿ ಕೃತಿಯೇ ಸಾಕ್ಷಿಯಾಗಿದೆ. ಇವರ ಹಾದಿಯಲ್ಲಿಯೇ ಸಾಗಿದ, ಶ್ರೀ ಸರ್ಪಭೂಷಣ ಶಿವಯೋಗಿಗಳು ತಮ್ಮ ತತ್ತ್ವಪದಗಳ ಸಂಕಲನ ಕೃತಿಗೆ "ಕೈವಲ್ಯ ಕಲ್ಪವಲ್ಲರಿ" ಎಂದು

ಕರೆದಿದ್ದಾರೆ. ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳು ತಮ್ಮ ತತ್ತ್ವ ಪದಗಳ ಕೃತಿಗೆ ಕೈವಲ್ಯ ದರ್ಪಣವೆಂದು ಕರೆದಿದ್ದಾರೆ. ಈ ಮೂರು ಕೃತಿಗಳು ಕನ್ನಡ ಕೈವಲ್ಯ ಸಾಹಿತ್ಯ ಕೀರ್ತಿ ಶಿಖರಗಳು. ೧೮ ಹಾಗೂ ೧೯ನೆಯ ಶತಮಾನವನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕೈವಲ್ಯ ಸಾಹಿತ್ಯದ ಯುಗವೆಂದು ಕರೆಯಬಹುದಾಗಿದೆ. ಈ ಕಾಲದಲ್ಲಿ, ಮಹಲಿಂಗರಂಗ, ಚಿದಾನಂದ ಅವಧೂತರು, ಮುಪ್ಪಿನ ಷಡಕ್ಷರಿಗಳು ಮೈಲಾರ ಬಸವಲಿಂಗ ಶರಣರು, ಕಡಕೋಳದ ಮಡಿವಾಳಪ್ಪನವರು, ಕೂಡಲೂರೇಶ, ನಿಂಬರಗಿ ಮಹಾರಾಜ, ಶಂಕರಾನಂದ, ಶಿಶುನಾಳ ಶರೀಫ, ನಾಗಲಿಂಗಯತಿ, ಹೀಗೆ ಇದು ಕನ್ನಡ ಸಾಹಿತ್ಯದಲ್ಲಿ ಸಾಗಿ ಬಂದ ಕೈವಲ್ಯ ಸಾಹಿತ್ಯದ ಬಹುದೊಡ್ಡ ಪರಂಪರೆ. ತತ್ತ್ವಪದಕಾರರು ತಾವು ರಚಿಸಿದ ಹಾಡುಗಳಿಗೆ–ತತ್ತ್ವ ಪದಗಳೆಂದೇ ಕರೆದಿದ್ದಾರೆ. ರೂಪ–ರಚನೆಯ ದೃಷ್ಟಿಯಿಂದ ಅವು ಹಾಡು ಗಳಾದರೂ, ವಸ್ತುವಿನ ದೃಷ್ಟಿಯಿಂದ ಎಲ್ಲವೂ ತತ್ತ್ವಪದಗಳೇ, ಇವೆಲ್ಲವುಗಳ ಹಾದಿ ಕೈವಲ್ಯವಾದ್ದರಿಂದ ಇವುಗಳನ್ನು ಕೈವಲ್ಯ ಪದಗಳೆಂದು ವಿದ್ವಾಂಸರು ಗುರುತಿಸಿದ್ದಾರೆ.

'ಕೈವಲ್ಯ' ಶಬ್ದಕ್ಕೆ ಮೋಕ್ಷ, ಕೈವಲ್ಯ, ನಿರ್ವಾಣ ಎನ್ನುವ ಪರ್ಯಾಯ ಪದಗಳಿವೆ. ಕೈವಲ್ಯಪದಕ್ಕೆ ಲೌಕಿಕ ಸಂಪರ್ಕದಿಂದ ದೂರ ನಿಲ್ಲುವ ನಿರ್ಲಿಪ್ತ ಸ್ಥಿತಿ ಎನ್ನುವ ಅರ್ಥದಿಂದ ಹಿಡಿದು ಶಿವ–ಜೀವೈಕ್ಯರ ಸಮರಸದಿಂದ ಲಭಿಸುವ ನಿರ್ವಿಕಲ್ಪ ಸ್ಥಿತಿ ಎನ್ನುವವರೆಗೂ ಇದರ ಅರ್ಥ ವಿಸ್ತಾರ ಬೆಳೆದಿದೆ. ಶಿವ ಜೀವರ ಅವಿನಾಭಾವ ಸಂಬಂಧದಿಂದ ಮೂಡಿದ ಅನುಭಾವವನ್ನು 'ಕೈವಲ್ಯ'ವೆಂದು ಕರೆಯುತ್ತಾರೆ. ಈ ಅನುಭಾವಕ್ಕೆ ಕಾರಣವಾದ ಸಾಹಿತ್ಯವನ್ನು ಕೈವಲ್ಯ ಸಾಹಿತ್ಯವೆಂದು ಕರೆದಿದ್ದಾರೆ.

'ಕೈವಲ್ಯ' ಎನ್ನುವ ಹೆಸರಿನಿಂದ ಒಂದು ಕೃತಿಯನ್ನು ಕನ್ನಡದಲ್ಲಿ ರಚಿಸಿದವರು ಶ್ರೀ ನಿಜಗುಣರೇ ಮೊದಲಿಗರೆಂದು ತೋರುತ್ತದೆ. ಈ ಕೃತಿಯಿಂದ ಪ್ರಭಾವಿತರಾಗಿ ಶ್ರೀ ಸರ್ಪಭೂಷಣ ಶಿವಯೋಗಿಗಳು 'ಕೈವಲ್ಯ ಕಲ್ಪವಲ್ಲರಿ' ರಚಿಸಿದರೆ, ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳು 'ಕೈವಲ್ಯದರ್ಪಣ'ವನ್ನು ರಚಿಸಿದ್ದಾರೆ. ಈ ಶಿವಯೋಗಿತ್ರಯರ ಈ ಮೂರು ಕೃತಿಗಳು ಕನ್ನಡ ಕೈವಲ್ಯ ಸಾಹಿತ್ಯದ ಅಡಿಗಲ್ಲುಗಳು ಹಾಗೂ ಕನ್ನಡ ಕೈವಲ್ಯ ಸಾಹಿತ್ಯದ ಪ್ರಸ್ಥಾನತ್ರಯಗಳು.

ಮನುಷ್ಯನ ವಿವೇಚನೆ ವಿಕಾಸವಾದಂತೆ ನಾನಾರು ? ಎಲ್ಲಿಂದ ಬಂದೆ ? ಎಲ್ಲಿ ಇದ್ದೇನೆ ? ಹೋಗುವುದೆಲ್ಲಿಗೆ ? ಈ ಬದುಕಿನಲ್ಲಿ ಸಾಧನೆ ಮಾಡಬೇಕಾದುದೇನು ? ಸಾರ್ಥಕ ಬದುಕು ಯಾವುದು ? ಇತ್ಯಾದಿ ಪ್ರಶ್ನೆಗಳು ಮನುಷ್ಯನನ್ನು ಕಾಡುತ್ತಲೇ ಇವೆ. ಇವುಗಳಿಗೆ ಉತ್ತರವನ್ನು ಹುಡುಕುವದಕ್ಕಾಗಿಯೇ ಮನುಷ್ಯ ಆಧ್ಯಾತ್ಮ ಸಾಧನೆ ಮಾಡಬೇಕಾಗಿದೆ. ಕೇನ, ಪ್ರಶ್ನೆ, ಕಠೋಪನಿಷತ್ತುಗಳ ಕಾಲದಿಂದಲೂ ಈ ಪ್ರಶ್ನೆಗಳು ಮನುಷ್ಯನಿಗೆ ಸವಾಲುಗಳಾಗಿ ಕಾಡುತ್ತಿವೆ. ಎಲ್ಲೋ ವಿರಳರಲ್ಲಿ ಅತಿ ವಿರಳರಾದ ಸಂತ ಮಹಾಂತರು ಈ ಪ್ರಶ್ನೆಗಳಿಗೆ ಉತ್ತರ ಕಂಡಿದ್ದಾರೆ. ಬಹುಪಾಲು ಜನ ಅವುಗಳಿಗೆ ಉತ್ತರ ಹುಡುಕಲು ತೊಳಲಾಡುತ್ತಿದ್ದಾರೆ.

ಈ ಪ್ರಶ್ನೆಗಳಿಗೆ ವಿಜ್ಞಾನಿಗಳು, ಆಧ್ಯಾತ್ಮವಾದಿಗಳು ತಮ್ಮ-ತಮ್ಮ ವಿಚಾರದಂತೆ ಉತ್ತರ ನೀಡಿದ್ದಾರೆ. ಹುಟ್ಟು-ಸಾವು-ಬದುಕು; ಸುಖ-ದುಃಖ ಈ ಜಗತ್ತಿನ ವ್ಯಾಪಾರ-ವ್ಯಾವಹಾರಗಳು ವಿಶ್ವದ ಸ್ವಭಾವ ಹಾಗೂ ಸಹಜಕ್ರಿಯೆಗಳು (Natural Phenomena) ಇವುಗಳಲ್ಲಿ ವಿಶೇಷವಾದ ಅರ್ಥಕಲ್ಪಿಸುವ ಅಗತ್ಯವಿಲ್ಲ ಎನ್ನುತ್ತಾರೆ ಭೌತವಾದಿಗಳು. ಆದರೆ ಆಧ್ಯಾತ್ಮವಾದಿಗಳು ಇದೆಲ್ಲ ಪರಮಾತ್ಮನ ಲೀಲೆ ಎನ್ನುತ್ತಾರೆ. ಈ ಜಗತ್ತಿನ ನಿಯಮವನ್ನು ಕುರಿತು ಐನ್‌ಸ್ಟೀನ್ (೧೮೭೯-೧೯೫೫) ಎಂಬ ವಿಜ್ಞಾನಿ ಹೇಳುತ್ತಾರೆ; ''ಈ ವಿಶ್ವ ಒಂದು ಅವಿಭಾಜ್ಯ, ಇಲ್ಲಿಯ ಪದಾರ್ಥಗಳು ಬೇರೆ-ಬೇರೆ ಎಂದು ತೋರಿದರೂ, ಅವೆಲ್ಲ ಒಂದು ಶಕ್ತಿಯ (ಎನರ್ಜಿ) ವಿವಿಧ ರೂಪಗಳು. ಇವು ಒಂದು ನಿಯಮಕ್ಕೆ ಒಳಪಟ್ಟಿವೆ. ವಿಶ್ವದ ಯಾವ ಘಟನೆಯೂ, ನಿಯಮರಹಿತವಾಗಿಲ್ಲ,

ವಿಶ್ವಶಕ್ತಿಯು ಹೂಡಿರುವುದು ಒಂದು ಲೆತ್ತದಾಟವಲ್ಲ; ಅದೊಂದು ನಿಯಮ ಎನ್ನುತ್ತಾರೆ.

ಮನುಷ್ಯ ಜೀವನದಲ್ಲಿ ಸುಖದುಃಖಗಳಿವೆ. ಇವೆರಡು ವೇದನೆಗಳು. ಅನುಕೂಲವೇದನೆ ಸುಖವೆನಿಸಿದರೆ; ಪ್ರತಿಕೂಲವೇದನೆ ದುಃಖವೆನಿಸುತ್ತದೆ. ಬೇಕಾದದ್ದು ಸುಖ; ಬೇಡವಾದದ್ದು ದುಃಖ. ಇದೊಂದು ಮನೋವ್ಯಾಪಾರ, ನಮ್ಮ ಜ್ಞಾನೇಂದ್ರಿಯ, ಕರ್ಮೇಂದ್ರಿಯ ಹಾಗೂ ಮನಸ್ಸಿನ ಚಲನವಲನ ಗಳನ್ನು ಕೇಂದ್ರೀಕರಿಸುವ ಶಕ್ತಿ ಆತ್ಮ ಜೀವಾತ್ಮನಿಗೆ ಆಂತರಿಕ, ಆತ್ಯಂತಿಕ

ಅನುಭವ ಇಷ್ಟವಾಗುತ್ತದೆ. ಈ 'ಅನುಭಾವ'ವಾದರೆ ಉಳಿದೆಲ್ಲ ಲೌಕಿಕ ಅನುಭವಗಳೂ ವ್ಯರ್ಥ. ಅವು ಅಗತ್ಯವಿಲ್ಲ ಎನಿಸುತ್ತವೆ. ವಿಷಯ ಸುಖ ಎಷ್ಟೇ ಅಪರಿಮಿತವಿದ್ದರೂ ಅದರಲ್ಲಿ ದುಃಖಾಂಶವಿದೆ. ಆದ್ದರಿಂದ ಮನುಷ್ಯ ಆತ್ಯಂತಿಕ ಆಂತರಿಕ ಸುಖವನ್ನು ಹೊರಗೆ ಹುಡುಕುವುದೆ ತನ್ನ ಆತ್ಮನಲ್ಲಿ ಹುಡುಕಲು ಪ್ರಯತ್ನಿಸುತ್ತಾನೆ. 'ಯದ್ಯತ್ ಪರವಶಂ ದುಃಖಂ ಯದ್ಯತ್ ಆತ್ಮವಶಂ ಸುಖಂ' ಹೊರಗಿನದು ದುಃಖಮಯ; ಆತ್ಮವಶವಾದುದು ಸುಖಮಯ. ಇದು ಉಪನಿಷತ್ತಿನ ಸಂದೇಶ. ಅದೇ ಉಪನಿಷತ್ತು 'ಆನಂದಂ ಬ್ರಹ್ಮೇತಿ ವ್ಯಜಾನಾತ್' ಎಂದಿದೆ. ಇಲ್ಲಿ ಆನಂದವೆಂದರೆ ಆತ್ಮಾನಂದ ಇದೇ ಕೈವಲ್ಯಸ್ಥಿತಿ. ದೇಹ–ಪ್ರಾಣ–ಮನಸ್ಸು–ಬುದ್ಧಿ ಚಿತ್ತಗಳು ವಿಷಯ ಸುಖಕ್ಕಾಗಿ, ಬಳಕೆಯಾಗದೆ. ಆಧ್ಯಾತ್ಮ ಪ್ರಗತಿಗಾಗಿ. ಶಿವಯೋಗ ಸಾಧನೆಗಾಗಿ ಬಳಕೆಯಾಗಬೇಕು. ಅನುಭಾವಿಗಳು ಅಂತರಂಗದ ರತ್ನ ಆತ್ಮವನ್ನರಿತರೆ ಎಲ್ಲವನ್ನು ಅರಿತಂತೆ ಎಂದು ಹೇಳುತ್ತಾರೆ. ಆತ್ಮಜ್ಞಾನವೇ ಅನುಭಾವ. ಅದೇ ಕೈವಲ್ಯಸ್ಥಿತಿ; ಅನುಭೂತಿ. ಇದನ್ನು ಪಡೆಯುವ ವಿಷಯ ವಿವೇಚನೆಯೇ ಕೈವಲ್ಯಸಾಹಿತ್ಯ.

ತನುವಿನಲ್ಲಿ ನಿರ್ಮೋಹ
ಮನದಲ್ಲಿ ನಿರಹಂಕಾರ
ಪ್ರಾಣದಲ್ಲಿ ನಿರ್ಭಯ
ಚಿತ್ತದಲ್ಲಿ ನಿರಪೇಕ್ಷೆ
ವಿಷಯದಲ್ಲಿ ಉದಾಸೀನತೆ
ಭಾವದಲ್ಲಿ ದಿಗಂಬರ
ಜ್ಞಾನದಲ್ಲಿ ಪರಮಾನಂದ ನೆಲೆಗೊಂಡ ಬಳಿಕ
ಸೌರಾಷ್ಟ್ರ ಸೋಮೇಶ್ವರ ಲಿಂಗವು ಬೇರಿಲ್ಲ.

ಈ ವಚನ ಸಾಧಕನ ಕೈವಲ್ಯ ನಿಲುವಿಗೆ ಭಾಷ್ಯ ಬರೆದಂತಿದೆ. ಆತ್ಮಜ್ಞಾನವೇ ಪರಮಾನಂದದ ನೆಲೆ ಎಂದು ಜಗತ್ತಿನ ದಾರ್ಶನಿಕರು ನಾನಾ ವಿಧವಾಗಿ ತಮ್ಮ ಅನುಭವವನ್ನು ತಿಳಿಸಿದ್ದಾರೆ. ಇಂಥ ಅನುಭವವನ್ನು ತಮ್ಮ ಹಾಡುಗಳ ಮೂಲಕ ಮನುಕುಲಕ್ಕೆ ತಿಳಿಸಿದವರು ಶ್ರೀ ಮಹಾಂತ ಶಿವಯೋಗಿಗಳು.

## ಶ್ರೀ ಮಹಾಂತ ಶಿವಯೋಗಿಗಳ ಇತಿ ವೃತ್ತ : ಒಂದು ನೋಟ

ಬಾಲಲೀಲಾ ಮಹಾಂತ ಶಿವಯೋಗಿಗಳ ಜನನ ೧೮೪೨ರಲ್ಲಿ ವಿಜಾಪುರ ಜಿಲ್ಲೆ ಎರನಾಳದಲ್ಲಿ. ಈ ಕೂಸು ಹುಟ್ಟಿದ ಕೂಡಲೇ ತಂದೆ–ತಾಯಿಗಳು ಲಿಂಗೈಕ್ಯರಾದರು. ಆ ಸಂದರ್ಭದಲ್ಲಿ ಮುಳಗುಂದದ ಕಲ್ಮಠದ ಅಧಿಪತಿಗಳಾದ ಶ್ರೀಗುರು ಮಹಾಂತ ದೇಶಿಕರು ಸಂಚಾರ ಮಾಡುತ್ತಾ ಎರನಾಳಿಗೆ ಬರುತ್ತಾರೆ. ಈ ಅನಾಥ ಮಗುವನ್ನು ತಮ್ಮ ಜೋಳಿಗೆಯಲ್ಲಿ ಹಾಕಿಕೊಳ್ಳುತ್ತಾರೆ. ಮುಂದೆ ಆಲಮಟ್ಟಿಯ ಚನ್ನಮಲ್ಲಯ್ಯ ಹಾಗೂ ಅನ್ನಪೂರ್ಣವ್ವರೆಂಬ ಹಿರೇಮಠದ ದಂಪತಿಗಳಿಗೆ ಬಹಳ ವರ್ಷಗಳಿಂದ ಮಕ್ಕಳಿರಲಿಲ್ಲ. ಇದನ್ನು ತಿಳಿದಿದ್ದ ಮಹಾಂತ ದೇಶಿಕರು ಈ ಮಗುವನ್ನು ಆ ದಂಪತಿಗಳಿಗೆ ಸಾಕಲು ಕೊಡುತ್ತಾರೆ. ಚನ್ನಮಲ್ಲಯ್ಯ ದಂಪತಿಗಳಿಗೆ ಅಪೂರ್ವನಿಧಿ ದೊರೆತಂತಾಗಿ ಅತ್ಯಂತ ಸಂತೋಷಭರಿತರಾಗುತ್ತಾರೆ. ಈ ಮಗುವನ್ನು ಅತ್ಯಂತ ಪ್ರೀತಿಯಿಂದ ಸಾಕಿ ಸಲಹುತ್ತಾರೆ. ಗುರುಮಹಾಂತ ಶಿವಯೋಗಿಗಳ ಕರುಣೆಯಿಂದ ಲಭಿಸಿದ ಈ ಮಗುವಿಗೆ 'ಮಹಾಂತ'ನೆಂದು ಹೆಸರಿಡುತ್ತಾರೆ. ಸುಮಾರು ೮ನೇ ವರ್ಷದಲ್ಲಿ ಅವನಿಗೆ ಆಧ್ಯಾತ್ಮದ ಹಂಬಲ ಉಂಟಾಗಿ, ಮನೆ ಬಿಟ್ಟು ಹೋಗುತ್ತಾನೆ. ನೇರವಾಗಿ ತುಂಗಭದ್ರಾ ನದಿಯ ದಡದಲ್ಲಿರುವ ಲಿಂಗನಾಯಕನ ಹಳ್ಳಿಯಲ್ಲಿದ್ದ ಹಾಲವರ್ತಿ ವಿರಕ್ತಮಠದ ಶ್ರೀ ಚನ್ನವೀರಸ್ವಾಮಿಗಳ ಗುರುಕುಲ ಪಾಠಶಾಲೆಗೆ ಸೇರಿದ. ಅಲ್ಲಿ ಶಿವಾನುಭವ ಶಾಸ್ತ್ರ, ಶಿವಯೋಗಗಳನ್ನು ಅಧ್ಯಯನ ಮಾಡಿದ. ಸದಾಚಾರ–ಸದ್ಭಾವನೆಗಳನ್ನು ಬೆಳಸಿಕೊಂಡ. ಹಾಲವರ್ತಿ ವಿರಕ್ತಮಠದ ಪರಿಸರ, ಪೂಜ್ಯಶ್ರೀ ಚನ್ನವೀರಸ್ವಾಮಿಗಳ ಸಾನಿಧ್ಯಗಳಿಂದ ಗುರುಕುಲ ಶಿಕ್ಷಣದಲ್ಲಿ ಅವನ ಮನಸ್ಸು ವಿಕಸಿತವಾಗಿ ವೈರಾಗ್ಯದ ಕಡೆಗೆ ಚಲಿಸುತ್ತಿತ್ತು ಶ್ರೀ ಚನ್ನವೀರಸ್ವಾಮಿಗಳು ಲಿಂಗೈಕ್ಯರಾದ ನಂತರ 'ಮಹಾಂತರು' ಗುರುಕುಲವನ್ನು ಬಿಟ್ಟು ದೇಶ ಸಂಚಾರಕ್ಕಾಗಿ ಹೊರಟರು. ದಾರಿಯಲ್ಲಿ ಬಿದರಹಳ್ಳಿ ರೈತ ರಾಮಲಿಂಗಪ್ಪನಿಗೆ ತೋಟದಲ್ಲಿ ಬಾವಿ ತೋಡಿ ನೀರು ಸಿಗದೇ ನಿರಾಶನಾಗಿದ್ದ, ಆಗ ಅವನಿಗೆ ಮಹಾಂತರು ತಮ್ಮ ಶಿವಯೋಗಬಲದಿಂದ ಬಾವಿಯಲ್ಲಿ ಜಲ ತೋರಿಸಿದರು. ಮುಂದೆ ಸಂಚರಿಸುತ್ತಾ ಹೊರಟಾಗ–ಒಂದು ಹೊಳೆ ದಾಟಬೇಕಾಗಿ ಬಂತು.

ಅಂಬಿಗರು ಉದಾಸೀನ ತೋರಿದಾಗ ತಮ್ಮ ಟೊಪ್ಪಿಗೆಯನ್ನೇ ಹರಿಗೋಲು ಮಾಡಿ ದಡ ಸೇರಿದರೆಂದು ಹೇಳುತ್ತಾರೆ. ಮುಂದೆ ಗೋಕಾವಿ, ಬನವಾಸಿ, ಬಳ್ಳಿಗಾವಿ, ಉಡುತಡಿ, ಶ್ರೀಶೈಲ, ಕಂಚಿ ಹಾಗೂ ಮೈಸೂರು ಹೀಗೆ ಕರ್ನಾಟಕ, ಆಂಧ್ರ, ತಮಿಳುನಾಡುಗಳಲ್ಲಿ ಸಂಚಾರ ಮಾಡಿ ಮಹಾಂತರು ತಾವು ಶಿಶುವಾಗಿದ್ದಾಗ ತಮ್ಮನ್ನು ಸಂರಕ್ಷಿಸಿದ, ಗುರು ಮಹಾಂತ ದೇಶಿಕರನ್ನು ನೆನೆಪಿಸಿಕೊಂಡು ಧಾರವಾಡ ಜಿಲ್ಲೆ ಮುಳಗುಂದದಲ್ಲಿರುವರೆಂದು ಕೇಳಿ ತಿಳಿದು ಮುಳುಗುಂದಕ್ಕೆ ಬರುತ್ತಾರೆ. ಇವರು ಬರುವುದಕ್ಕಿಂತ ಮೊದಲೇ, ಇವರು ಬರುವ ಸೂಚನೆಯನ್ನು ಮಠದ ಸದ್ಭಕ್ತರಿಗೆ ''ಒಬ್ಬ ಬಾಲ ಶಿವಯೋಗಿ ತಮ್ಮ ಉತ್ತರಾಧಿಕಾರಿಯಾಗಿ ಈ ಮಠಕ್ಕೆ ಬರುತ್ತಾನೆಂದು'' ಮೊದಲೇ ತಿಳಿಸಿ ಗುರುಮಹಾಂತ ದೇಶಿಕರು ಲಿಂಗೈಕ್ಯರಾಗುತ್ತಾರೆ. ಮಹಾಂತರು ಮುಳಗುಂದದ ಗವಿಮಠದಲ್ಲಿ ನೆಲಸಿ, ಮಠದ ಸದ್ಭಕ್ತರ ಅಪೇಕ್ಷೆಯಂತೆ ಕಲ್ಮಠದ ನಿರಂಜನ ಪಟ್ಟಾಧಿಕಾರಿಗಳಾಗಿ, ವಿರಕ್ತಾಶ್ರಮವನ್ನು ಸ್ವೀಕರಿಸುತ್ತಾರೆ. ಮಹಾಂತ ಶಿವಯೋಗಿಗಳು ಕಲ್ಮಠದಲ್ಲಿಯೇ ನೆಲಸಿದಾಗ ಮುಳಗುಂದದ ಫಿರಂಗಿ ಮನೆತನದ ಬಸಮ್ಮನೆಂಬ ಸಾಧ್ವಿಯ ಗಂಡ ತೀರಿಕೊಂಡ. ಆಕೆಗೆ ಇಬ್ಬರು ಗಂಡುಮಕ್ಕಳಿದ್ದರು. ಆಕೆ ಗಂಡನ ಮನೆಯ ಆಶ್ರಯ ತಪ್ಪಿ, ತವರು ಮನೆ ಸೇರಿದಳು. ಆಕೆಯ ಇಬ್ಬರು ಮಕ್ಕಳು ಮಹಾಂತ ಶಿವಯೋಗಿಗಳ ಆಟದ ಜೊತೆಗಾರರಾದರು. ಅಂದು ಒಂದು ದಿನ ಹುಣ್ಣಿಮೆಯ ಬೆಳದಿಂಗಳಲ್ಲಿ ಆ ಮಕ್ಕಳು ಸಂತೋಷದಿಂದ ಆಟವಾಡುತ್ತಿರುವಾಗ, ಬಸಮ್ಮನ ಮಕ್ಕಳಿಬ್ಬರೂ ಹಾವು ಕಡಿದು ಸತ್ತು ಹೋದರು. ಬಸಮ್ಮನಿಗೆ ಸಹಿಸಲಾರದ ದುಃಖವಾಯಿತು. ಆಕೆಯ ಪಾಲಿಗೆ ಜಗತ್ತೇ ಶೂನ್ಯವಾಯಿತು. ಕಣ್ಣು ಬೆಳಕಿನಂತಿದ್ದ ಇಬ್ಬರು ಮಕ್ಕಳು ಏಕಕಾಲದಲ್ಲಿಯೇ ಸತ್ತು ಹೋದದ್ದು ಬದುಕಿನ ದಾರಿಗೆ ಕತ್ತಲೆ ಕವಿದಂತಾಯಿತು. ದುಃಖದ ಮಡುವಿನಲ್ಲಿ ಮುಳುಗಿದ್ದ ಆಕೆಯನ್ನು ಕಂಡು ಮಹಾಂತ ಶಿವಯೋಗಿಗಳು ''ಅವ್ವಾ! ಮನಸ್ಸಿಗೆ ಸಮಾಧಾನ ಮಾಡಿಕೋ ನಿನಗೆ ಮಕ್ಕಳಿಲ್ಲ; ನನಗೆ ಅವ್ವನಿಲ್ಲ, ನೀನೇ ನನ್ನ ಅವ್ವ ; ನಾನೇ ನಿನ್ನ ಮಗ, ಅಳಬೇಡ'' ಎಂದು ಸಮಾಧಾನಪಡಿಸಿದರು. ಶಿವಯೋಗಿಗಳ ಅಪ್ಪಣೆಯ ಪ್ರಕಾರ, ಬಸಮ್ಮ ಶ್ರೀ ಮಠದಲ್ಲಿ ಬಂದು ನೆಲಸುತ್ತಾಳೆ. ಮಹಾಂತ

ಶಿವಯೋಗಿಗಳು ಬಸಮ್ಮನನ್ನು ತಾಯಿ ಎಂದು ಭಾವಿಸಿ, ತಾವು ಮಗನೆಂದು ತಿಳಿದು ಬಾಲಭಾವದಲ್ಲಿ ಬಾಲಕನಂತೆ ವರ್ತಿಸುತ್ತಾರೆ. ತಾಯಿಯೊಂದಿಗೆ ಹಟ ಮಾಡುವುದು, ಬೇಡುವುದು, ಕಾಡುವುದು ತೊಟ್ಟಿಲಲ್ಲಿ ಮಲಗಿ ಮಗುವಿನಂತೆ ಬೆರಳು ಚೀಪುವುದು, ತೂಗಿರೆಂದು ಹಟ ಮಾಡುವುದು, ಬಾಲ ಭಾಷೆಯಲ್ಲಿ ಮಾತನಾಡುವುದು, ಮಗುವಿನ ಬಟ್ಟೆ ಧರಿಸುವುದು, ಮಗುವಿನ ಟೊಪ್ಪಿಗೆ ಹಾಕಿಕೊಳ್ಳುವುದು. ಒಮ್ಮೊಮ್ಮೆ ಮಲಗಿ ಮಗುವಿನಂತೆ ಶೂನ್ಯದೃಷ್ಟಿಯಿಂದ ಬಾಹ್ಯ ಜಗತ್ತನ್ನೇ ನೋಡುವುದು ಇತ್ಯಾದಿ ಅನಂತ ಬಾಲ ಲೀಲೆಗಳನ್ನು ಮಾಡುತ್ತಾರೆ. ಇವರ ಬಾಲಲೀಲೆಗಳನ್ನು ಕಂಡು ಭಕ್ತರು ಬಾಲಲೀಲಾ ಮಹಾಂತ ಶಿವಯೋಗಿಗಳೆಂದು ಕರೆಯುತ್ತಾರೆ.

ಮುಂದೆ ಒಂದುದಿನ ಬಸಮ್ಮನೂ ತೀರಿಕೊಂಡಳು. ಶಿವಯೋಗಿಗಳು ವಿರಕ್ತರಾಗಿ, ವೈರಾಗ್ಯ ಸಂಪನ್ನರಾಗಿದ್ದರೂ, ತಾಯಿಯನ್ನಗಲಿದ ಮಗುವಿನಂತೆ ಭೋರಾಡಿ ಅಳುತ್ತಾರೆ. ಕೆಲವು ವರ್ಷ ತಾಯಿಯ ವಿಯೋಗದ ದುಃಖ ಅವರನ್ನು ಕಾಡುತ್ತಲೇ ಇರುತ್ತದೆ. ಆ ಸಂದರ್ಭದಲ್ಲಿ ಮಾತ್ರ ವಿಯೋಗದ ದುಃಖ ತತ್ತ್ವಪದಗಳಾಗಿ, ಕೈವಲ್ಯ ಗೀತೆಗಳಾಗಿ ಮೂಡಿ ಬರುತ್ತವೆ. ತಾಯಿಯನ್ನು ಕಳೆದುಕೊಂಡು ತಬ್ಬಲಿಗಳಂತಾದ ಶಿವಯೋಗಿಗಳು ತಮಗೆ ತೋಚಿದಾಗ, ವಿಭೂತಿ ಉಂಡೆಯಿಂದ ಶ್ರೀಮಠದ ಬಾಗಿಲು, ಕಂಬ, ತೊಲೆ ಗೋಡೆಗಳ ಮೇಲೆ ಪದಗಳನ್ನು ಗೀಚುತ್ತಿದ್ದರು. ಕನ್ನಡಿಗರ ಪುಣ್ಯವೋ ಎನ್ನುವಂತೆ ಮಠದ ಮರಿದೇವರು ಅವುಗಳನ್ನು ಅಚ್ಚುಕಟ್ಟಾಗಿ ಬರೆದು ಜೋಪಾನವಾಗಿ ಇಟ್ಟುಕೊಳ್ಳುತ್ತಿದ್ದರು. ಹೀಗೆ ಅವರು (ಮರಿದೇವರು) ಮಾಡದೇ ಹೋಗಿದ್ದರೆ ಕೈವಲ್ಯ ದರ್ಪಣ ಕನ್ನಡಿಗರಿಗೆ ಲಭಿಸುತ್ತಿರಲಿಲ್ಲ. ಮರಿದೇವರು ಸಂಗ್ರಹಿಸಿದ ಈ ಪದಗಳ ಸಂಕಲನವೇ ಕೈವಲ್ಯ ದರ್ಪಣ ವೆಂದು ಪ್ರಸಿದ್ಧವಾಯಿತು. ಕೈವಲ್ಯ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಯಾಯಿತು.

ಬಾಲಲೀಲಾ ಮಹಾಂತ ಶಿವಯೋಗಿಗಳ ಖ್ಯಾತಿಯನ್ನಾಲಿಸಿದ ಮೈಸೂರಿನ ಕೃಷ್ಣರಾಜ ಒಡೆಯರ್ ತಮಗೆ ಅಂಟಿಕೊಂಡಿದ್ದ ಮಹಾವ್ಯಾಧಿಯ ನಿವಾರಣೆಗಾಗಿ ಅವರನ್ನು ಮೈಸೂರಿಗೆ ಆಹ್ವಾನಿಸಿ ಅರಮನೆಯಲ್ಲಿ ಅದ್ದೂರಿ ಯಿಂದ ಸತ್ಕರಿಸಿ, ರಾಜೋಪಚಾರದಿಂದ ಆದರಿಸುತ್ತಾರೆ. ಮಹಾರಾಜರು, ವೈಭವಪೂರ್ಣವಾದ ಬೆಲೆ ಬಾಳುವಂತಹ, ಧನ, ಕನಕ, ವಸ್ತ್ರ–

ವಾಹನಗಳನ್ನು ಶಿವಯೋಗಿಗಳಿಗೆ ಅರ್ಪಿಸಲು ಸಿದ್ಧರಾಗುತ್ತಾರೆ. ಆ ಸಂದರ್ಭದಲ್ಲಿ ಶಿವಯೋಗಿಗಳು ಮಹಾರಾಜರಿಗೆ ವಿವೇಕ ಹೇಳಿ ಆ ವಸ್ತುಗಳನ್ನು ಮುಟ್ಟದೆ 'ಕುಂಬಳ ಸೊರಟೆ'ಯೊಂದನ್ನು ಮಾತ್ರ ಸ್ವೀಕರಿಸು ತ್ತಾರೆ. ಮಹಾರಾಜರ ಭೋಗ-ಭಾಗ್ಯ ಜೀವನವನ್ನು ತಿರಸ್ಕಾರದಿಂದ ಕಂಡ ವೈರಾಗ್ಯಶೀಲರು ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳು.

ಬಾಲಲೀಲಾ ಮಹಾಂತ ಶಿವಯೋಗಿಗಳು ಶಿವಯೋಗದ ಅನುಸಂಧಾನದಲ್ಲಿ ಸಾಧನೆ ಮಾಡುತ್ತಾ ಶ್ರೀ ಮಠದಲ್ಲಿದ್ದರೂ, ಒಂದೆಡೆ ಅವರಿಗೆ ಸರಕಾರದ ಅಧಿಕಾರಿಗಳಿಂದ ಕಿರುಕುಳವಿರುತ್ತಿತ್ತು. ಶಿವಯೋಗಿಗಳು ಸ್ವತಂತ್ರ ಹೋರಾಟಗಾರರ ಕ್ರಾಂತಿಕಾರಿಗಳ ಜೊತೆ ಸೇರಿಕೊಂಡು ಸಿಪಾಯಿದಂಗೆಗೆ ಪ್ರಚೋದನೆ ನೀಡುತ್ತಿದ್ದಾರೆಂದು ನಮ್ಮನ್ನು ಆಳುತ್ತಿದ್ದ ಬ್ರಿಟೀಷರು ತಪ್ಪಾಗಿ ಭಾವಿಸಿ ಶಿವಯೋಗಿಗಳ ಗವಿಮಠದ ಮೇಲೆ ಸದಾ ಕಣ್ಣಿಡುತ್ತಿದ್ದರು ಮತ್ತು ಆಗಾಗ ಕಿರುಕುಳ ಕೊಡುತ್ತಿದ್ದರು. ಮತ್ತೊಂದು ಕಡೆ ಚಿತ್ರದುರ್ಗದ ಮುರುಘಾಮಠದ ಜಗದ್ಗುರುಗಳು ಮುಳಗುಂದ ಮಠದಿಂದ ಕಪ್ಪಗಾಣಿಕೆ (ಗುರುಕಾಣಿಕೆ) ಸಲ್ಲಿಸಬೇಕೆಂದು ಮೇಲಿಂದ ಮೇಲೆ ವಸೂಲಿಗೆ ಕಳಿಸುತ್ತಿದ್ದರು. ಶಿವಯೋಗಿಗಳು ಈ ಎಲ್ಲ ಲೌಕಿಕ, ಬಾಧೆಗಳಿಂದ ಬೇಸತ್ತು-ನಿರಸನಗೊಂಡು, ಲೌಕಿಕ ವ್ಯಾವಹಾರಗಳಿಂದ ಬಹುದೂರದಲ್ಲಿ ನಿಂತು ಶಿವಯೋಗ ಸಿದ್ಧಿಯತ್ತ ಸಾಗುತ್ತಾರೆ. ಕೇವಲ ೩೬ ವರ್ಷಗಳ ಕಾಲ ತಮ್ಮ ಬದುಕಿನಿಂದ ಸುತ್ತಮುತ್ತಲಿನ ಭಕ್ತರಿಗೆ ಬೆಳಕು ಚೆಲ್ಲಿ, ಬೆಳಕಿನ ದಾರಿ ತೋರಿ ೧೮೫೯ರಲ್ಲಿ ಶಾಲಿವಾಹನ ಶಕ ೧೭೮೦ ಸಿದ್ಧಾರ್ಥಿ ಸಂವತ್ಸರದ ಮಾಘ ಶುದ್ಧತ್ರಯೋದಶಿ ಸೋಮವಾರದಂದು ಲಿಂಗೈಕ್ಯರಾದರು.

ದಿವ್ಯ ವ್ಯಕ್ತಿತ್ವ :

ಶಿವಯೋಗಿಗಳ ಜೀವನ ಚರಿತ್ರೆಯನ್ನು ವಿಹಂಗಮ ದೃಷ್ಟಿಯಿಂದ ನೋಡಿದಾಗ ಒಂದು ಪ್ರತಿಷ್ಠಿತ ಮಠದ ಸ್ವಾಮಿಗಳಾಗಿ, ಅಪಾರ ಭಕ್ತಸ್ತೋಮವನ್ನು ಪಡೆದು ರಾಜ-ಮಹಾರಾಜರ ಸನ್ಮಾನಗಳು ದೊರೆತರೂ ಅವುಗಳಿಗೆ ಅಂಟಿಗೊಳ್ಳಲಿಲ್ಲ, ಯಾರ ಹಂಗಿಗೂ ಒಳಗಾಗದೆ, ನಿರ್ಭಿಡೆ ಯಿಂದ ಕೈವಲ್ಯ ಪಥದಲ್ಲಿ ಸಾಗಿದರು. ವೈರಾಗ್ಯದಿಂದ ಶಿಖರಪ್ರಾಯವಾದ

ಅವರ ವ್ಯಕ್ತಿತ್ವ ; ಭಕ್ತಿ–ಜ್ಞಾನ–ವೈರಾಗ್ಯಗಳಿಂದ ಪರಿಪಕ್ವವಾದ ಜೀವನಸಿದ್ಧಿ, ಮಾತು–ಮನಂಗಳಿಗೆ ಅತೀತವಾಗಿ ನಿಲ್ಲುವ ದಿವ್ಯ ವ್ಯಕ್ತಿತ್ವ ಅವರದು.

ಬದುಕಿನ ಸವಾಲುಗಳನ್ನು ಎದುರಿಸಲು, ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡಲು ವಿರಕ್ತಿ ಒಂದು ದೊಡ್ಡ ಶಕ್ತಿ. ಅದು ಒಡೆತನ, ಪ್ರಭುತ್ವವನ್ನು ಧಿಕ್ಕರಿಸುವ ಶಕ್ತಿ; ಮಾನಸಿಕವಾಗಿ ಎಲ್ಲವನ್ನು ಗೆಲ್ಲುವ ಕಲೆ, ಶಿವಯೋಗಿಗಳು ಇದನ್ನು ಸಾಧಿಸಿದರು. ಅಂಥ ಬದುಕನ್ನೇ ಬಾಳಿ ನಿದರ್ಶನವಾಗಿ ನಿಂತರು. ನಡೆ–ನುಡಿ ಒಂದಾದಾಗ ವ್ಯಕ್ತಿತ್ವಕ್ಕೆ ದೈವ ಸ್ವರೂಪ ಬರುತ್ತದೆ. ಆ ಅಲೌಕಿಕ ಶಕ್ತಿಗೆ ಲೋಕ ತಲೆ ಬಾಗುತ್ತದೆ. ಅದಕ್ಕಾಗಿಯೇ ಇಂತಹ ಶಿವಯೋಗಿಗಳನ್ನು, ಸಂತ–ಮಹಾಂತರನ್ನು ನಮ್ಮ ನಾಡಿನ ಅನಧಿಕೃತ ಶಾಸಕರು ಎಂದು ಕರೆಯುತ್ತಾರೆ.

ಮಹಾಂತ ಶಿವಯೋಗಿಗಳದು ಸಹಜವಾದ ಬಾಲಭಾವ. ಅನುಭಾವದ ತುತ್ತ ತುದಿಯಲ್ಲಿರುವ ವ್ಯಕ್ತಿಗೆ ಮಾತ್ರ ಈ ಬಾಲಭಾವ ಅಳವಡುತ್ತದೆ. ಪರಾವಸ್ಥೆಯ ಅತ್ಯುನ್ನತ ಮಜಲನ್ನೇರಿದವರು ಮಾತ್ರ ಬಾಲಮನೋವೃತ್ತಿಯನ್ನು ಪಡೆಯಲು ಸಾಧ್ಯವೆನ್ನುತ್ತಾರೆ ಮನೋವಿಜ್ಞಾನಿಗಳು.

ಮಕ್ಕಳ ಮನಸ್ಸು ಪರಿಶುದ್ಧ, ನಿರ್ಲಿಪ್ತತೆ, ನಿಷ್ಕಪಟತೆಯಿಂದಾಗಿ, ಮಕ್ಕಳ ಅಂತರ್ಯ ಪರಿಶುದ್ಧವಾಗಿರುತ್ತದೆ. ಮಕ್ಕಳು ದೇವರದಿವ್ಯತೆಯ ಪ್ರತಿಬಿಂಬ. ಅವರು ಮುಗ್ಧತೆ, ಪರಿಶುದ್ಧತೆಯ ಮುದ್ದೆಗಳು.

"ನೂರು ಜನ ಸನ್ಯಾಸಿಗಳ ಮನಸ್ಸಿಗಿಂತ ಮಗುವಿನ ಮನಸ್ಸು ಪರಿಶುದ್ಧವೆಂದು ಹೇಳುತ್ತಾರೆ. ಸುಲಭದಲ್ಲಿ ದೈವ ಕೃಪೆಗೆ ಪಾತ್ರರಾಗಲು ಮಗುವಿನ ಮುಗ್ಧಮನಸ್ಸು ಅತ್ಯಾವಶ್ಯ ಇದನ್ನು Grace Easy Quality ಎಂದೇ ಹೇಳುತ್ತಾರೆ.

ಜಗತ್ತಿನ ಶ್ರೇಷ್ಠ ಸಂತ ಮಹಾಂತರು, ಯೋಗಿಗಳು, ಅನುಭಾವಿಗಳು ಮಾತ್ರ ಮಗುವಿನ ಮನಸ್ಸನ್ನು ಪಡೆದಿರುತ್ತಾರೆ. ಬಾಲಭಾವ ಎನ್ನುವದು ಒಂದು ಅನುಭಾವದ ಹಂತ, ದೈವೀ ಚಿಂತನೆಯ ನಿಬ್ಬೆರಗಿನಲ್ಲಿ ನಿಲ್ಲುವ ಮನಸ್ಥಿತಿ ; ದೈವಕೃಪೆಯ ನೆಲೆ, ಸೆಲೆ. ಬಾಲಲೀಲಾ ಮಹಾಂತ ಶಿವಯೋಗಿ

ಗಳು ಮುಗ್ಧತೆಯ, ಬಾಲಭಾವದ ಸಾಕಾರ ಸ್ವರೂಪರಾಗಿದ್ದರು. ಯೋಗಿಯಾಗುವುದೆಂದರೆ ಲೌಕಿಕದ ಜವಾಬುದಾರಿಯಿಂದ ಮುಕ್ತನಾಗುವುದು ಎಂದು ಅರ್ಥವಲ್ಲ; ಇದ್ದೂ ಇಲ್ಲದಂತಿರುವುದು; ಭವದ ಮೇಲಿನ ಅತಿ ಆಸೆಯನ್ನು ಕೈಬಿಡಬೇಕೆನ್ನುವುದು.

ಕೃತಿ ದರ್ಶನ :

ಬಾಲಲೀಲಾ ಮಹಾಂತ ಶಿವಯೋಗಿಗಳು, ವರಕವಿಗಳು; ವಾಗ್ಗೇಯಕಾರರು. ಶಿವಾನುಭವ ಶಾಸ್ತ್ರಕೋವಿದರು; ಕನ್ನಡನಾಡು ಕಂಡ ಶ್ರೇಷ್ಠ ಅನುಭಾವಿಗಳು ; ಶಿವಯೋಗ ಸಂಪನ್ನರು; ಪರಮ ವಿರಾಗಿಗಳು; ಸ್ವರಸಿದ್ಧಿಯನ್ನು ಪಡೆದ ಸಂಗೀತಜ್ಞರು. ತಮ್ಮ ಹಾಡುಹಬ್ಬಗಳ ಮೂಲಕ ಜನಸಮುದಾಯದ ಚಿತ್ತದಲ್ಲಿ ಜೀವನ ಮೌಲ್ಯಗಳನ್ನು ಬಿತ್ತಿದವರು. ಅವರ ಕೈವಲ್ಯದರ್ಪಣ ಅನ್ವರ್ಥಕವಾಗಿ ಮುಮುಕ್ಷುಗಳಿಗೆ ಒಂದು ಕೈಗನ್ನಡಿ. ಕೈವಲ್ಯದರ್ಪಣ ೧೪೨ ಹಾಡುಗಳ ಸಂಕಲನ. ಇಲ್ಲಿನ ಹಾಡುಗಳು ಅನುಭಾವ ಪೂರ್ಣವಾಗಿ ವೈವಿಧ್ಯಮಯವಾಗಿವೆ. ಸರಳ ನಿರೂಪಣೆ, ದೇಸೀಯ ಸೊಗಸು, ಪ್ರಾರ್ಥನೆ, ಬಾಲಲೀಲೆಯ ಮುಗ್ಧತೆ, ಭಕ್ತಿ–ಜ್ಞಾನ–ವೈರಾಗ್ಯದ ನಿಲುವು ಇವು ಇಲ್ಲಿಯ ಹಾಡುಗಳ ಲಕ್ಷಣಗಳು. ಸ್ವತಃ ಸಂಗೀತಜ್ಞರಾದ ಶಿವಯೋಗಿಗಳು ವಿವಿಧ ರಾಗ–ತಾಳ–ಲಯ ಸಮನ್ವಿತವಾಗಿ ಹಾಡುಗಳನ್ನು ರಚಿಸಿ ವಾಗ್ಗೇಯಕಾರರಾಗಿದ್ದಾರೆ. ಹಾಡುಗಳಿಗೆ, ಸಾರಂಗ, ಭೈರವಿ, ಕಾಂಬೋದಿ, ರೇಗುಪ್ತಿ, ಧನಶ್ರೀ, ಶಂಕರಾಭರಣ, ಸುರುಟಿ, ಕಲ್ಯಾಣಿ ಮೊದಲಾದ ರಾಗಗಳನ್ನು ಸಂಯೋಜಿಸಿ, ಕಂದ–ತ್ರಿಪದಿ ಹಾಗೂ ವಿವಿಧ ಷಟ್ಪದಿಗಳಲ್ಲಿ ರಚಿಸಿದ್ದಾರೆ. ಕೈವಲ್ಯದರ್ಪಣ ಸಾಧಕರ ಕೈದೀವಿಗೆ; ಸಾಧು ಸಜ್ಜನರ ಕಲ್ಪವೃಕ್ಷ. ಇಲ್ಲಿಯ ಹಾಡುಗಳಲ್ಲಿ ನವರಸಗಳಲ್ಲಿ, ಶಾಂತಿರಸವೇ ಪ್ರಧಾನ. ವಿಕಾರ–ವಿಭ್ರಮೆಗಳಿಲ್ಲದ ಚಿಂತೆ–ಭೀತಿಗಳಿಲ್ಲದ ಶಾಂತರಸ. ವಿವಿಧ ಛಂದಸ್ಸುಗಳಲ್ಲಿ ವಾಗ್ರಚನೆ. ಆ ಕಾಲದಲ್ಲಿ ಪ್ರಚಲಿತವಿದ್ದ ಹಲವಾರು ರಾಗಗಳಲ್ಲಿ, ಭಾವಕ್ಕನುಗುಣವಾದ ರಾಗ ಸಂಯೋಜನೆಯಿಂದ ಈ ಕೃತಿ ಗೇಯಕಾವ್ಯವೆನಿಸುತ್ತದೆ. ಎಲ್ಲ ಹಾಡುಗಳಲ್ಲಿ ವಿವಿಧ ರಾಗ–ತಾಳಗಳನ್ನು ಅಯವರಿತು ಬಳಸಿದ್ದಾರೆ. ಶಿವಯೋಗಿಗಳ ಕಾವ್ಯ ಪ್ರತಿಭೆ, ಸಂಗೀತಜ್ಞಾನ,

ಛಂದೋಜ್ಞಾನಗಳ ಪರಿಜ್ಞಾನವನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ. ಇದು ಈ ಕೃತಿಯ ವೈಶಿಷ್ಟ್ಯ.

ಸಾಹಿತ್ಯಕ್ಕೆ ಮಾತು ; ಸಂಗೀತಕ್ಕೆ ಧಾತು, ಮಾತು–ಧಾತುಗಳ ಕಲಾತ್ಮಕ ಸಂಯೋಗವೇ ಈ ಕೃತಿ. ಇಲ್ಲಿಯ ಒಂದೊಂದು ಹಾಡುಗಳೂ, ಬೇಲೂರು– ಶಿಲಾಬಾಲಿಕೆಯರ ಸೂಕ್ಷ್ಮ ಕೆತ್ತನೆಯ ಕಲಾಕೃತಿಗಳು. ಇಂತಹ ಅನುಭಾವಿ ಹಾಡುಗಳನ್ನು ಭಾರತೀಯ ಬೌದ್ಧಸಿದ್ಧರ, ನಿರ್ಗುಣರ ಹಾಗೂ ನಾಥ ಸಂಪ್ರದಾಯದಲ್ಲೂ ಕಾಣಬಹುದಾಗಿದೆ. ಇವು ಕೇವಲ ಕನ್ನಡ ಭಾಷೆಯಲ್ಲಿ ಮಾತ್ರವಲ್ಲ, ಜಗತ್ತಿನ ನಾನಾ ಭಾಷೆಗಳಲ್ಲೂ ಇವೆ. ಸೂಫಿ ಯೆನ್, ದೋಹಾ ಹೀಗೆ ನಾನಾರೂಪಗಳಲ್ಲಿ ಈ ಸಾಹಿತ್ಯ ಮೈದಳೆದಿದೆ. ಈ ಎಲ್ಲ ಮಾತುಗಳಿಗೆ ಉದಾಹರಣೆಗಾಗಿ, ಕೈವಲ್ಯದರ್ಪಣದ, ಕೈವಲ್ಯ ಪದಗಳನ್ನು ಅವಲೋಕಿಸ ಬೇಕಾಗುತ್ತದೆ.

ಕೈವಲ್ಯದರ್ಪಣಕೃತಿ ಗುರುಸ್ತುತಿಯಿಂದ ಆರಂಭವಾಗುತ್ತದೆ. ''ಪಾಲಿಸೈ ಪರಮ ಶ್ರೀ ಗುರುನಾಥ ದಯದಿಂದ'' ಎನ್ನುವ ಹಾಡು ಗುರುಕರುಣೆಯನ್ನು ಬೇಡುತ್ತದೆ. ವೈರಾಗ್ಯ ಪಥದಲ್ಲಿ ಸಾಗಲು ಸಾಧಕನಿಗೆ ಗುರುಕರುಣೆಬೇಕು ವೈರಾಗ್ಯದ ಹಾದಿ ಅದೊಂದು ಅಸಿಧಾರಾವ್ರತ. ಅದಕ್ಕೆ ಚ್ಯುತಿ ಬರಬಾರದೆನ್ನುವ ಎಚ್ಚರದಿಂದ ಶಿವಯೋಗಿಗಳು, ಮಹಲಿಂಗನ ಅನುಗ್ರಹ ಬೇಡುತ್ತಾರೆ. ''ವಿರತನೆಂದೆನಿಸೆನ್ನನು ಸ್ಮರನ ಸಖ ವಿರಹ ಕೆಳಸದೆ ಗುರುವರ'' ಎಂದು ಈ ಬೇಡಿಕೆಯಲ್ಲಿ ಸಾಧಕನ ಜಾಗೃತ ಭಾವನೆಯನ್ನು ಕಾಣುತ್ತೇವೆ. ''ತಥ್ಯ ಮಿಥ್ಯದ ಸುಖವನ್ನು ಕತ್ತರಿಸಿ ಮನಸ್ಸನ್ನು ಅತ್ತಿತ್ತ ಹರಿಯಗೊಡದೆ ಸ್ಥಿರವಾಗಿ ನಿಲ್ಲಿಸಲು ಪ್ರಾರ್ಥಿಸುತ್ತಾರೆ. ''ಸ್ಥಿರವೆಂದು ಸಂಸಾರ ಮಲದೇಹವನು ಮೆಚ್ಚಿ ಕೆಡಬೇಡ'' ''ಎರಗದಿರು ಮನವೇ ನೀತನುವರ್ಣವನು ತೆರೆಯೆ ಹುಳುಕುಂಟು ಗುಣವಿಲ್ಲ ನಾರಿಯೊಳು'' ''ಹೆಣ್ಣಿಗಿಚ್ಛೈಸುವರೆ ಮೂಢ'' ಇಂತಹ ಮಾತುಗಳಲ್ಲಿ ಮನಸ್ಸಿನ ಚಂಚಲತೆ, ಸುಖದಭ್ರಮೆ ದೇಹ ಹಾಗೂ ಹೆಣ್ಣಿನ ಮೋಹದ ನಿರಾಕರಣೆಯನ್ನು ಕಾಣುತ್ತೇವೆ. ನಿಜವಾದ ವಿರಕ್ತನಿಗೆ ವೈರಾಗ್ಯಪಥದಲ್ಲಿ ಸಾಗುವ ಸಾಧಕನಿಗೆ, ಹೊನ್ನು–ಹೆಣ್ಣು–ಮಣ್ಣುಗಳ ವ್ಯಾಮೋಹ ಅವನ ಸಾಧನೆಗೆ ಅಡ್ಡಿಯನ್ನುಂಟು ಮಾಡುತ್ತವೆ. ಆದ್ದರಿಂದ ಸಾಧಕನಾದ ಶಿವಯೋಗಿ ಇವುಗಳ ಬಗ್ಗೆ

ಸದಾಜಾಗೃತನಾಗಿರಬೇಕಾಗುತ್ತದೆ. ಹೆಣ್ಣಿನ ಆಕರ್ಷಣೆಯನ್ನು ಮೀರಿ ಮೇಲೇರುವುದು. ಅಷ್ಟು ಸುಲಭವಲ್ಲ; ಮನೋನಿಗ್ರಹದಿಂದ ಸದಾ ಎಚ್ಚರವಿರಬೇಕಾಗುತ್ತದೆ. ಮತ್ತೊಂದು ಹಾಡಿನಲ್ಲಿ–'ಜೋಕೆ ಕಂಡ್ಯಾ ಆತ್ಮ ಜೋಕೆ ಕಂಡ್ಯಾ' ಇಲ್ಲಿ ಆತ್ಮನಿಗೆ ಎಚ್ಚರಿಕೆ ನೀಡಿ ಅಂಗನೆಯರ ಸಂಗದಿಂದ ಹೇಗೆ ದೂರಿರಬೇಕು ಎಂದು ತಿಳಿಸುತ್ತಾರೆ. ಮತ್ತೆ ಹೇಳುತ್ತಾರೆ : ''ಸಾಕು ಪರಿಹರಿಸೆನ್ನ ದೇಹ ದುರ್ಗುಣಗಳು ನೂಕು–ನುಗ್ಗನು ಮಾಡಿ ಕಾಡುತಿಹವು'' ಎಂದು ಇಂದ್ರಿಯಗಳ ಉಪಟಳ ಸಾಧಕನಿಗೆ ಹೇಗೆ ಬಾಧಿಸುತ್ತವೆ ಎಂದು ತಮ್ಮ ತೀವ್ರ ಸಂತಾಪವನ್ನು ವ್ಯಕ್ತಪಡಿಸುತ್ತಾರೆ. ನನ್ನನ್ನು ಪರಿ–ಪರಿಯಾಗಿ ಕಾಡಿದರೂ, ನಿನ್ನ ಸ್ಮರಣೆ, ಸದಾಜಾಗೃತವಾಗಿರುವಂತೆ ಮಾಡು ಎಂದು ಹೇಳಿ ಕೊನೆಗೆ ಚಂದಾಗಿ ಕಾಡಿ ನೀ ಹೊಂದಿಸಿಕೋ ಎಂದು ದೇವರಲ್ಲಿ ಪ್ರಾರ್ಥಿಸುತ್ತಾರೆ.

ಈ ಎಲ್ಲ ಪದಗಳಲ್ಲಿ ಸಾಧಕನ, ಸಾಧನಾವಸ್ಥೆಯ ತಲ್ಲಣವನ್ನು ಕಾಣುತ್ತೇವೆ. ಶಿವಯೋಗಿಗಳು ತಮ್ಮ ಒಂದು ಹಾಡಿನಲ್ಲಿ ತಾವು ಈ ಲೋಕಕ್ಕೆ ಬಂದ ಕಾರಣವನ್ನು ಸುಂದರ ದೃಷ್ಟಾಂತದೊಂದಿಗೆ ತಿಳಿಸುತ್ತಾರೆ.

ಮಗನ ತೂಗಿರೋ ಭಕ್ತರು ಮಗನ ತೂಗಿರೋ ।
ಆಗಜೆ ತನಗೆ ಮೊಲೆ ಹಾಲಿಲ್ಲದೆ ಜಗಕೆ ಕಳುಹಿದಳು ಪುತ್ರನ ॥ ಪ ॥

ಜಗಜ್ಜನನಿ ಪಾರ್ವತಿ ಅಲ್ಲಿ ಹಾಲಿಲ್ಲದೆ, ತನ್ನ ಮಗನನ್ನು ಇಲ್ಲಿಗೆ ಕಳಿಸಿದ್ದಾಳಂತೆ. ಹಾಗಾದರೆ ಇಲ್ಲಿ ಈ ಮಗುವಿಗೆ ಬೇಕಾದ ಹಾಲು ಯಾವುದು ? ಭಕ್ತಿರಸವ ದಣಿಯಲುಂಡು ಶಕ್ತಿವಂತನಾಗಿ ಬಹಳ ಮುಕ್ತಿ ಮಾರ್ಗ ಪಿಡಿದು ಬಾರೆಂದುಕ್ತಿಯಿಂದ ಕಳುಹಿದಳು ಎಂದು ಹೇಳುತ್ತಾರೆ. ಮುಂದುವರಿದು ''ಹೆತ್ತ ತಂದೆ ತಾಯಿಗಳು ಮರೆತರವರು ಮಗನ ಚಿಂತೆ'' ಎಂದು ಹೇಳುತ್ತಾರೆ. ಜಗತ್ತಿನ ತಂದೆ–ತಾಯಿಗಳ ಕಂದನಾಗಿ ಬೆಳೆಯುತ್ತಿದ್ದೇನೆ ಎಂದು ತಿಳಿಸುತ್ತಾರೆ.

ಶಿವಯೋಗಿಗಳಿಗೆ ಶರಣರ ಮೇಲೆ ಅಪಾರ ಭಕ್ತಿ ಗೌರವ ಅವರ ಹಾಡುಗಳಲ್ಲಿ ಅಲ್ಲಲ್ಲಿ ಶರಣರ ಸ್ಮರಣೆಯನ್ನು ಕಾಣುತ್ತೇವೆ. ''ಭಸಿತಮಂ ಧರಿಸುವೆನು ಎಸೆವ ಮಹಲಿಂಗವೇ ಬಸವನಾಮವ ಜಪಿಸಿ ಮರಳಿ ಮರಳಿ''

ಶರಣ ಭಕ್ತರ ಪಾದಸ್ಮರಣೆ ಎಂಬುವ ಹಾಲಭರದಿ ಕುಡಿದೇನೆಂದು ತವಕಿಸುವುದು'' ಎಂದು.

ಬಾಲಭಾವದ, ಬಾಲಲೀಲೆಯ ಶಿವಯೋಗಿಗಳು ಭಕ್ತರೆಂಬ ತಂದೆ–ತಾಯಿಗಳ ಬಳಿ ಕಿರಿ–ಕಿರಿ ಮಾಡುತ್ತಾರೆ. ಏನು ಆ ಕಿರಿ–ಕಿರಿ ? ಏತಕ್ಕಾಗಿ ಅವರ ಒಂದು ಹಾಡು ಅತ್ಯಂತ ಧ್ವನಿಪೂರ್ಣವಾಗಿ ಉತ್ತರ ನೀಡುತ್ತದೆ. ''ಗುರು ಕರುಣೆ ತೊಟ್ಟಿಲೊಳು ಕಿರಿದಾಗಿ ಭಕ್ತರಿಗೆ ಹರುಷದಿಂದಾಡಬೇಕೆನ್ನುತಿಹುದು.''

ಗುರುಕರುಣೆ ತೊಟ್ಟಿಲಾಗಬೇಕು, ಮುತ್ತಿನ ಟೊಪ್ಪಿಗೆಯಾಗಬೇಕು; ಅದನ್ನು ಸದಾ ಧರಿಸಬೇಕು; ಹರಸ್ತೋತ್ರಗಳನ್ನು ಕಿವಿಗೊಟ್ಟು ಕೇಳುವ ಬಾಲವಸ್ತುಗಳು ಬೇಕೆಂದು ಬಯಸುತ್ತದೆ; ಶಿವಲೋಕವನ್ನು ಪಡೆಯಲು ಆಶಿಸುತ್ತದೆ. ಭಕ್ತರೆಲ್ಲರೂ ಈ ಮಗುವಿಗೆ ಏನೆಂದು ಹರಸಬೇಕೆಂತೆ ? ಕೇಳಿ ''ಸತ್ಯಸಂದಭಕ್ತರೆಲ್ಲ ಬಂದು ಈ ಶಿಶುವಿನ ತೊಟ್ಟಿಲನ್ನು ಚಿತ್ತಶುದ್ಧಿಯಿಂದ ತೂಗುತ್ತಾ ಈ ಶಿಶುವನ್ನು ಮತ್ತೆ ಮರ್ತ್ಯಕ್ಕೆ ತರಬೇಡ''ವೆಂದು ಮಹಾಂತೇಶನನ್ನು ಪ್ರಾರ್ಥಿಸಬೇಕಂತೆ. ಪ್ರತಿಮಾ ವಿಧಾನದ ಈ ಮಾತಗಳು ತುಂಬಾ ಅರ್ಥಪೂರ್ಣವಾಗಿವೆ. ಶಿವಯೋಗಿಯ ಜೀವನಗುರಿ ಸ್ಪಷ್ಟವಾಗಿ ಇಲ್ಲಿ ವ್ಯಕ್ತವಾಗಿದೆ.

ಹಾಗೆಯೇ ಮಹಾಂತಲಿಂಗರನ್ನು ಕಂದನನ್ನಾಗಿ ಕಂಡು ಆ ಶಿಶುವನ್ನು ತೊಟ್ಟಿಲಲ್ಲಿಟ್ಟು, ಜೋಗುಳ ಹಾಡಿ ತೂಗುತ್ತಾರೆ. ಅವರ ಜೋಗುಳ ಪದ ಹೀಗಿದೆ:

ಲಾಲಿ ಲಾಲಿಯು ಪರಬ್ರಹ್ಮದ ಶಿಶುವೆ
ಮಾಲೆಯ ಧರಿಸುವೆ ಮಲ್ಲಿಗೆ ಹೂವಿನ ॥ ಪ ॥

ಅಷ್ಟದಳ ಕಮಲ ತೊಟ್ಟಿಲೊಳಗೆ ಮಲಗಿ ।
ಶ್ರೇಷ್ಠ ಸದ್ಗುಣ ಹಸ್ತಪದಗಳನಾಡುತ ॥
ನೆಟ್ಟನೆ ನಿಟಲ ಭ್ರೂಮಧ್ಯದ ಜ್ಯೋತಿಯ
ದೃಷ್ಟಿಸಿ ನೋಡುತ ಕುಲುಕುಲ ನಗುತಿಹ ॥ ೧ ॥

ರಾಗ ಕಲ್ಯಾಣಿಯಲ್ಲಿ ಸಂಯೋಜಿಸಿದ ಈ ಜೋಗುಳ ಪದದಲ್ಲಿ ಮಹಾಂತಲಿಂಗ ಬಾಲಕನ ಬಾಲಲೀಲಾ ವಿಲಾಸದ ಅದ್ಭುತ ಕಲ್ಪನೆ ಇದೆ. ಇದು ಶಿವಯೋಗದ ಪಾರಿಭಾಷಿಕ ಹಿನ್ನೆಲೆಯಲ್ಲಿ ರಚಿಸಿದ ಅಪೂರ್ವ ಭಾವಗೀತೆ. ಮಹಾಂತ ಶಿವಯೋಗಿಗಳ ಕವಿತಾ ಪ್ರತಿಭೆಗೆ ಈ ಗೀತೆ ಉಜ್ವಲ ಸಾಕ್ಷಿಯಾಗಿದೆ.

ಶಿವಯೋಗದ ತುತ್ತ ತುದಿಯಲ್ಲಿ ನಿಂತು ಸಕಲ ಜೀವರಾಶಿಗಳನ್ನು ಸಮಭಾವನೆಯಿಂದ ಕಾಣುವ ಭಾವೈಕ್ಯತೆಯ ಪರಿಪೂರ್ಣ ದೃಷ್ಟಿಯನ್ನು ಅವರ ಮತ್ತೊಂದು ಗೀತೆಯಲ್ಲಿ ಕಾಣಬಹುದಾಗಿದೆ.

ಅವರವರ ಭಕುತಿಗೆ ಅವರವರ ಭಾವಕ್ಕೆ
ಅವರವರ ತೆರನಾಗಿ ಇರುತಿಹನು ಶಿವಯೋಗಿ ॥ ಪ ॥

ಇರುವೊಂದು ಕನ್ನಡಿಯ ನೂರಾರು ಜನಪಿಡಿಯೆ ।
ಸರಳವಾಗಿ ಅವರವರ ರೂಪು ಕಾಣುವಂತೆ ॥
ಹರಿಯ ಭಕ್ತರಿಗೆ ಹರಿ, ಹರನ ಭಕ್ತರಿಗೆ ಹರ ।
ನರರೇನು ಭಾವಿಸುವರದರಂತೆ ತೋರುವನು ॥ ೧ ॥

ಈ ಗೀತೆ ವಿಶ್ವಮಾನವ ಧರ್ಮ ಗೀತೆಯಾಗಿದೆ. Universal Prayer ಮಾನವ ಜನಾಂಗದ ಪ್ರಾರ್ಥನೆಯೂ ಆಗಿದೆ. ಈ ಭಾವೈಕ್ಯತೆಯ ಸಂದೇಶ ಮಾನವ ಜನಾಂಗಕ್ಕೆ ಎಂದೆಂದಿಗೂ ಪ್ರಸ್ತುತವಾಗುತ್ತದೆ.

ಕೈವಲ್ಯ ದರ್ಪಣದಲ್ಲಿ ಕೆಲವು ಸ್ತೋತ್ರ, ಗೀತೆಗಳೂ, ಮಂಗಳಾರತಿ ಪದಗಳೂ ಇವೆ. ಉತ್ತರ ಕರ್ನಾಟಕದಲ್ಲಿ ಅವು ಜನಪ್ರಿಯವಾಗಿದೆ. ಭಕ್ತರು ಭಜನೆಗಳಲ್ಲೂ ಭಾವುಕರು ದೇವರ ಪೂಜೆ ಮಾಡುವಾಗ ಹಾಡಿಕೊಳ್ಳುವುದುಂಟು. ಈ ಕೈವಲ್ಯ ಪದಗಳ ಮೂಲಕ ಇಂದಿಗೂ ಶಿವಯೋಗಿಗಳು ದರ್ಶನ ನೀಡುತ್ತಾರೆ; ಆಶೀರ್ವದಿಸುತ್ತಾರೆ ಎನ್ನುವ ನಂಬಿಕೆ ಅನೇಕ ಭಕ್ತರಲ್ಲಿದೆ.

ಒಂದು ಮಂಗಳ ಗೀತೆ ಹೀಗಿದೆ ;

ಜಯಮಂಗಳಂ ನಿತ್ಯ ಶುಭಮಂಗಳಂ ।
ಜಯ ಜಯತು ಶಿಶುಮಹಾಂತ ಲಿಂಗೇಶಗೆ ॥ ಪ ॥

ಧರೆಯ ಭಕ್ತರ ಮಹೇಶ್ವರರುಗಳ ಪುತ್ರನಿಗೆ
ಶರಣ ಬಸವಾದಿ ಪ್ರಮಥರ ಕಂದಗೇ
ಪರಶಿವನ ಪಾರ್ವತಿಯ ತೊಡೆಯ ಮೇಲಾಡುತಲಿ
ಪುರುಷಾಬ್ಧಿ ಹೆಚ್ಚಿಸುವ ಗುರುಪುತ್ರಗೆ ॥ ೧ ॥

ಇದು ಶಿಶು ಮಹಾಂತ ಲಿಂಗರನ್ನು ಕುರಿತ ಮಂಗಳಾರತಿ ಅವರ ವ್ಯಕ್ತಿ ದರ್ಶನಕ್ಕೆ ಹಿಡಿದ ಆರತಿಯಾಗಿದೆ. ಶಿವಯೋಗ ಸಾಧನೆಯ ವಿವಿಧ ಸ್ತರಗಳನ್ನು ತಿಳಿಸುತ್ತಾ ಲೋಕದಲ್ಲಿದ್ದೂ ಇಲ್ಲದ, ಚಿನ್ನ-ಕಬ್ಬಿಣವನ್ನು ಸಮನಾಗಿ ಕಂಡ ವೈರಾಗ್ಯ ವಿಭುವಿನ ಸಮಗ್ರ ಚಿತ್ರವೊಂದು ಪ್ರತಿಮಾ ವಿಧಾನದಲ್ಲಿ ಕಣ್ಮುಂದೆ ನಿಂತಂತಾಗುತ್ತದೆ. ಇದು ಮಂಗಳಾರತಿ ಗೀತೆ ಮಾತ್ರವಲ್ಲ, ಮಾತಿಗೆ ಮೀರದ ಅನುಭಾವ ಜ್ಯೋತಿ.

ತಾಯಿ ಶರಣೆ ಬಸವಾಂಬಿಕಾ ಮಾತೆ ಲಿಂಗೈಕ್ಯಳಾದಾಗ ಶಿವಯೋಗಿಗಳು ಮಕ್ಕಳಂತೆ ಅಳುತ್ತಾರೆ. ಪರಮವೈರಾಗ್ಯ ಮೂರ್ತಿಗಳಾದರೂ, ಮಾತೃ ವಿಯೋಗದ ದುಃಖ ಇದ್ದೇ ಇರುತ್ತದೆ. ಇದೊಂದು ಚರಮಗೀತೆ ಶೋಕರಸ ಈ ಹಾಡಿನಲ್ಲಿ ಉಕ್ಕಿ ಹರಿಯುತ್ತದೆ.

ಇರುವುದಕೆ ತಾವಿಲ್ಲ ಉಂಬುದಕೆ ಅನ್ನಿಲ್ಲ
ಹೊರುವುದಕೆ ವಸ್ತ್ರಾ ಮುನ್ನಿಲ್ಲದಿರುತಿರ್ದೆ
ಹರತನ್ನುಪದ್ರವನು ನಿನ್ನೊಕರಳಿಹ್ವಾಕಿದಕೆ ಗುರುತು ಮಾಡಿದಿಯು....

"ನರಲೋಕ, ಸುರಲೋಕ, ಎರಡು ಅತಿಗಳೆದು ಮಹಾಪರಲೋಕ ಕಂಡೆ ಮಾತೆ" ಎಂದು ಭಾವಪೂರ್ಣವಾಗಿ ಭಾಷ್ಪಾಂಜಲಿ ಅರ್ಪಿಸಿದ್ದಾರೆ. ಇದು ಶಿವಯೋಗಿಗಳ ಮಾತೃಭಾವಕ್ಕೆ ಹಿಡಿದ ಕನ್ನಡಿಯಾಗಿದೆ. "ಗುರು ತಾಯೆ ನಿನ್ನಿಂದ ಬಡತನಂ ಮುಚ್ಚಿತ್ತು ತೆರೆದಿಟ್ಟು, ಹೊದೆ ಕಡೆಗೆ" "ನಿನ್ನಿಂದ ಸಕಲ ಕಂಡೆ" ಎಂದು ತಾಯಿಯನ್ನು ಸ್ಮರಿಸಿ ಕೃತಜ್ಞತೆ ಅರ್ಪಿಸುತ್ತಾರೆ. ಈ ಗೀತೆಯನ್ನು ಓದುತ್ತಿದ್ದಂತೆ ತಾಯಿ-ಮಗನ ಪವಿತ್ರ ಸಂಬಂಧ, ಹಾಗೂ ವಿಯೋಗದ ಸನ್ನಿವೇಶ ಕರುಳು ಮಿಡಿಯುವಂತಿದೆ.

### ಕ್ರಾಂತಿಯೋಗಿ :

ಮಹಾಂತ ಶಿವಯೋಗಿಗಳು ಮೈಸೂರಿಗೆ ಮಹಾರಾಜರ ಪ್ರಾರ್ಥನೆಯನ್ನು ಅಂಗೀಕರಿಸಿ, ಅರಮನೆಗೆ ದಯಮಾಡಿಸಿದಾಗ, ರಾಜೋಚಿತವಾದ

ಗೌರವಾದರಗಳೊಡನೆ ಧನಕನಕ–ವಸ್ತ್ರ–ವಾಹನ ಮತ್ತು ಸಕಲಭೋಗ–ಭಾಗ್ಯಗಳನ್ನು ಮುಮ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರವರು ಶಿವಯೋಗಿಗಳಿಗೆ ಅರ್ಪಿಸುತ್ತಾರೆ. ಆ ಸಂದರ್ಭದಲ್ಲಿ ಮಹಾರಾಜರನ್ನು ಕುರಿತು ಹೇಳುವ ಹಾಡು ಹೀಗಿದೆ :

ನೀನೆಲ್ಲಿ ನಿನ್ನ ದೇಶೆಲ್ಲಿ ಕೇಳಲೆ ರಾಜ
ನಾನೆಲ್ಲಿ ನಾನಿರುವ ಸುಡಗಾಡ ಠಾವೆಲ್ಲಿ
ಏನಾಶೆ ಪಾಶದಲಿ ಬಿಗಿದನ್ನು ಕಟ್ಟದೆಯಾ ಕಳ್ಳರನು ಕಟ್ಟಿ ರೂಢಿ ।

ಎಂದು ಹೇಳಿ, ಮಹಾಗಣಂಗಳು ನಿನಗೆ ಜನ್ಮಜನ್ಮಾಂತರದವರೆಗೂ ದೊರೆತನ–ಐಶ್ವರ್ಯಗಳು ದೊರೆಯಲಿ ಎಂದು ಹಾಡಿ ಹರಸುತ್ತಿರಲಿ, ನನಗೆ ಜನ್ಮಜನ್ಮಾಂತರವೂ ಕುಂಬಳಕಾಯಿ ಬುರುಡೆ ಕೊಡಲಿ ಎಂದು ಹರಸುತ್ತಾರೆ. ಕನ್ನಡ ನಾಡಿನ ರಾಜರ್ಷಿ ಎಂದೇ ಪ್ರಸಿದ್ಧರಾಗಿದ್ದ ಮೈಸೂರಿನ ಕೃಷ್ಣರಾಜ ಒಡೆಯರ್ ಸಕಲ ಸಂಪತ್ತನ್ನು, ಶಿವಯೋಗಿಗಳಲ್ಲಿ ಅರ್ಪಿಸಿ, ನಿಮಗೆ ಬೇಕಾದದ್ದನ್ನು ತೆಗೆದುಕೊಂಡು ಹೋಗಿರಿ ಎಂದು ಬಿದ್ದು ಬೇಡಿಕೊಂಡರೂ, ಅವುಗಳನ್ನೆಲ್ಲ ತಿರಸ್ಕರಿಸಿ, ಕುಂಬಳಕಾಯಿ ಬುರುಡೆಯನ್ನು ಮಾತ್ರ ತಂದದ್ದು ರಾಜರಿಗೆ 'ವಿವೇಕ' ಹೇಳಿದ್ದು ಅವರ ವೈರಾಗಕ್ಕೆ ಸಾಕ್ಷಿಯಾಗಿದೆ. ರಾಜರ ಐಶ್ವರ್ಯವನ್ನು ಧಿಃಕ್ಕರಿಸಿಬಂದ ಈ ಶಿವಯೋಗಿಯ ನಿಲುವು ಕ್ರಾಂತಿಕಾರಕ ವಾದದ್ದು.

ಇದೇ ರೀತಿಯಾಗಿ ಚಿತ್ರದುರ್ಗದ ಜಗದ್ಗುರುಗಳು ಆಶೀರ್ವಾದದ 'ತಶರೀಪುಕಳುಹಿ' ಗುರುಕಾಣಿಕೆಯನ್ನು ಕಳಿಸಬೇಕೆಂದು ಮತ್ತೆ ಮತ್ತೆ ಹೇಳಿಕಳಿಸಿದಾಗ:

''ಆಶೀರ್ವಾದದ ತಶರೀಪುಕಳುಹಿ ಕೂಸಿನ ಕೈಯಿಂದ ಕಾಣಿಕೆ ಹಿಡಿದು ಅತಿ ದುರಾಶೆಗೆ ಬೀಳಬೇಡಿರಿ. ನಿಮಗೆ ಈಶ ಒಲಿಯನು''. ''ಜಗದ್ಗುರುಗಳು ನೀವಾದರೆ ಜಗತ್ಪುತ್ರನು ನಾನು. ಜನರಿಂದ ಪಟ್ಟಗಟ್ಟಿಸಿಕೊಂಡು ನೀವು ಜಗದ್ಗುರುಗಳಾದಿರಿ. ಶಿವನ ಹಾಗೂ ಶಿವಶರಣರ ಕರುಣೆಯಿಂದ ನಾನು ಜಗತ್ಪುತ್ರನಾದೆ'' ಎಂದು ಉತ್ತರ ಬರೆದು ಕಳಿಸುತ್ತಾರೆ.

ಒಂದು ಪ್ರತಿಷ್ಠಿತ ವಿರಕ್ತಮಠದ ಜಗದ್ಗುರುಗಳನ್ನು ಪ್ರತಿಭಟಿಸುವುದು ಸಾಮಾನ್ಯ ಸಂಗತಿಯಲ್ಲ, ಇದಕ್ಕೆ ನೈತಿಕ ಧೈರ್ಯಬೇಕು. ನಿಜದ ನೇರಕೆ

ನಡೆವ ನಿಶ್ಚಲತೆ, ಅನ್ಯಾಯಕ್ಕೆ ಎಂದೆಂದಿಗೂ ತಲೆಬಾಗದ ಎಚ್ಚರ, ಸತ್ಯಪಥದಲ್ಲಿ ಸಾಗುವ ಹಠದಿಂದಾಗಿ ಶಿವಯೋಗಿಗಳು ಅಧಿಕಾರಾರೂಢ ರಾಜಮಹಾರಾಜರನ್ನು, ಪ್ರತಿಷ್ಠಿತ ಜಗದ್ಗುರುಗಳನ್ನು, ಅಧಿಕಾರಿಗಳನ್ನು ಖಂಡ–ತುಂಡಾಗಿ ಪ್ರತಿಭಟಿಸಿದ್ದಾರೆ. ಅವರದು ಬಾಲಭಾವ ಕುಸುಮ ಕೋಮಲವಾದರೂ, ಅನ್ಯಾಯವನ್ನು ಕಂಡಾಗ ಅವರ ಮನಸ್ಸು ವಜ್ರದಂತೆ ಕಠೋರವಾಗುತ್ತದೆ. ಒಬ್ಬ ವಿರಕ್ತ ಸ್ವಾಮಿಯ ಪ್ರತಿಭಟನೆ; ಅನುಭಾವಿಯ ಬಂಡಾಯ,–ಕನ್ನಡ ಕೈವಲ್ಯ ಸಾಹಿತ್ಯದಲ್ಲಿ ಅಪರೂಪದ ನಿದರ್ಶನವಾಗಿದೆ. ಬಾಲಲೀಲಾ ಮಹಾಂತ ಶಿವಯೋಗಿಗಳು ತಮ್ಮ ಬಹುಪಾಲು ಹಾಡಿನಲ್ಲಿ ಸನ್ಯಾಸ, ಭಕ್ತಿ–ಜ್ಞಾನ–ವೈರಾಗ್ಯದ ವಿಷಯಗಳನ್ನು ಹೇಳಿದರೂ, ಸಂಸಾರಿಗಳಿಗೂ ಅವರ ದಿವ್ಯಸಂದೇಶವಿದೆ.

''ಸಂಸಾರದಲ್ಲೂ ಸದ್ಗತಿ ಇದೆ. ಬಸವಾದಿ ಪ್ರಮಥರೂ ಗೃಹಸ್ಥರಾಗಿದ್ದರು, ಸಂಸಾರಿಗಳಾಗಿದ್ದೂ ಸನ್ಮಾರ್ಗದಲ್ಲಿ ನಡೆದರೆ ಕುಶಲಶಂಕರ ಮೋಕ್ಷ ಕೊಡುತ್ತಾನೆ. ಗುರುಸೇವೆ ಮಾಡಿ ಸಂಸಾರದಲ್ಲಿದ್ದೂ ಸನ್ಮಾರ್ಗದಲ್ಲಿ ನಡೆವ ಪುಣ್ಯಾತ್ಮರಿಗೆ ಮಡದಿ–ಮಕ್ಕಳಿಗೂ ನಿಜಮೋಕ್ಷ ಕೊಡುತ್ತಾನೆ. ಸನ್ಯಾಸ ಮೇಲು ; ಸಂಸಾರ ಕೀಳಲ್ಲ. ಸನ್ಮಾರ್ಗದಲ್ಲಿ ನಡೆಯುವವರಿಗೆ–ಎರಡೂ ಒಂದೇ, ಎನ್ನುವ ಅರ್ಥಪೂರ್ಣ ಧ್ವನಿ ಅವರ ಮಾತಿನಲ್ಲಿ ಅಡಗಿದೆ.

ಶಿವಯೋಗಿಗಳ ಕೈವಲ್ಯ ದರ್ಪಣದ ಹಾಡುಗಳನ್ನು ಓದುತ್ತಾ ಹೋದಂತೆ, ಇಂದಿನ ಭೋಗಜೀವನದ ದಾಹ ; ಕೋಮುವಾದದ ಕಿಚ್ಚಿನಲ್ಲಿ ಬೇಯುತ್ತಿರುವ ಮಾನವ ಜನಾಂಗಕ್ಕೆ ಭಕ್ತಿ–ಜ್ಞಾನ–ವೈರಾಗ್ಯಗಳ ತಿಳುವಳಿಕೆ ನೀಡಿ ಪ್ರಾಮಾಣಿಕ ಬದುಕಿಗೆ ಮಾರ್ಗದರ್ಶನ ಮಾಡಬಲ್ಲ ಹಿತನುಡಿಗಳು, ಮಾನವೀಯ ಗುಣಮೌಲ್ಯಗಳ ಪ್ರತಿಪಾದನೆ ಈ ಎಲ್ಲ ಹಾಡುಗಳ ಉದ್ದಕ್ಕೂ ಹರಿದಿರುವುದನ್ನು ಕಾಣಬಹುದಾಗಿದೆ.

ಬಾಲಲೀಲಾ ಮಹಾಂತ ಶಿವಯೋಗಿಗಳ ಕೈವಲ್ಯದರ್ಪಣವನ್ನು ಓದಿದ ಮೇಲೆ ಇವರು ನಿಷೇಧಾತ್ಮಕ ತತ್ತ್ವ (Negative Philosophy)ವನ್ನು ಬೋಧಿಸುತ್ತಾರೆ ಎನ್ನುವ ಅವಸರದ ತೀರ್ಮಾನಕ್ಕೆ ಬರಬಾರದು. ನಮ್ಮ ಲೌಕಿಕದ ಬದುಕನ್ನು ಸನ್ಮಾರ್ಗದಲ್ಲಿ ನಡೆಸಿ, ಪಾರಮಾರ್ಥಿಕದೆಡೆಗೆ ಸಾಗುವ ದಾರಿ ತೋರಿದ್ದಾರೆ. ಜೀವನ ನಶ್ವರ, ದೇಹ ಅಸ್ಥಿರ, ಹೆಣ್ಣು ಮಾಯೆ, ಸಂಸಾರ

ದುಃಖಮಯ ಪರಮಾತ್ಮ ಸ್ಥಿರ ಎನ್ನುವ ಚರಮ ಸತ್ಯವನ್ನು ತಿಳಿಸಿ, ಸಂಸಾರವೆಂದರೆ ಅದು ಹೊರಗಿಲ್ಲ ನಮ್ಮ ಮನಸ್ಸಿಲ್ಲೇ ಇದೆ. ಅದರ ಚಪಲತೆಯನ್ನು ನಿಗ್ರಹಿಸಿ ಸನ್ಮಾರ್ಗದೆಡೆಗೆ ಸಾಗಲು ತಿಳಿಸಿದ್ದಾರೆ. ಸಂಸಾರದಲ್ಲಿ ಅಂಟಿಯೂ ಅಂಟದಂತಿರು, ಎಚ್ಚರವಾಗಿರು, ನಿನ್ನ ಗುರಿಯ ಕಡೆಗೆ ಸದಾ ಲಕ್ಷ್ಯವಿಡು. ಸಂಸಾರಿಯಾಗಿದ್ದು ಸನ್ಮಾರ್ಗದಲ್ಲಿ ನಡೆ. ಬದುಕಿನ ಸಾರ್ಥಕತೆಯನ್ನು ಅರಿ. ಈ ಜಗತ್ತಿನಿಂದ ಓಡಿಹೋಗಬೇಡ, ನಿನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸು. ಎಚ್ಚರದಿಂದಿರು, ಈಶನ ಕೃಪೆ ನಿನಗಾಗುತ್ತದೆ ಎನ್ನುವ ಭರವಸೆ ನೀಡುತ್ತಾರೆ. ಇದು ಬಾಲಲೀಲಾ ಮಹಾಂತ ಶಿವಯೋಗಿಗಳ ಕೈವಲ್ಯ ದರ್ಪಣದ ಸಂದೇಶವಾಗಿದೆ.



# ಸಾವಿನ ಪರಿಕಲ್ಪನೆ-ಧಾರ್ಮಿಕ ಹಿನ್ನೆಲೆಯಲ್ಲಿ

ಸಾವು ಹಗೆಯೆಂದವನ ಜೀವನವು ವ್ಯಥೆಯ ಕಥೆ
ಸಾವು ಸಖನೆಂದವನ ಬದುಕು ಸೊಗಸು !
ಜೀವ ಸಾವಿನ ಕೊಡುಗೆ, ಸಾವು ಜೀವನದಡುಗೆ
ಸಾವಿಗೂ ಶರಣೆನ್ನೋ ಮರುಳಸಿದ್ಧ ॥
ಮತ್ತೆ ಈ ಲೋಕಕ್ಕೆ ಬರುವೆಯೋ ಇಲ್ಲವೋ
ಕರ್ತವ್ಯವಾವುದನು ಉಳಿಸಬೇಡ ।
ಸುತ್ತ ಶಕ್ತಿಯ ಲೋಕಸೇವೆಗೆ ಬಳಸು
ತೃಪ್ತ ಪಯಣವ ಬೆಳೆಸು ಮರುಳಸಿದ್ಧ ॥

-'ಕಾವ್ಯಾನಂದ'

ಆದಿಮಾನವನ ಕಾಲದಿಂದಲೂ, ಮನುಷ್ಯನಿಗೆ ಸಾವಿನ ಭಯ ಕಾಡುತ್ತ ಬಂದಿದೆ. ಮತ್ತೆ ಸಾವಿನನಂತರ ಏನು? ಎನ್ನುವ ಕುತುಹಲವೂ ಅವನನ್ನು ಬೆರಗುಗೊಳಿಸಿದೆ. 'ಸಾವನ್ನು' ಕುರಿತು ಅನಂತರದ ಸ್ಥಿತಿಯನ್ನು ಕುರಿತು, ಜಾಗತಿಕ ಧರ್ಮಗಳು ತಮ್ಮದೇ ಆದ ರೀತಿಯಲ್ಲಿ ಉತ್ತರ ನೀಡುತ್ತಾ ಬಂದಿವೆ. ಧರ್ಮದ ಹಿನ್ನೆಲೆಯಲ್ಲಿ ಸಾವನ್ನು ಕುರಿತು ಎಷ್ಟೇ ಸಮಾಧಾನದ ಉತ್ತರ ಬಂದರೂ, ಸಾವಿನ ಬಗ್ಗೆ ಮನುಷ್ಯನಿಗೆ ಭಯ ಇದ್ದೇ ಇದೆ. ಆದರೂ ಸಾವಿನ ಬಗ್ಗೆ ಸ್ಪಷ್ಟವಾದ ಅರಿವು ಮೂಡಿದರೆ ಭಯದ ಕತ್ತಲೆ ಓಡಿಹೋಗುತ್ತದೆ. ಜೀವನದಲ್ಲಿ ಮನುಷ್ಯ ಅನುಭವಿಸದೇ ಇರುವ, ತೀರಾ ಹೊಸ ಅನುಭವ ಸಾವು.

ನಾವು ಸಾವಿಗೆ ಏಕೆ ಹೆದರುತ್ತೇವೆ ? ಹಾಗೂ, ಬದುಕಿಗಿಂತ ಸಾವು ಬೇರೆ ಎಂದು ಏಕೆ ತಿಳಿಯುತ್ತೇವೆ ?

ಇದಕ್ಕೆ ಕಾರಣವೂ ಇದೆ. ನಾನು, ನನ್ನ ಹಣ, ನನ್ನ ಮನೆ, ಮಡದಿ ನನ್ನ ಅನುಭವ ಇದಕ್ಕೆ 'ಬದುಕು' ಎನ್ನುತ್ತೇವೆ. ನೆನಪಿನ ನಿರಂತರ ಪ್ರಕ್ರಿಯೆಗಳಿಗೆ ವಿರಾಮ ಹೇಳುವುದೇ ಸಾವು. ಜನನ-ಮರಣಗಳು ಜೀವನ ಪ್ರವಾಹದ

ಎರಡು ದಡಗಳು. ಒಂದೇ ನಾಣ್ಯದ ಎರಡು ಮುಖಗಳು. ನಿರಂತರ ಜೀವನ ಚಲನೆಯ ಪ್ರಕ್ರಿಯೆಯ ಅವಸ್ಥೆಗಳು ಮಾತ್ರ. ಹುಟ್ಟು–ಸಾವು ನಮ್ಮ ಜೀವನದ ಅವಧಿಯ ಬದುಕು–ಬದುಕಿನ ಕ್ರಿಯೆಗಳು. ಒಂದು ಆರಂಭ, ಇನ್ನೊಂದು ಅಂತ್ಯ. ತಪ್ಪಿಸಲಿಕ್ಕೆ ಸಾಧ್ಯವಿಲ್ಲ. ಜನನ ಆಕಸ್ಮಿಕ, ಸಾವು ಅನಿವಾರ್ಯ, ಜನನ ಮರಣಗಳು ಅವಳಿ–ಜವಳಿ ಇದ್ದಂತೆ, ಸಾವು ಜನ್ಮದ ಬೆನ್ನಿಗಂಟಿಕೊಂಡೇ ಬರುತ್ತದೆ. ಇದು ಜನುಜನುಮದ ಜೋಡಿ. ಹುಟ್ಟು–ಸಾವು ನಮ್ಮ ಜೀವನದ ಅವಧಿಯ ಬದುಕು. ಬದುಕಿನ ಕ್ರಿಯೆಗಳು. ಜನನದ ಗರ್ಭದಲ್ಲಿಯೇ ಸಾವಿನ ಮೊಟ್ಟೆ ಕಾವಿಗೆ ಕುಳಿತಿರುತ್ತವೆ. ಜನನ ಭೂತ ; ಮರಣ ಭವಿಷ್ಯ–ಮಧ್ಯದ ಬದುಕು ವರ್ತಮಾನ. ಹುಟ್ಟು–ಸಾವುಗಳು ಬೇರೆ–ಬೇರೆ ಅಲ್ಲ ; ಅವು ನಮ್ಮ ಬದುಕಿನ ಅವಿಭಾಜ್ಯ ಅಂಗಗಳು, ಇವುಗಳನ್ನು ಬೇರೆ–ಬೇರೆ ಎಂದು ಭಾವಿಸುವುದೇ ತಪ್ಪು. ಜನನವೆಂಬ ವೃಕ್ಷದಲ್ಲಿಯೇ ಸಾವು ಎಂಬ ಹಣ್ಣು ಬಿಡಲು ಕಾದು ಕುಳಿತಿದೆ. ಹುಟ್ಟಿಗೆ ಮಾತ್ರ ಸಂತಸಪಟ್ಟು ; ಮರಣಕ್ಕೆ ಶೋಕಿಸುವುದು ಅವಿವೇಕತನವೆನಿಸುತ್ತದೆ.

ಲೋಕವಿಖ್ಯಾತ ಕವಿ ಶೇಕ್ಸಪಿಯರ್ ತನ್ನ ಜ್ಯೂಲಿಯಸ್ ಸೀಜರ್‌ನ ನಾಟಕದಲ್ಲಿ ಒಂದು ಮಾತು ಪಾತ್ರದ ಮೂಲಕ ಹೇಳಿಸುತ್ತಾನೆ : ''ಹೇಡಿಗಳು ಹಲವು ಸಲ ಸತ್ತರೆ, ಧೀರರು ಒಮ್ಮೆ ಮಾತ್ರ ಸಾಯುತ್ತಾರೆ''. ಸಾವಿಗೆ ಕವಿ ವಿಶಿಷ್ಟವಾದ ಅರ್ಥವನ್ನು ನೀಡಿ, ವ್ಯಾಖ್ಯಾನಿಸಿದ್ದಾನೆ.

ಬುದ್ಧ ತನ್ನೆಡೆಗೆ ಬಂದ ಮಹಿಳೆಗೆ ಸಾಂತ್ವನ ಹೇಳಲು, ಯಾರೂ ಸಾಯಲಾರದವರ ಮನೆಯಿಂದ ಒಂದಿಷ್ಟು ಸಾಸಿವೆ ಕಾಳು ತರಲು ಹೇಳುತ್ತಾನೆ. ಮನುಕುಲದ ಇತಿಹಾಸವನ್ನು ಅವಲೋಕಿಸಿದರೆ ಮನುಷ್ಯ ಎಲ್ಲವನ್ನೂ ಗೆದ್ದಿದ್ದಾನೆ; ಸಾವಿಗೆ ಮಾತ್ರ ಸೋತಿದ್ದಾನೆ. ಸಾವು ಯಾರನ್ನೂ ಬಿಟ್ಟಿಲ್ಲ; ಅದು ಯಾವುದನ್ನೂ ಮರೆತಿಲ್ಲ, ಮರೆಯುವಂತಿಲ್ಲ. ಹುಟ್ಟು ಯಾವುದೇ ಮೂಲೆಯಲ್ಲಿರಲಿ, ಸಾವು ಅದನ್ನು ಹುಡುಕಿಕೊಂಡು ಹೋಗುತ್ತದೆ. ಇಲಿಯನ್ನು ಹುಡುಕಿಕೊಂಡು ಹೋಗುವ ಬೆಕ್ಕಿನಂತೆ. ದಣಿದ ದೇಹಕ್ಕೆ ನಿದ್ರೆ ಅಲ್ಪವಿರಾಮ ; ಸಾವು ಪೂರ್ಣವಿರಾಮ, ಬದುಕು ಪ್ರಶ್ನಾರ್ಥಕ. ಸಾವು ನಿದ್ರೆಯ ಹಿರಿಯ ಅಣ್ಣನಂತಿದ್ದರೆ, ನಿದ್ರೆ ಸಾವಿನ ಕಿರಿಯ ತಮ್ಮನೆಂದು ಭಾವಿಸಬೇಕು.

ಮಾನವ ಜನಾಂಗವನ್ನು ಸತ್ತುಸತ್ತವರು, ಸತ್ತುಬದುಕಿದವರು, ಬದುಕಿ ಸತ್ತವರೆಂದು ವಿಂಗಡಿಸುವುದುಂಟು. ಬುದ್ಧ ಇದನ್ನೇ–ಕತ್ತಲೆಯಿಂದ ಬೆಳಕಿನೆಡೆಗೆ ಸಾಗುವವರು, ಬೆಳಕಿನಿಂದ ಕತ್ತಲೆಯ ಕಡೆಗೆ ಸಾಗುವವರು ಹಾಗೂ ಕತ್ತಲೆಯಿಂದ ಕಾಡುಗತ್ತಲೆಯ ಕಡೆಗೆ ಸಾಗುವವರು ಎಂದೂ ವಿಂಗಡಿಸುತ್ತಾನೆ. ಈ ಜಗತ್ತಿನಲ್ಲಿ ಎಲ್ಲರಿಗೂ ಸಾವು ನಿಶ್ಚಿತ. ಸಾವಿನಲ್ಲೂ ಸಾರ್ಥಕ ಸಾವು ತೀರಾ ವಿರಳ. ಬುದ್ಧನ ಸಾವು ಮಾನವ ಕಲ್ಯಾಣದ ಸಾವು ; ಬಸವಣ್ಣನವರ ಸಾವು, ಮನುಕುಲದ ಉದ್ಧಾರದ ಸಾವು. ಏಸುಕ್ರಿಸ್ತನ ಸಾವು, ಮನುಕುಲದ ಕ್ಷಮಾಗುಣದ ಸಾವು. ಅಬ್ರಹಾಂಲಿಂಕನ್ನನ ಸಾವು ; ಗುಲಾಮಗಿರಿಯ ವಿಮೋಚನಾ ಸಾವು, ಮದರ್ ತೆರೆಸಾಳ ಸಾವು–ವ್ರತಬದ್ಧ ಮಾತೃಮಮತೆಯ ಸಾವು. ಇಂದಿರಾಗಾಂಧಿಯ ಸಾವು ಅಂಗರಕ್ಷರ ವಿಶ್ವಾಸದ ಸಾವು, ರೂಪಾ ಕನ್ವರಳ ಸಾವು ಅಂಧವಿಶ್ವಾಸ, ಮೂಢನಂಬಿಕೆಯ ಸಾವು– ಹೀಗೆ ಸಾವಿನಲ್ಲೂ ಅನೇಕ ವಿಧವೆಂದು ಹೇಳುತ್ತಾರೆ. ಮನುಷ್ಯನ ಕಷ್ಟ– ನಷ್ಟಗಳು ಅವನು ಬದುಕಿರುವವರೆಗೂ ಇರುತ್ತವೆ. ಸುಖ–ದುಃಖಗಳು, ನೆರಳು–ಬೆಳಕಿನಂತೆ, ನಮ್ಮ ಜೀವನದಲ್ಲಿ ಆಟವಾಡುತ್ತವೆ. ಇವುಗಳಿಗೆ ಕೊನೆ ಎಂದು ? ಜೀವನ ನಾಟಕದ ಕೊನೆಯ ಅಂಕದ ಪರದೆ ಎಳೆಯುವುದೇ ಸಾವು. ಆದ್ದರಿಂದ ಸಾವು ನಮಗೆ ಸಖ.

ಚೀನಾದೇಶದ ತತ್ತ್ವಜ್ಞಾನಿ ಕನ್‌ಫ್ಯೂಸಿಯಸ್‌ನ ಮಾತು :

> So long as you not know life ;
> How can you know death ?

ಬದುಕು ಅರ್ಥವಾದರೆ, ಸಾವು ಅರ್ಥವಾಗುತ್ತದೆ ಎಂದು ಆತನ ಅಭಿಪ್ರಾಯ. ಅನುಭವ ಸವಿಯಲ್ಲ; ಅದರ ನೆನಪೇ ಸವಿ ಎನ್ನುವಂತೆ ಸಾವಿಗಿಂತ ಅದರ ನೆನಪು ನಮ್ಮನ್ನು ಹೆಚ್ಚು ಕಾಡಿಸುತ್ತದೆ. ಮನುಷ್ಯ ಎಲ್ಲ ರಹಸ್ಯ ಅರಿತಿದ್ದರೂ, ವಿಜ್ಞಾನ ಎಷ್ಟೇ ಪ್ರಗತಿಪರವಾಗಿ ಮುನ್ನಡೆದಿದ್ದರೂ ಸಾವಿನ ರಹಸ್ಯ ಮಾತ್ರ ತಿಳಿಯಲಿಲ್ಲ.

ಜಗತ್ತಿನ ಎಲ್ಲ ತತ್ವಜ್ಞಾನಿಗಳ ಆತ್ಮಸ್ಥಿರ–ದೇಹ ಅಸ್ಥಿರ, ಸಾವು ದೇಹಕ್ಕೆ ಮಾತ್ರ, ಆತ್ಮನಿಗಿಲ್ಲ ಎನ್ನುವ ಪರಿಕಲ್ಪನೆ ಹೆಚ್ಚು ವ್ಯಾಪಕವಾಗಿದೆ.

ಗ್ರೀಕ್ ತತ್ತ್ವಜ್ಞಾನಿ ಪೈಥಾಗೋರಸ್ ''ಮಾನವ ಶರೀರ ಆತ್ಮದ ಸೆರೆ'' ಅನ್ನುತ್ತಾನೆ. ಸಾಕ್ರೆಟಿಸ್ ''ದೇಹ ಭೌತಿಕ, ಆತ್ಮ ಅಭೌತಿಕ ಎನ್ನುತ್ತಾನೆ''. ಪ್ಲೇಟೋ ತನ್ನ ರಿಪಬ್ಲಿಕ್‌ನಲ್ಲಿ ''ಆತ್ಮ ಅವಿನಾಶ, ಶರೀರಕ್ಕೆ ಜನನ ಮರಣವಿದೆ, ಆತ್ಮ ಹುಟ್ಟುವುದೂ ಇಲ್ಲ ; ಸಾಯುವುದೂ ಇಲ್ಲ'' ಎನ್ನುತ್ತಾನೆ. ಭಾರತೀಯ ಬಹುತೇಕ ಎಲ್ಲ ತತ್ತ್ವಜ್ಞಾನಿಗಳಿಗೂ ಈ ವಿಚಾರ ಸಮ್ಮತಿಯಿದೆ. ವಿಶ್ವಕವಿ ರವೀಂದ್ರನಾಥ ಠಾಕೂರರ ಅಭಿಪ್ರಾಯ ಹೀಗಿದೆ :

Death cannot swallow life ; Which is immortal
It only casts its shadow like Rahu

(Wings of Death p. 85)

''ಸಾವು ಅಮರವಾದ ಆತ್ಮವನ್ನು ನುಂಗಲಾರದು ; ಅದು ರಾಹುವಿನಂತೆ ನೆರಳಾಗಿ ಮಾತ್ರ ಮುಸುಕುವುದು''.

ಈ ಜಗತ್ತಿನಲ್ಲಿ ಸಾಯಲು ಯಾರೂ ಸಿದ್ಧರಿಲ್ಲ, ಬದುಕಬೇಕು ಎನ್ನುವ ಆಸೆ ಎಲ್ಲರಿಗೂ ಇದ್ದೇ ಇದೆ. ಇದು ಜೀವಿಯ ಸಹಜ ಪ್ರವೃತ್ತಿ ಸಂಸ್ಕೃತದ ಮಹಾಕವಿ ಬಾಣ ಈ ಸತ್ಯವನ್ನು ತನ್ನ ಬೃಹತ್ ಕಾದಂಬರಿಯಲ್ಲಿ ಒಂದು ಗಿಳಿಯ ಮೂಲಕ ಹೇಳಿಸುತ್ತಾನೆ ; 'ಅತಿಕಷ್ಟಾಸ್ವಪಿ ಅವಸ್ಥಾಸು ಜೀವನ ನಿರಪೇಕ್ಷಾ ನ ಭವತಿ ಸರ್ವೇಷಾಂ ಪ್ರಾಣೇನಾಂ ಪ್ರವೃತ್ತಯಃ' ಎಂಥ ಕಷ್ಟದ ಸನ್ನಿವೇಶದಲ್ಲೂ ಜೀವನ ಬೇಡವೆನಿಸುವುದಿಲ್ಲ, ಇದು ಎಲ್ಲ ಪ್ರಾಣಿಗಳ ಪ್ರವೃತ್ತಿ ಎಂದು ವಾಸ್ತವ ಸತ್ಯವನ್ನು ಹೇಳುತ್ತಾನೆ. ಬುದ್ಧನ ಮನಸ್ಸಿನ ಪರಿವರ್ತನೆಗೆ ಸಾವಿನ ದೃಶ್ಯವೇ ಕಾರಣವಾಯಿತು. ಏಸು, ಸಾಕ್ರೆಟಿಸ್, ಗಾಂಧೀಜಿ ಇವರು ಸಾವನ್ನು ಎದುರಿಸಿದ ರೀತಿ ಅನ್ಯಾದೃಶವಾದುದು. ಪ್ರಾಚೀನ ಕಾಲದಿಂದ ಸಾವು ಮನುಷ್ಯನನ್ನು ಚಿಂತೆಗೀಡು ಮಾಡಿದಂತೆ ಚಿಂತನಶೀಲನನ್ನಾಗಿ ಮಾಡಿದೆ. ಹುಟ್ಟು–ಸಾವಿನ ರಹಸ್ಯ ತಿಳಿಯುವ ಪ್ರಯತ್ನ ಅನಾದಿ ಕಾಲದಿಂದಲೂ ಬಂದಿದೆ. ಮನುಷ್ಯನಿಗೆ ಜನನ–ಮರಣದ ರಹಸ್ಯ ತಿಳಿಯದೆ ಅವುಗಳಿಗೆ ಭೀತನಾಗಿ, ಮೋಕ್ಷದ ಕಲ್ಪನೆ ಮಾಡಿಕೊಂಡಿದ್ದಾನೆಂದು ವಿಚಾರವಾದಿಗಳು ಹೇಳುತ್ತಾರೆ. ಮೃತ್ಯುವಿಗೆ ಭಯಪಡುವ ಕಾರಣವಿಲ್ಲ, ಅವನು ದೇಶಾಂತರಕ್ಕೆ ಕರೆದುಕೊಂಡು ಹೋಗುವ ಗೆಳೆಯ. ಜೀವನದಲ್ಲಿ ಸಾರ್ಥಕವಾಗಿ ಬಾಳಿದವನಿಗೆ, ಸಾವಿನ

ಭಯ ಏಕೆ ? ತೊಟ್ಟಿಲುಗಳೆಷ್ಟೋ ಮಸಣಗಳೂ ಅಷ್ಟೇ. ಈ ಜಗತ್ತಿನಲ್ಲಿ ಹುಟ್ಟಿದವರೆಲ್ಲ ಸಾಯದೆ ನಿಲ್ಲಲು,ಹೊಸದಾಗಿ ಹುಟ್ಟುವವರಿಗೆ ಎಡೆ ಎಲ್ಲಿ ? ಎಂದು ಡಿ.ವಿ.ಜಿ. ಹೇಳುತ್ತಾರೆ. ಸಾವಿನ ಅನಿವಾರ್ಯತೆಯನ್ನು ಪರ್ಷಿಯಾದ ಕವಿ ಉಮರ್ ಖಯ್ಯಾಂ ಹೇಳುತ್ತಾನೆ. ''ಮುದಿ ಉಮ್ಮರ್‌ನ ಕೂಡ ನಡೆ ; ಪಂಡಿತರನ್ನೆಲ್ಲ ವಾದಿಸಲು ಬಿಡು, ದಿಟವಿದೊಂದಿಹುದು ಕೇಳು ; ಬಾಳು ಅಳಿವುದೆ ದಿಟವು, ಮಿಕ್ಕೆಲ್ಲ ನಡೆಯೆ ಸರಿ– ಒಮ್ಮೆ ಅರಳಿದ ಹೂ ಬಾಡುವುದೆ ದಿಟವು'' ಎಂದು ಹೇಳುತ್ತಾನೆ.

ಆಕಸ್ಮಾತ್ ಆಹತಂ ಭೂತಂ । ಆಕಸ್ಮಾದೇವಗಚ್ಛತಿ ।
ತಸಾಜ್ಞಾತಂ ಮೃತಂ ಚೈವ । ಸಂಪಶ್ಯಂತಿ ಸುಚಿತಸಃ ।

ಆಕಸ್ಮಿಕವಾಗಿ ಬಂದ ದೇಹ, ಆಕಸ್ಮಿಕವಾಗಿ ಹೋಗುತ್ತದೆ. ಅದಕ್ಕಾಗಿ ಪ್ರಜ್ಞರು ವ್ಯಥೆಪಡುವುದಿಲ್ಲ. ಜನನ–ಮರಣಗಳೂ ಆಕಸ್ಮಿಕಗಳೇ.

ಜಗತ್ತಿನ ಅದ್ಭುತ ಹಾಗೂ ಆಶ್ಚರ್ಯದ ಸಂಗತಿ ಯಾವುದು ? ಎಂಬ ಯಕ್ಷನ ಪ್ರಶ್ನೆಗೆ, ಧರ್ಮರಾಯ 'ಸಾವು' ಎಂದು ಸರಿಯಾಗಿಯೇ ಉತ್ತರಿಸುತ್ತಾನೆ. ಕಾರಣ ಕೇಳಿದಾಗ, ಪ್ರತಿದಿನ ಒಂದಿಲ್ಲೊಂದು ಜೀವಿ ಸಾಯುತ್ತಿರುವುದನ್ನು ತಿಳಿದು, ನಾವು ಮಾತ್ರ ಶಾಶ್ವತ ಎಂದು ವರ್ತಿಸುತ್ತೇವೆ. ಇದಕ್ಕಿಂತ ಆಶ್ಚರ್ಯದ ಸಂಗತಿ ಯಾವುದಿದೆ ಎನ್ನುತ್ತಾನೆ. ಈ ಜೀವನ ಮಿಂಚಿನಂತೆ ಕ್ಷಣಿಕ–ಸಾವಿನ ಬಿರುಗಾಳಿ, ಬರಸಿಡಿಲಿನೊಂದಿಗೆ ಬಂದಾಗ ಮನುಷ್ಯನ ಆಸೆ ಚೆಲ್ಲಾಪಿಲ್ಲಿಯಾಗುತ್ತದೆ. ಕನಸುಗಳು ನುಚ್ಚುನೂರಾಗುತ್ತವೆ. ಸಾವಿನ ಭಯವಿದ್ದರೂ ಆಶೆಯ ಮಾತುಗಳು ಮನುಷ್ಯನನ್ನು ಬಂಧಿಸುತ್ತಾ ಬಂದಿವೆ. ನಾವು ಸಾಮಾನ್ಯವಾಗಿ ದೇಹಧಾರಿಯಾದ ವ್ಯಕ್ತಿ ಎನ್ನುವ ಮಾತನ್ನೂ ಬಳಸುತ್ತೇವೆ. ಈ ಮಾತಿನಲ್ಲಿ ಜೀವಚೈತನ್ಯವೆನಿಸಿದ, ಜೀವಾತ್ಮನ ಕಲ್ಪನೆ ಸಹಜವಾಗಿ ಬರುತ್ತದೆ.

ಇದು ನಿಜವೇ ? 'ಸತ್ತುಹೋದ' ಎನ್ನುವ ಮಾತಿಗೆ ಎತ್ತ ಹೋದ ? ಎನ್ನುವ ಕುತೂಹಲ ಸಹಜವಾಗಿ ಮೂಡುತ್ತದೆ. ಎಲ್ಲಿಗೆ ಹೋಗಿದ್ದಾನೆ ? ಎಲ್ಲಿ ಇದ್ದಾನೆ ? ಎನ್ನುವ ಪ್ರಶ್ನೆಗಳು ನಮ್ಮನ್ನು ಕಾಡುತ್ತವೆ. ಆಲೋಚಿಸಿದಂತೆಲ್ಲ ದೇಹ–ಜೀವಗಳ ಸಂಬಂಧ, ಮರಣಾನಂತರ ಜೀವನ, ಜನ್ಮಾಂತರ, ಸ್ವರ್ಗ–ನರಕ, ಕರ್ಮವಾದ, ಇತ್ಯಾದಿ ಪ್ರಶ್ನೆಗಳು ಮತ್ತೆ ಮತ್ತೆ ನಮ್ಮನ್ನು

ಎದುರಿಸುತ್ತವೆ. ಅವುಗಳಿಗೆ ಸೂಕ್ತವಾದ ಉತ್ತರವನ್ನು ಮತ–ಧರ್ಮಗಳು ನೀಡುತ್ತಾ ಬಂದಿವೆ.

ಚಿಂತಕರ ಚಿಂತನೆಯಲ್ಲಿ (All about death)

೧. "Every man knows he will die, but no man wants to believe it" (ಪ್ರತಿಯೊಬ್ಬ ಮನುಷ್ಯನೂ ತನಗೆ ಸಾವು ಇದೆ ಎಂದು ತಿಳಿದಿದ್ದಾನೆ. ಆದರೆ ಯಾರೂ ಇದನ್ನು ನಂಬಲು ಬಯಸುವುದಿಲ್ಲ)

೨. "Death is a law, not punishment" (ಸಾವು ಒಂದು ನ್ಯಾಯ;ಅದು ಶಿಕ್ಷೆಯಲ್ಲ, ನಿಯಮ)

೩. "To live a good life, to die a holy death that is everything" (ಒಳ್ಳೆಯ ಬದುಕು, ಒಳ್ಳೆಯ ಸಾವು ಇದೇ ಬದುಕಿನ ಸಾರ್ಥಕತೆ)

೪. "The love of life is at bottom only the fear of death" (ಜೀವನದ ಬಗ್ಗೆ ಆದಮ್ಯ ಪ್ರೀತಿಯೇ ಸಾವಿನ ಬಗ್ಗೆ ಭಯವನ್ನುಂಟು ಮಾಡುತ್ತದೆ)

೫. "Six feat of earth makes us all one size" (ಆರಡಿ ಭೂಮಿ (ಸ್ಮಶಾನದಲ್ಲಿ) ನಮ್ಮನ್ನು ಸಮ ಮಾಡುತ್ತದೆ)

೬. "Death is the poor man's doctor" (ಸಾವು ಬಡವನ ವೈದ್ಯ)

೧. ವೈದಿಕ ಧರ್ಮದಲ್ಲಿ ಸಾವಿನ ಪರಿಕಲ್ಪನೆ :

ವೈದಿಕರಲ್ಲಿ 'ಸಾವು' ಎಂದರೆ ವೈಕುಂಠ ಅಥವಾ ಕೈಲಾಸಕ್ಕೆ ಹೋಗುವುದು. ವ್ಯಕ್ತಿ ಸತ್ತ ಮೇಲೆ ಜೀವನು ಯಮಲೋಕಕ್ಕೇ ಹೋಗುತ್ತಾನೆ ಎನ್ನುವ ನಂಬಿಕೆ ಇದೆ ಋಗ್ವೇದದಲ್ಲಿ. ಯಮನಿಗೆ ಹಲವು ಅರ್ಥಗಳಿವೆ. ಯಮ ಶಬ್ದಕ್ಕೆ ಪರಮೇಶ್ವರ ಎನ್ನುವ ಅರ್ಥವಿದೆ. ವಾಯು, ವಿದ್ಯುತ್, ಸೂರ್ಯ ಎನ್ನುವ ನಾಮಗಳೂ ಇವೆ. ಪುಣ್ಯವಂತರಿಗೆ ಯಮಲೋಕ ಸುಖದ ದಾರಿ, ಪಾಪಿಗಳಿಗೆ ಕಷ್ಟದ ದಾರಿ ಎನ್ನುವ ನಂಬಿಕೆ ಇದೆ. ವೈದಿಕರಿಗೆ

ವೇದ–ಉಪನಿಷತ್–ಭಗವದ್ಗೀತೆ, ಗರುಡ ಪುರಾಣ–ಕರ್ಮವಿಪಾಕಶಾಸ್ತ್ರ ಇತ್ಯಾದಿ ಗ್ರಂಥಗಳು ಆಧಾರವಾಗಿರುತ್ತವೆ.

ವೈದಿಕರು ಸತ್ತ ದೇಹವನ್ನು ಅಗ್ನಿಸಂಸ್ಕಾರ ಮಾಡುತ್ತಾರೆ. ''ಜಾತವೇದನೆ (ಅಗ್ನಿದೇವ), ಈ ವ್ಯಕ್ತಿಯನ್ನು ಸುಟ್ಟಮೇಲೆ ಪಿತೃಲೋಕಕ್ಕೆ ಕಳುಹಿಸು'' ಎಂದು ಪ್ರಾರ್ಥಿಸುತ್ತಾರೆ. ಆತ್ಮನು ದೇಹನಾಶವಾದ ಮೇಲೆ ಪಿತೃಲೋಕ ಪ್ರವೇಶ ಮಾಡುತ್ತಾನೆ.

ವೈದಿಕ ಧರ್ಮದಲ್ಲಿ 'ಪಿತೃ' ಲೋಕವೆಂದರೆ ಮರಣ ಹೊಂದಿದ ಭೂಲೋಕದ ಹಿರಿಯರೆಲ್ಲ ತಮ್ಮ ತಮ್ಮ ಕರ್ಮಗಳನ್ನು ಕಳೆದುಕೊಂಡು ತಮ್ಮ ಮಕ್ಕಳು ಮಾಡುವ ಶ್ರಾದ್ಧಾದಿ ಕ್ರಿಯೆಗಳನ್ನು ಪಡೆದು ಆನಂದದಿಂದ ಇರುವ ಸ್ಥಳ, ಇದು ಸತ್ತ ಜೀವರುಗಳಿಗೆ ದೈವೀ ಸನ್ನಿಧಾನ.

ಪಿತೃಲೋಕದಲ್ಲಿರುವ ಜೀವರುಗಳ ಸಂತತಿ (ವಂಶ)ಯವರು ಭೂಲೋಕದಲ್ಲಿ ಅನೀತಿ ಮಾರ್ಗದಲ್ಲಿ ನಡೆದರೆ, ಅಥವಾ ಕುಲಧರ್ಮ ಸಂಪ್ರದಾಯಗಳನ್ನು ಮೀರಿದರೆ ಅವರಿಗೆ ನರಕ ಪ್ರಾಪ್ತಿಯಾಗುತ್ತದೆ. ಅಷ್ಟೇ ಅಲ್ಲ ; ಪಿತೃಗಳು ಪಿತೃಲೋಕದಿಂದ ಕೆಳಕ್ಕೆ ಬೀಳುತ್ತಾರೆ.

ಸಂಕರೋ ನರಕಾಯ್ವೆವ । ಕುಲಘ್ನಾನಾಂ ಕುಲಸ್ಯಚ ।<br>ಪತಂತಿ ಪಿತರೋಹ್ಯೇಷಾ । ಲುಪ್ತ ಪಿಂಡೋದಕಕ್ರಿಯಾಃ

ಇದಕ್ಕೆ ಭಿನ್ನವಾದ ವಿಚಾರವೂ ಇದೆ: ''ಮೃತರ ಜೀವಿಗಳ ಸಂಬಂಧ– ಪೂರ್ವ ಸಂಬಂಧಿಗಳೊಂದಿಗೂ ಇರುವುದಿಲ್ಲ. ಈಗ ಬದುಕಿರುವ ಸಂಬಂಧಿಗಳೊಂದಿಗೂ ಇಲ್ಲ, ಜೀವ ತನ್ನ ಕರ್ಮಾನುಸಾರವಾಗಿ ಜನ್ಮ ಹೊಂದುತ್ತಾನೆ.''

(ಸಂಸ್ಕಾರ ವಿಧಿ ಪುಟ ೩೫೭)

ಬ್ರಹ್ಮಾಂಡ ಪುರಾಣದ ೨೮ನೆಯ ಅಧ್ಯಾಯ ಈ ವಿಷಯಕ್ಕೆ ಮೀಸಲಾಗಿದೆ. ಅದು, ಪಿತೃಲೋಕದ ವಿಚಾರವನ್ನು ವಿಸ್ತಾರವಾಗಿ ವಿವರಿಸುತ್ತದೆ. ಮನುಷ್ಯರು ಮರಣಾನಂತರ, ಪಿತೃಲೋಕದಲ್ಲಿ ಪ್ರೇತತ್ವ ವನ್ನು ಕಳೆದುಕೊಂಡು ಪಿತೃತ್ವ ಪಡೆಯುತ್ತಾರೆ. ಅಲ್ಲಿ ಪಿತೃಗಳು ಪಿತೃದೇವಗಣ ದೊಂದಿಗೆ ಇರುತ್ತಾರೆ. ವರ್ಣಾಶ್ರಮ ಧರ್ಮ ಪರಿಪಾಲನೆಯಿಂದ ಪಿತೃಗಣ

ಸೇರುತ್ತಾರೆ. ಅಲ್ಲಿ ಬಂಧುಗಳು ಕೊಡುವ ತರ್ಪಣ ಸ್ವೀಕರಿಸುತ್ತಾರೆ. ಬಂಧುಗಳೆಂದರೆ ಭೂಲೋಕದಲ್ಲಿರುವ ಸಂಬಂಧಿಗಳು.

ಕಾಗೆಗೆ ನೀಡುವ ಪಿಂಡ (ಅನ್ನ)ಅಥವಾ ಭೂತಬಲಿ ಹಾಗೂ ಶ್ರಾದ್ಧದ ಹವಿಸ್ಸನ್ನು ಅವರು ಸ್ವೀಕರಿಸುತ್ತಾರೆ (ಪುನರ್ಜನ್ಮ ೨೧೨-೨೫೪) ಎನ್ನುವ ನಂಬಿಕೆ ಇದೆ. ಪಿತೃಗಳಾಗಿ-ಪಿತೃಲೋಕ ಸೇರಲು ಜೀವಿಗೆ ತಪಸ್ಸು, ದಾನ-ಧರ್ಮಾದಿ ಸತ್ಕಾರ್ಯಗಳು ಅವಶ್ಯಕ.

ವೈದಿಕರೂ 'ಸಾವಿ'ಗೆ ಅಂಜುವುದಿಲ್ಲ. ಸಾವಿನ ಬಗ್ಗೆ ಅವರಲ್ಲಿ ಉದಾತ್ತ ಕಲ್ಪನೆ ಇದೆ. ಅಹಂಕಾರ, ಮಮಕಾರಗಳನ್ನು ಮೀರಿ ಬ್ರಹ್ಮದ ಅದ್ವಯ ಸ್ಥಿತಿಯನ್ನು ಪಡೆಯುವುದು (ಅಸ್ಮಾತ್ ಲೇಕಾತ್ ಉಪರಮ್ಯ ಸರ್ವಾತ್ಮೈಕ್ಯಭಾವಂ ಅದ್ವೈತಂ)

ಕಠೋಪನಿಷತ್ತಿನ ಒಂದು ಮಂತ್ರದ ಅರ್ಥ ಹೀಗಿದೆ : ''ಪ್ರತಿಯೊಬ್ಬರಲ್ಲೂ ಮೃತ್ಯು-ಅಮೃತ್ಯು ಎರಡೂ ಇವೆ. ಜಗತ್ತಿನ ಮೋಹಗಳೇ ಮೃತ್ಯು, ಮೋಹರಹಿತವಾದುದೇ ಅಮೃತ್ಯು ಎನ್ನುವ ತಾತ್ವಿಕ ಕಲ್ಪನೆ ಇದೆ. ಆತ್ಮ ಅವಿನಾಶಿ ನಿತ್ಯ ಎನ್ನುವ ಕಲ್ಪನೆ ವೈದಿಕರಲ್ಲಿದೆ. ನೈನಂ ಛಿಂದಂತಿ ಶಸ್ತ್ರಾಣಿ, ನೈನಂ ದಹತಿ ಪಾವಕಃ। ಎಂದರೆ ಆತ್ಮವನ್ನು ಶಸ್ತ್ರಗಳು ಕತ್ತರಿಸಲಾರವು. ಅಗ್ನಿ ಸುಡಲಾರದು (ಗೀತೆ). ಸಾವಿಗೆ ಶೋಕಿಸಬಾರದು, ಅಂತ್ಯಕಾಲದಲ್ಲಿ ಮಂಗಳವನ್ನೇ ಚಿಂತಿಸಬೇಕು ಎನ್ನುವ ನಂಬಿಕೆ ಇದೆ. (ಯಂ ಯಂ ವಾಪಿ ಸ್ಮರನ್ ಭಾವಂ ತ್ಯಾಜತ್ಯಾಂತೇ ಕಳೇಬರಂ) ಹುಟ್ಟಿದವನು ಸಾಯಲೇಬೇಕು, ಸತ್ತವನಿಗೂ ಜನ್ಮ ನಿಶ್ಚಯ. (ಪುನರಪಿ ಜನನಂ ಪುನರಪಿ ಮರಣಂ) (ಜಾತಸ್ಯಹಿ ಧೃವೋ ಮೃತ್ಯುಃ; ಧೃವಂಜನ್ಮ ಮೃತಸ್ಯಚ) ವೈದಿಕ ಧರ್ಮದಲ್ಲಿ ಸಾವು ಎಂದರೆ ಅದೊಂದು ತೊಟ್ಟ ಬಟ್ಟೆಯನ್ನು ಬದಲಾಯಿಸುವ ಕ್ರಿಯೆಯಂತೆ ಎನ್ನುವ ಕಲ್ಪನೆ ಇದೆ. (ವಾಸಾಂಸಿ ಜೀರ್ಣಾನಿ ಯಥಾ ವಿಹಾಯ-ಗೀತೆ) ವೈದಿಕರು ಪುನರ್ಜನ್ಮ ಇದೆ ಎಂದು ನಂಬುತ್ತಾರೆ ಅಲ್ಲದೆ, ಪುನರ್ಜನ್ಮವನ್ನು ಬೇಡುತ್ತಾರೆ. ('ಪುನರ್ನೋ ಅಸುಂ ಪೃಥಿವೀದ ಧಾತುಂ'-ಋಗ್ವೇದ). ಭೂಮಿ ನಮಗೆ ಪುನಃ ಪ್ರಾಣವನ್ನೇ ನೀಡಲಿ ಎಂದು.

**ಪ್ರೇತದ ಕಲ್ಪನೆ :**

ವೈದಿಕ ಧರ್ಮದಲ್ಲಿ ಸಾವಿನ ನಂತರದ ಜೀವಾತ್ಮನ ಸ್ಥಿತಿಗೆ–'ಪ್ರೇತ' ಎನ್ನುತ್ತಾರೆ. ಜೀವನು ಪುನಃ ಮತ್ತೊಂದು ದೇಹ ಪಡೆಯುವವರೆಗೆ ಪ್ರೇತಾತ್ಮ ಸ್ಥಿತಿಯಲ್ಲೇ ಇರುತ್ತಾನೆ ಎನ್ನುವ ನಂಬಿಕೆ ಇದೆ. (ನಾಲ್ಕು ವೇದಗಳು : ೨೪೪)

ಹಾಗಾದರೆ ಪ್ರೇತನಾಗಿ ಎಲ್ಲಿಯವರೆಗೆ ಇರಬೇಕು ? ಎನ್ನುವ ಪ್ರಶ್ನೆಗೆ ಅವರು ಹೇಳುತ್ತಾರೆ : "ವಾಸನಾಕ್ಷಯವಾಗುವವರೆಗೂ ಜೀವಾತ್ಮ ಸೂಕ್ಷ್ಮ ಶರೀರವನ್ನು ಹೊಂದಿ ಪ್ರೇತಾವಸ್ಥೆಯಲ್ಲೇ ಇರಬೇಕಾಗುತ್ತದೆ (ಅದೇ ಪು. ೨೩೦). ವೈದಿಕರಲ್ಲಿ ಸ್ವರ್ಗ–ನರಕಗಳ ಕಲ್ಪನೆ ಇದೆ. ಯಮಲೋಕದಲ್ಲಿ ೮೪ ಲಕ್ಷ ನರಕಗಳಿವೆ ಎನ್ನುವ ನಂಬಿಕೆ ಇದೆ. ಇವುಗಳಲ್ಲಿ ೨೧ ನರಕಗಳು ಬಹಳ ಮುಖ್ಯವೆಂದು ಹೇಳುತ್ತಾರೆ. ಶಾಸ್ತ್ರದಲ್ಲಿ ಮರಣದ ನಂತರ ಜೀವಾತ್ಮರಿಗೆ ಬೇರೆ–ಬೇರೆ ಮುಕ್ತಿಗಳಿವೆ ಎಂದು ಹೇಳುತ್ತಾರೆ. ದೇವರಿರುವ ಲೋಕದಲ್ಲಿ ಸಾಲೋಕ್ಯ ಮುಕ್ತಿ, ದೇವರ ಸಮೀಪದಲ್ಲಿ ಸಾಮೀಪ್ಯ ಮುಕ್ತಿ, ದೇವರ ರೂಪವನ್ನು ಹೊಂದುವ ಸಾರೂಪ್ಯ ಮುಕ್ತಿ, ಬ್ರಹ್ಮನಲ್ಲಿ ಐಕ್ಯವಾಗುವುದು, ಸಾಯುಜ್ಯ ಮುಕ್ತಿ, ಹೀಗೆ ಹಲವು ಹಂತಗಳಿವೆ. ಸತ್ತ ಜೀವ ಸ್ವರ್ಗ ಲೋಕದಲ್ಲಿ ಪುಣ್ಯತೀರಿದ ಬಳಿಕ ಭೂಲೋಕಕ್ಕೆ ಮತ್ತೆ ಹಿಂತಿರುಗಿ ಬರುತ್ತದೆ ಎನ್ನುವ ಕಲ್ಪನೆ ಇದೆ. ಪಾಪ ಮಾಡಿದವರು ನರಕ ಯಾತನೆಯ ನಂತರ ಪ್ರಾಣಿಜನ್ಮ ಪಡೆಯುತ್ತಾರೆ. ಪುಣ್ಯ ಮಾಡಿದವರು ಪಿತೃಲೋಕದಲ್ಲಿ ಸುಖ ಅನುಭವಿಸಿ ಭೂಲೋಕಕ್ಕೆ ಬರುತ್ತಾರೆ. ವೈದಿಕರ ಅಂತ್ಯಕ್ರಿಯೆಯನ್ನು ಸರಿಯಾಗಿ ಮಾಡದಿದ್ದರೆ ಅವರು ಪ್ರೇತರಾಗಿಯೇ ಉಳಿಯುತ್ತಾರೆ. (ಪುನರ್ಜನ್ಮ ಪುಟ ೨೩೪) ಹೀಗೆ ಈ ವಿಚಾರದಲ್ಲಿ ಇನ್ನೂ ಅನೇಕ ನಂಬಿಕೆಗಳಿವೆ.

ನಮ್ಮ ಸುಖ ದುಃಖಗಳಿಗೆ ಕರ್ಮಫಲವೇ ಕಾರಣವೆಂದು ಹೇಳುತ್ತಾರೆ. ಹಾಗೂ ನಂಬುತ್ತಾರೆ. ಮನುಷ್ಯ ಸಹಜ ಸಾವಿನಿಂದ ಸಾಯುವುದು ಉತ್ತಮ. ದುರ್ಮರಣದಿಂದ ಸಾಯುವುದು ಕನಿಷ್ಠ ಮತ್ತು ಆತ್ಮಹತ್ಯೆಯ ಸಾವು ಪಿಶಾಚತ್ವವನ್ನುಂಟು ಮಾಡುತ್ತದೆ ಎನ್ನುವ ಮಾತು ಮಹಾಭಾರತದ ಅನುಶಾಸನಪರ್ವದಲ್ಲಿ ವ್ಯಕ್ತವಾಗಿದೆ.

ಭಗವದ್ಗೀತೆಯಲ್ಲಿ–ಯಾರು ನನ್ನ ದಿವ್ಯವಾದ ಅವತಾರವನ್ನು ಹಾಗೂ ಕರ್ಮವನ್ನು ಯಥಾರ್ಥವಾಗಿ ತಿಳಿಯುತ್ತಾರೋ ಅವರು ಮಾತ್ರ ದೇಹತ್ಯಾಗ ಮಾಡಿದ ಮೇಲೆ ಪುನರ್ಜನ್ಮ ಹೊಂದುವುದಿಲ್ಲ, ನನ್ನನ್ನೇ ಹೊಂದುತ್ತಾರೆನ್ನುವ ವಿವೇಕದ ಮಾತೂ ಇದೆ–ಜನ್ಮ ಕರ್ಮಚಮೇದಿಮಮೇವಂಯೋವೇತ್ತಿ ತತ್ವತಃ। ತ್ಯಕ್ತ್ವಾ ದೇಹಂ ಪುರ್ನಜನ್ಮ ನಮಾಮೇತಿ ಸೋರ್ಜನ್ ॥

ಬೌದ್ಧ ಧರ್ಮದಲ್ಲಿ ಸಾವಿನ ಪರಿಕಲ್ಪನೆ :

ಬುದ್ಧ, ಲೋಕದ ಕಷ್ಟಜೀವಿಗಳಿಗೆ ಸಾಂತ್ವನ ನೀಡಲು, ಅವರಿಗೆ ಸಮ್ಯಕ್ ಜ್ಞಾನ ನೀಡಲು ಪ್ರಯತ್ನಿಸಿದ. ಅದಕ್ಕಾಗಿಯೇ, ಜಗವೆಲ್ಲ ಮಲಗಿದಾಗ ಅವನೊಬ್ಬನೆ ಎದ್ದು ರಾಜ್ಯ–ಕೋಶ–ಸತಿ–ಸುತರನ್ನು ತೊರೆದು ಕಾಡಿಗೆ ಹೋಗಿ ಸಂನ್ಯಾಸಿಯಾದ. ಲೋಕದ ಜನರಿಗೆ ಕಷ್ಟಪರಿಹಾರದ ಮಾರ್ಗವನ್ನು ಕಂಡುಹಿಡಿದ. ದೇವರು–ಆತ್ಮ–ಜನನ–ಮರಣಗಳ ವಿಚಾರವಾಗಿ ತಲೆಕೆಡಿಸಿಕೊಳ್ಳಲಿಲ್ಲ. ಆತ ಹೇಳುತ್ತಾನೆ "ಒಬ್ಬ ವ್ಯಕ್ತಿಗೆ ಒಂದು ಬಾಣ ನೆಟ್ಟಿದೆ ಎಂದು ತಿಳಿದರೆ, ನೆಟ್ಟ ಬಾಣವನ್ನು ಕಿತ್ತು ಸೂಕ್ತ ಚಿಕಿತ್ಸೆ ಮಾಡಬೇಕಲ್ಲದೆ, ಈ ಬಾಣ ಬಿಟ್ಟವನು ಯಾರು ? ಯಾವ ಕುಲದವನು ? ಬಿಲ್ಲಿಗೆ ಯಾವ ದಾರ ಕಟ್ಟಿತ್ತು? ಸಮೀಪದಿಂದ ಬಾಣ ಬಿಟ್ಟನೋ ; ದೂರದಿಂದ ಬಾಣ ಬಿಟ್ಟನೋ ಎಂದು ಕೇಳಿ ಉತ್ತರ ಪಡೆಯುವಷ್ಟರಲ್ಲಿ ರೋಗಿಯ ಸ್ಥಿತಿ ಏನು ? ಅವನು ಸಾಯುವುದೇ ಖಚಿತ. ಹಾಗೆಯೇ ದೇವರು ಆತ್ಮಗಳ ಬಗೆಗೆ ತಲೆ ಕೆಡಿಸಿಕೊಳ್ಳುವ ವಿಚಾರವಾಗಿದೆ.

ಮರಣ, ಮರಣದ ನಂತರ ಜೀವನ, ಸ್ವರ್ಗ–ನರಕ, ಇವುಗಳ ಬಗ್ಗೆ–ಬುದ್ಧನಲ್ಲಿ ವಿವರವಾದ ವಿಚಾರಗಳು ದೊರಕಲಾರವು. ಆಯುಷ್ಯ, ರೋಗ, ಮೃತ್ಯು, ಸಮಯ, ಶರೀರ ಪತನದ ಸ್ಥಾನ ಮತ್ತು ಸತ್ತನಂತರ ಯಾವ ಗತಿ ? ಈ ಐದು ವಿಚಾರಗಳು ಗೊತ್ತಾಗುವುದಿಲ್ಲ ಎನ್ನುವ ವಿಚಾರವಿದೆ. ಸುಳ್ಳು–ಚಾಡಿ ಇತ್ಯಾದಿ ಕೆಟ್ಟ ಗುಣಗಳನ್ನು ಬಿಡಬೇಕು. ಅಂತಹ ಗುಣ ಬೆಳೆಸಿಕೊಂಡಲ್ಲಿ ಸಾವಿನ ನಂತರ ದುರ್ಗತಿ ಉಂಟಾಗುತ್ತದೆ ಎನ್ನುವ ಸೂಚನೆ ಇದೆ. ಕರ್ಮದ ಫಲದಿಂದ ಜೀವಿಗಳು ಮರುಹುಟ್ಟು ಪಡೆಯುತ್ತವೆ ಎಂದು ಬುದ್ಧನ ವಿಚಾರವಿದೆ. ಆದರೆ ಇಲ್ಲಿ ಬುದ್ಧ ಹೇಳುವ ಕರ್ಮ ದೇವರಿಂದ ನಿಯಂತ್ರಿತವಾದುದಲ್ಲ.

ಮರಣದ ನಂತರ ಜೀವ ಎಲ್ಲಿಗೆ ಹೋಗುತ್ತದೆ ? ಮರುಹುಟ್ಟು ಇದೆಯೇ ? ಇದಕ್ಕೆ ಬುದ್ಧನ ಉತ್ತರ ಸಿದ್ಧವಾಗಿದೆ–ಅವನು ಹೇಳುತ್ತಾನೆ: ''ಖಚಿತವಾಗಿ ಹೇಳಲು ಸಾಧ್ಯವಿಲ್ಲ, ತಥಾಗತರಿಗೆ ಮರುಜನ್ಮವಿಲ್ಲ, ಅವರ ಭೌತಿಕ ದೇಹ ಅಳಿಯುತ್ತದೆ. ಆದರೆ ಜೀವ ಎಲ್ಲಿಗೆ ಹೋಗುತ್ತದೆ ಎಂದು ಹೇಳಲು ಸಾಧ್ಯವಿಲ್ಲ ಎಂದು ಪ್ರಾಮಾಣಿಕವಾಗಿ ಹೇಳುತ್ತಾನೆ ಹಾಗೂ ಒಂದು ಉದಾಹರಣೆಯ ಮೂಲಕ ಇದನ್ನು ಸ್ಪಷ್ಟಪಡಿಸುತ್ತಾನೆ.

''ನಿಮ್ಮೆದುರು ಬೆಂಕಿ ಉರಿಯುತ್ತಿದೆ ಎಂದು ತಿಳಿಯಿರಿ. ಅದು ಹುಲ್ಲು ಅಥವಾ ಕಟ್ಟಿಗೆ ಅವಲಂಬಿಸಿ ಉರಿಯುತ್ತದೆ. ಇವು ಮುಗಿದು ಹೋದಾಗ ಅದು ಆರಿಹೋಗುತ್ತದೆ''(ಮಜ್ಜಮ ನಿಕಾಯ ಪು. ೫೮೩)

ಆಯುಷ್ಯದ ಚ್ಯುತಿ, ದೇಹತ್ಯಾಗ, ಪಂಚಸ್ಕಂದಗಳಿಂದ (ಪಂಚಭೂತ) ಬೇರ್ಪಡೆ ಇದೇ 'ಮರಣ' ಎನ್ನುವ ಕಲ್ಪನೆ ಇದೆ. (ಮಜ್ಜಮ ನಿಕಾಯ ಪು. ೨೦೧)

''ಮುಪ್ಪು ಸಾವುಗಳ ಬಂಧನದಿಂದ ಬಿಡುಗಡೆ ಹೊಂದಲು ಅಷ್ಟಾಂಗ ಮಾರ್ಗ ಸಾಧನೆ ಮಾಡಬೇಕು. ಯಾವನು ಅಶುಭ ಕರ್ಮಗಳಿಂದ ದೂರವಾಗಿರುತ್ತಾನೋ ಅವನೇ ಬ್ರಾಹ್ಮಣ,ಜ್ಞಾನಿ, ಶ್ರಮಣ, ಅರ್ಹಂತ, ಈ ಸಿದ್ಧಿಯನ್ನು ಪಡೆದವರಿಗೆ ಜನನ–ಮರಣಗಳ ವಿಚಾರ ತಿಳಿಯುತ್ತದೆ. ಅಜ್ಞಾನವನ್ನು ಅಳಿಸಿಹಾಕಿ, ತೃಷ್ಣೆಯನ್ನು ವಿರೋಧಿಸಿ, ಜನನ ಮರಣ ಗೆಲ್ಲುವ ಸಿದ್ಧಿಯನ್ನು ಸಾಧಿಸಬೇಕೆಂದು ಬೌದ್ಧಧರ್ಮ ತಿಳಿಸುತ್ತದೆ.

'ಸಾವು' ಅನಿವಾರ್ಯವೆಂದು ಬುದ್ಧ ಹೇಳುತ್ತಾನೆ. ಇದು ನಿಸರ್ಗ ಸಹಜಕ್ರಿಯೆ ಎಂದು ಬೌದ್ಧಧರ್ಮ ಹೇಳುತ್ತದೆ. ಕಿಸಾಗೌತಮಿಯ ಪ್ರಸಂಗದಿಂದ ಬುದ್ಧದೇವ ಇದನ್ನು ಸಾರುತ್ತಾನೆ.

ನಿಸರ್ಗ ಸಹಜವಾದ ಸಾವು, ದೇಹವನ್ನು ನಾಶಗೊಳಿಸಿದರೂ, ಸದೇಹ ಸಿದ್ಧಿಯ ಫಲವಾಗಿ, ಚಿರಸ್ಥಾಯಿಯಾಗಿ ಉಳಿಯಬಹುದು ಎಂದು ಬುದ್ಧ ತನ್ನ ಸಾಧನೆಯಿಂದ ಲೋಕಕ್ಕೆ ಮನವರಿಕೆ ಮಾಡಿಕೊಟ್ಟಿದ್ದಾನೆ.

೩. ಜೈನ ಧರ್ಮದಲ್ಲಿ ಸಾವಿನ ಪರಿಕಲ್ಪನೆ :

'ಮರಣಂ ಪ್ರಕೃತಿಃ ಶರೀರಿಣಾಂ' ಎಂದು ಜೈನಧರ್ಮ ಪರಿಭಾವಿಸುತ್ತದೆ. 'ದೇಹ ಅಮರವಲ್ಲ', 'ವೀತರಾಗ'ನಾದವನು ಮರಣವನ್ನು

ಗೆಲ್ಲುತ್ತಾನೆ. ಎನ್ನುವ ಕಲ್ಪನೆ ಇದೆ. ಹಸಿವು, ದಾಹ, ಮುಪ್ಪು, ಮರಣ, ಭಯ, ರಾಗ, ದ್ವೇಷಗಳನ್ನು ಗೆದ್ದವನೇ 'ವೀತರಾಗ'. ಜೈನಮತೀಯರು ಸಾಧನೆಯಿಂದ ಸಾವನ್ನು ಧೈರ್ಯದಿಂದ ಎದುರಿಸುತ್ತಾರೆ. ಸಾವಿನ ಬಗೆಗೆ ಅವರಿಗೂ ಭಯವಿಲ್ಲ, 'ಸಾವು' ಬದುಕಿಗೆ ನೀಡುವ ಹಿಂಸೆಯಲ್ಲ ; ಸಾವಿನಿಂದ ತಪ್ಪಿಸಿಕೊಂಡು ಬದುಕುವುದೇ ಅಹಿಂಸೆಯಲ್ಲ, ಹಾಗೆ ಬದುಕುವುದು ಸಾಧ್ಯವಿಲ್ಲ. ಕರ್ಮವಶದಿಂದ ಜನನ–ಮರಣಗಳು ಉಂಟಾಗುತ್ತವೆ. ಸಾವು ಮತ್ತು ದುಃಖ ಇವು ಕರ್ಮೋದಯವೆಂದು ಕುಂದ ಕುಂದಾಚಾರ್ಯರ ನಿರ್ಣಯವಾಗಿದೆ. "ಜೋಮರಣ ಜೋಯದುಹಿದೋ ಜಾಯದಿ ಕರ್ಮೋದಯೇಣ ಸೋ ಸವ್ವೋ" (ಸಮಯ ಸಾರ).

ಜೈನಧರ್ಮದಲ್ಲಿ ಸಾವನ್ನು ಪರ್ವಕಾಲವೆಂದು ಭಾವಿಸುತ್ತಾರೆ. ಮುಂದಿನ ಜನ್ಮದಲ್ಲಿ ಹೆಚ್ಚಿನ ಜ್ಞಾನ ಪಡೆಯಲು ಅನುಕೂಲವಾಗುತ್ತದೆ ಎಂದು ನಂಬುತ್ತಾರೆ. ಸಲ್ಲೇಖನ, ಸಮಾಧಿ ಮರಣ, ಈ ವಿಧಾನಗಳ ಮೂಲಕ, ಜೈನ ಶ್ರಾವಕರು ಮರಣವನ್ನು ಸ್ವಾಗತಿಸುತ್ತಾರೆ. ಅವರಲ್ಲಿ ಸನ್ಯಾಸಿಗಳು 'ಇಚ್ಛಾಮರಣಿ'ಗಳೂ ಹೌದು.

ಈ ಧರ್ಮದ ನಂಬಿಕೆಯಂತೆ ಮರಣದಲ್ಲಿ ಹಲವಾರು ಪ್ರಭೇದಗಳಿವೆ. ಇವು ವ್ಯಕ್ತಿಯ ಸಾಧನೆ, ಅರ್ಹತೆ ಹಾಗೂ ಸಂದರ್ಭಗಳನ್ನು ಅವಲಂಬಿಸಿ ಹೇಳಿದವುಗಳಾಗಿವೆ. ಮರಣಕ್ಕೆ ಮೃತ್ಯು–ಅಂತಕ–ಯಮ ಎಂಬ ಹೆಸರುಗಳಿವೆ. ಆದರೆ 'ಯಮ'ನೆಂಬ ವ್ಯಕ್ತಿ ಅವನ ಲೋಕ ಇತ್ಯಾದಿಗಳನ್ನು ಅವರು ನಂಬುವುದಿಲ್ಲ. ಆಯುಷ್ಯ ತೀರಿದಾಗ ಉಂಟಾಗುವ ಜೀವಾತ್ಮನ ಅವಸ್ಥಾ–ವಿಶೇಷವೇ ಈ ಮರಣ ಎಂಬುದು ಜೈನರ ತಿಳುವಳಿಕೆ. 'ಆತ್ಮ'ವನ್ನು ಕುರಿತು ಜೈನಧರ್ಮದ ವಿಚಾರ ಹೀಗಿದೆ :

'ಆತ್ಮ' ಅಖಂಡ ಪದಾರ್ಥ, ಅದು 'ಅಮರ'. ಪುದ್ಗಲ ಸಂಯೋಗದಿಂದ ಜನನ ಮರಣಕ್ಕೆ ಕಾರಣವಾಗುತ್ತದೆ. ಪುದ್ಗಲ (ಸಂಸಾರ)ದಿಂದ ಮುಕ್ತವಾದಾಗ ಅದು ಪರಮಾತ್ಮಪದವನ್ನು ಪಡೆಯಲು ಸಮರ್ಥವಾಗುತ್ತದೆ. (ಜೈನಧರ್ಮ ಪುಟ ೬)

ಕರ್ಮ ಸಿದ್ಧಾಂತ :

ಜೈನ ಧರ್ಮದಲ್ಲಿ ಕರ್ಮವು ಆತ್ಮಕ್ಕೆ ಬಂಧಪಡುತ್ತದೆ. ಕರ್ಮದಿಂದ ಉಂಟಾಗುವ ಕಷ್ಟವನ್ನು 'ಆತ್ಮ' ಅನುಭವಿಸಬೇಕು ಎಂಬುದು ಅವರ ನಂಬಿಕೆ. ಕರ್ಮದಿಂದ ಉಂಟಾಗುವ ಸುಖ ದುಃಖಗಳನ್ನು ಆತ್ಮ ಭೋಗಿಸ ಬೇಕಾಗುತ್ತದೆ.

ಮೋಕ್ಷದ ಕಲ್ಪನೆ :

ಆತ್ಮವನ್ನು ಆತ್ಮದ ಶುದ್ಧ ರೂಪದಲ್ಲಿ ಒಯ್ದು ನಿಲ್ಲಿಸುವುದೇ ಮುಕ್ತಿ ಮತ್ತು ಸಂಪೂರ್ಣ ಕರ್ಮದ ನಾಶವೇ ಮುಕ್ತಿ ಎನ್ನುವ ಕಲ್ಪನೆ ಜೈನ ಧರ್ಮ ದಲ್ಲಿದೆ. ಜೈನರು ಹಲವಾರು ಲೋಕಗಳನ್ನು ನಂಬುತ್ತಾರೆ. ಸ್ವರ್ಗ–ನರಕಗಳ ಕಲ್ಪನೆಯಂತೂ ಗಟ್ಟಿಯಾಗಿದೆ. ಜೈನರ ಅತಿ ಎತ್ತರದ ಉತ್ತುಂಗ ಸ್ಥಳ ಸರ್ವಾರ್ಥ ಸಿದ್ಧಿಯತಾಣ ಸಿದ್ಧಪರವೇಷ್ಟಿಗಳ ನೆಲೆ. ಸಿದ್ಧಶಿಲೆ ಇದೇ ಮುಕ್ತಿಸ್ಥಾನ ಎಂದು ಅವರ ನಂಬಿಕೆ. ಜೈನರು ಆತ್ಮಹತ್ಯೆಯನ್ನು ಮನ್ನಿಸು ವುದಿಲ್ಲ, ಆದರಿಂದ ಪುನರ್ಜನ್ಮದಲ್ಲಿ ದುಃಖವುಂಟಾಗುತ್ತದೆ ಎಂದು ಭಾವಿಸು ತ್ತಾರೆ. ಅವರು ಮರಣವನ್ನು ಜೀವನಾಂತ್ಯವೆಂದು ಭಾವಿಸುವುದಿಲ್ಲ, ಅದು, ಮತ್ತೊಂದು ಜೀವನದ ಆರಂಭವೆಂದು ತಿಳಿಯುತ್ತಾರೆ. ಜನನ–ಮರಣ ಗಳಿಂದ ಬಿಡುಗಡೆ ಹೊಂದಿ ಅರ್ಹಂತ ಪದವಿಗೇರಿ, ಸಿದ್ಧ ಶಿಲೆಯ ಮೇಲೇರಿ ನಿಲ್ಲುವುದೇ ಜೀವನದ ಪರಮಗುರಿ ಎಂಬುದು ಜೈನಧರ್ಮದ ಸಂದೇಶ.

೪. ಕ್ರೈಸ್ತ ಧರ್ಮದಲ್ಲಿ ಸಾವಿನ ಪರಿಕಲ್ಪನೆ :

ಕ್ರೈಸ್ತ ಧರ್ಮ ಪ್ರೇಮಧರ್ಮ. ಇಲ್ಲಿ ಜೀವ ಸ್ವರ್ಗದಿಂದ ಇಳಿದು ಬಂದು ಇಲ್ಲಿಯ ಬದುಕನ್ನು ನಿರ್ವಹಿಸಿ ಮತ್ತೆ ಸ್ವರ್ಗಕ್ಕೆ ಹೋಗಬೇಕು. ಮಾಡಿದ ಪಾಪಕ್ಕೆ ಪಶ್ಚಾತ್ತಾಪ ಪಡಬೇಕು, ಪರಿವರ್ತನವಾಗಬೇಕು. ಅದೇ ಪುನರ್ಜನ್ಮ ಎನ್ನುವ ಕಲ್ಪನೆ ಕ್ರೈಸ್ತರಲ್ಲಿದೆ. ಸಾವಿನ ಮೂಲಕ 'ಅಗಲಿದ' ಮಾನವ ದೀರ್ಘಕಾಲ ನಿದ್ರೆಯಲ್ಲಿರುತ್ತಾನೆ. ನ್ಯಾಯನಿರ್ಣಯ ನಡೆಯು ತ್ತದೆ. ಅವನು (ಜೀವನು) ಭೂಮಿಯಲ್ಲಿ ಮಾಡಿದ ಕಾರ್ಯಗಳಿಗೆ ದೇವರು ತಕ್ಕ ಫಲವನ್ನು ಅಥವಾ ಶಿಕ್ಷೆಯನ್ನು ನೀಡುತ್ತಾನೆ ಎಂದು ನಂಬುತ್ತಾರೆ.

ಶಿಲುಬೆಗೇರಿದ ಕ್ರಿಸ್ತನ ಸಮಾಧಿ ಮಾಡಲಾಯಿತು. ಮೂರು ದಿನಗಳ ಬಳಿಕ ಅವನ ಸಮಾಧಿ ಅಗೆದು ನೋಡಿದಾಗ ಅಲ್ಲಿ ಏಸುವಿನ ಕಳೇಬರವಿರಲಿಲ್ಲ. ಅವನು ಮರಣವನ್ನು ಜಯಿಸಿ, ಸಮಾಧಿಯಿಂದ ಎದ್ದು ಬಂದು ತನ್ನ ಶಿಷ್ಯರಿಗೆ ಕಾಣಿಸಿಕೊಳ್ಳುತ್ತಾನಂತೆ. ಅನಂತರ ನಲವತ್ತು ದಿನಗಳ ನಂತರ ದೇವರ ಬಳಿಗೆ, ಪರಲೋಕಕ್ಕೆ ಹೋದ ಎನ್ನುವ ಐತಿಹ್ಯವಿದೆ. ಕ್ರೈಸ್ತರು ಇದನ್ನು ನಂಬುತ್ತಾರೆ.

ಕ್ರೈಸ್ತರ ಪ್ರಕಾರ ಮಣ್ಣಿನಿಂದ ಹುಟ್ಟಿದ ಮನುಷ್ಯ ಸಾವು ಬಂದಾಗ ಮಣ್ಣಿನಲ್ಲಿ ಕೂಡಿ ಮಣ್ಣಾಗಿ ಹೋಗುತ್ತಾನೆ ಎನ್ನುವ ಕಲ್ಪನೆ ಇದೆ. ಇವರು ಸಾವಿಗೆ ಅಂಜವುದಿಲ್ಲ, ಸಾವು ಬಂದಾಗ ಸ್ವೀಕರಿಸಬೇಕು. ಜನನ ದಿನಕ್ಕಿಂತ ಮರಣದ ದಿನವೇ ಮೇಲು, ಔತಣದ ಮನೆಗಿಂತ ಮರಣದ ಮನೆಗೆ ಹೋಗುವುದೇ ಮೇಲೆಂದು ಭಾವಿಸುತ್ತಾರೆ.

ಮನುಷ್ಯ ನಾಶವಾಗುವುದಿಲ್ಲ, ಅವನಲ್ಲಿರುವ ಮಜ್ಜಮಾಂಸಗಳು ಸಾವಿನಿಂದ ನಾಶವಾಗುತ್ತವೆ. ಅವನು ಮಣ್ಣಿನ ಅಂಶ, ಸಾವಿನ ನಂತರದಲ್ಲಿ ಮಣ್ಣಿನಲ್ಲಿ ಕೂಡುತ್ತಾನೆ.

All flesh shall perish together and man shall then again into dust (Biblie page-6)

ಆತ್ಮ ಇದೆಯೇ ? ಅದು ಮಣ್ಣಾಗುತ್ತದೆಯೇ ? ಎನ್ನುವ ಪ್ರಶ್ನೆಗೆ ಕ್ರೈಸ್ತ ಧರ್ಮದಲ್ಲಿ ಉತ್ತರ ಸಿಗುತ್ತದೆ. "The spirit shall return unto god who gave it" ಆತ್ಮ ದೇವರಲ್ಲಿಗೆ ಹೋಗುತ್ತದೆ. ಯಾರಿಂದ ಇದು ಬಂದಿದೆಯೋ ಅಲ್ಲಿಗೆ ಎನ್ನುವ ಕಲ್ಪನೆ (ಬೈಬಲ್ ಪುಟ ೬)

ಕ್ರೈಸ್ತ ಮತದ ಪ್ರಕಾರ ನರಕ ಅತ್ಯಂತ ಭಯಾನಕ. ತಪ್ಪು ಮಾಡಿದವರಿಗೆ ನರಕದ ಶಿಕ್ಷೆ ಕಾದಿದೆ ಎಂಬ ನಂಬಿಕೆ ಇದೆ.

ಸಾವನ್ನು ಕುರಿತು ಬೈಬಲ್ಲಿನಲ್ಲಿ ಹೀಗಿದೆ : "We must needs die; and are as water spilt on the ground which cannot be gathered up again (page-36)".

ಸಾವು ಅನಿವಾರ್ಯ, ಅದು ಭೂಮಿಯ ಮೇಲೆ ಚೆಲ್ಲಿದ ನೀರಿನಂತೆ, ಮತ್ತೆ ಅದು ಒಂದಾಗುವುದಿಲ್ಲ. ಸಾವು ಅತ್ಯಂತ ನಿಗೂಢವಾದ ಕ್ರಿಯೆ, ಅದು ಅಪ್ಪಳಿಸುವ ಶಬ್ದ ಯಾರ ಕಿವಿಗೂ ಕೇಳಿಸಲಾರದು.

"ನಮ್ಮ ಕೊನೆಯ ವಾಸದ ಮನೆ ಎಂದರೆ ಕತ್ತಲೆಯಿಂದ ಕೂಡಿದ ಮಣ್ಣಿನ ಕುಣಿ."

ಕ್ರೈಸ್ತ ಧರ್ಮದಲ್ಲಿ ನಿರಾಶೆಗೆ ಅವಕಾಶವಿಲ್ಲ. ಇರುವವರೆಗೂ ಉಂಡು–ತಿಂದು ಸುಖವಾಗಿರಬೇಕೆಂಬ ಕಲ್ಪನೆ ಇದೆ.

Let us eat and drink, for tomorrow we shall die (Bible, page-127)

ಒಳ್ಳೆಯ ಕರ್ಮಗಳನ್ನು ಮಾಡಿ ಸತ್ತವನು, ದೇವರಿಂದ ಸತ್ಫಲ ಪಡೆಯುತ್ತಾನೆ. ಅವನ ಸತ್ಕರ್ಮಗಳು ಅವನೊಂದಿಗೆ ಹೋಗಿ ಸಾಕ್ಷಿ ಹೇಳುತ್ತವೆ ಎನ್ನುವ ನಂಬಿಕೆ ಇದೆ. ಕ್ರೈಸ್ತರು ಜನನ–ಮರಣಗಳ 'ಭವ' ಚಕ್ರವನ್ನು ನಂಬುತ್ತಾರೆ. ಸಾವಿನಿಂದ ಬದುಕಿಗೆ, ಬದುಕಿನಿಂದ ಸಾವಿಗೆ ಇದೇ ಆ ಚಕ್ರ.

ಗೌರವದಿಂದ ಬದುಕಿ ಸಾಯುವುದು ದೈವೀಕೃಪೆ ಎಂದು ಭಾವಿಸುತ್ತಾರೆ. (By the grace of god should taste death for every man (page 212)

ಸಾವೆಂಬ ಕತ್ತಲೆಯ ದಾರಿಯ ಮೂಲಕ ಹಾದು ಹೋಗುವುದು ಬೆಳಕಿನ ಪ್ರದೇಶಕ್ಕೆ, ದೇವರ ಸನ್ನಿಧಿಗೆ. ದೇವರ ಸಾನ್ನಿಧ್ಯ ಪ್ರಾಪ್ತವಾದಲ್ಲಿ ಕೆಡುಕಿಲ್ಲ; ದುಖವಿಲ್ಲ; ಭಯವಿಲ್ಲ; ಭವವಿಲ್ಲ; ಎಲ್ಲವೂ ಕ್ಷೇಮ (ಬೈಬಲ್ ಪು. ೨೨೦)

ದೇವರು ದುಃಖ–ದುಮ್ಮಾನಗಳನ್ನು ದೂರಮಾಡಿ ಸಾವನ್ನು ನಿವಾರಿಸುತ್ತಾನೆ ಎನ್ನುವ ನಂಬಿಕೆ ಇದೆ.

"God shall wipe away all terars from their eyes; and there shall be no more death neither sorrow, no crying any more pain" (Page 168)

೫. ಇಸ್ಲಾಂ ಧರ್ಮದಲ್ಲಿ ಸಾವಿನ ಪರಿಕಲ್ಪನೆ :

ಇಸ್ಲಾಂ ಶಾಂತಿ ಧರ್ಮ. ಏಕದೇವೋಪಾಸನೆಗೆ ಇಲ್ಲಿ ಅಗ್ರಸ್ಥಾನ. ಬದುಕಿನ ನಿಸರ್ಗದ, ವಿಶ್ವದ ಎಲ್ಲ ಕ್ರಿಯೆಗಳೂ ಅಲ್ಲಾನ ಅಧೀನ ಎಂದು ಈ

ಧರ್ಮ ನಂಬುತ್ತದೆ. 'ಸಾವು' ದೈವೀಶಕ್ತಿಯ ನಿಯಂತ್ರಣಕ್ಕೆ ಒಳಪಡುತ್ತದೆ. ಕುರಾನ್ ಈ ಧರ್ಮದ ಧರ್ಮಗ್ರಂಥ.

'ಆತ್ಮ'ದ ಪರಿಕಲ್ಪನೆ ಇಸ್ಲಾಂ ಧರ್ಮದಲ್ಲಿ ವೈಶಿಷ್ಟ್ಯ ಪೂರ್ಣವಾಗಿದೆ. 'ಆತ್ಮ' ಪ್ರಭುವಿನ ಆಜ್ಞಾಧೀನ. ಅದರ ಜ್ಞಾನ ನಮಗೆ ತಿಳಿದಿರುವುದು ಬಹು ಸ್ವಲ್ಪ ಮನುಷ್ಯ ಇಹಲೋಕದ ದೇವರ ಪ್ರತಿನಿಧಿ. ಅವನ ಆತ್ಮ ಪರಿಶುದ್ಧ. ಅದಕ್ಕೆ ಇಚ್ಛಾಶಕ್ತಿ ಇದೆ. ಈ ಶಕ್ತಿ ದೈವ ಸಂಕಲ್ಪಕ್ಕೆ ಹೊಂದಿಕೊಂಡು ಹೋಗಬೇಕು. ಆತ್ಮದ ಪರಿಶುದ್ಧಿಯನ್ನು ಕಾಪಾಡಿಕೊಂಡವನು ಗೆಲ್ಲುತ್ತಾನೆ. ಅದನ್ನು ಕೆಡಿಸಿಕೊಂಡವನು ಸೋಲುತ್ತಾನೆ.

ದೇವರು ಜೀವರನ್ನು ಸೃಷ್ಟಿಸಿರುವುದು ಅವನ ಸೇವೆಗಾಗಿ. ನಗಿಸುವವನು, ಅಳಿಸುವವನು, ಬದುಕಿಸುವವನು, ಸಾಯಿಸುವವನು ಎಲ್ಲಾ ಅವನೇ ಎನ್ನುತ್ತದೆ ಕುರಾನ್.

ಮರಣದ ನಂತರ ಒಳಿತು ಕೆಡುಕಿನ ಬಗ್ಗೆ 'ಅಲ್ಲಾ'ನೇ ವಿಚಾರ ಮಾಡುತ್ತಾನೆ ಎನ್ನುವ ನಂಬಿಕೆ ಇಸ್ಲಾಂ ಧರ್ಮದಲ್ಲಿದೆ. ಮತ್ತು ಪರಲೋಕದ ಅಸ್ತಿತ್ವವನ್ನು ಇಸ್ಲಾಂ ಧರ್ಮ ನಂಬುತ್ತದೆ.

ಈ ಲೋಕದಿಂದ ಸತ್ತುಹೋದ ಎಲ್ಲರ ವಿವರಗಳು ಅಲ್ಲಾನ ಬಳಿಯಲ್ಲಿ ಸುರಕ್ಷಿತವಾಗಿರುತ್ತವೆ ಎಂದು ಈ ಧರ್ಮ ನಂಬಿದೆ.

ಸಾವಿನ ನಂತರ 'ಅಲ್ಲಾ'ನು ಎಲ್ಲಾ ಮನುಷ್ಯರಿಗೂ ಇನ್ನೊಂದು ಜೀವ ನೀಡುತ್ತಾನೆ ಎನ್ನುವ ನಂಬಿಕೆಯೂ ಇದೆ. ಎಲ್ಲರೂ ಅಲ್ಲಾನ ಮುಂದೆ ಹಾಜರಾಗಬೇಕು. ಇದಕ್ಕೆ ಇಸ್ಲಾಂ ಧರ್ಮ 'ಹಶ್ರ್' ಎಂದು ಕರೆದಿದೆ.

ಸತ್ತ ವ್ಯಕ್ತಿಯ ಬದುಕಿನಲ್ಲಿ ಕೆಡುಕಿಗಿಂತ ಒಳಿತು ಹೆಚ್ಚಾಗಿದ್ದರೆ, 'ಅಲ್ಲಾ' ಕ್ಷಮಿಸುತ್ತಾನೆ. ಕೆಡಕುಗಳು ಅಧಿಕವಾಗಿದ್ದರೆ 'ಅಲ್ಲಾ' ಅವನನ್ನು ಶಿಕ್ಷಿಸುತ್ತಾನೆ. ಕ್ಷಮಾ ಪಡೆದವನು ಸ್ವರ್ಗಕ್ಕೆ, ಶಿಕ್ಷೆ ಪಡೆದವನು ನರಕಕ್ಕೆ ಹೋಗುತ್ತಾನೆ ಎನ್ನುವ ಪರಿಕಲ್ಪನೆ ಇಸ್ಲಾಂ ಧರ್ಮದಲ್ಲಿ ಬೆಳೆದು ಬಂದಿದೆ. ಇಂತಹ ನಂಬಿಕೆಗಳಿಂದ, ಜನರು ನೀತಿವಂತರಾಗಿ ಬದುಕಲು ಅನುಕೂಲವಾಗುತ್ತದೆ.

ಇಸ್ಲಾಂ ಧರ್ಮದ ಪ್ರಕಾರ ಸತ್ತು ಬಿಡುಗಡೆಗೊಂಡ ಜೀವರು ಕೆಲವು ಕಾಲ ದೀರ್ಘ ನಿದ್ರೆಯಲ್ಲಿ ಉಳಿದುಕೊಳ್ಳುತ್ತಾರೆ. ಆದರೆ 'ಅಲ್ಲಾ'ನು ಮಲಗಿದವರನ್ನೆಲ್ಲ ಎಬ್ಬಿಸುತ್ತಾನೆ ಎನ್ನುವ ಸೂಚನೆ ಕುರಾನಿನಲ್ಲಿದೆ.

(ಉಲ್ಲೇಖ : ಮರಣೋತ್ತರ ಜೀವನ, ಪು–೧೪)

ಸಂಸ್ಕಾರ :

ವ್ಯಕ್ತಿ ಸಾಯುವ ಸಮಯದಲ್ಲಿ ದೇವರ ಸ್ಮರಣೆ ಮಾಡಿದರೆ ಪುಣ್ಯವೆಂಬ ನಂಬಿಕೆಯಿದೆ. ಆದ್ದರಿಂದ ಸಾಯವ ವ್ಯಕ್ತಿಯ ಸಮೀಪದಲ್ಲಿ ಖುರಾನ್ ಓದುತ್ತಾರೆ. ಸಾಯುವವನಿಗೆ, ದೈವೀ ಸಾನ್ನಿಧ್ಯ ದೊರೆಯಲೆಂದು ಮಕ್ಕಾದ ಜಮ್–ಜಮಬಾವಿಯ ನೀರನ್ನು ಬಾಯಿಯಲ್ಲಿ ಹಾಕುತ್ತಾರೆ. ಸಾವಿನ ಮೂಲಕ ಜೀವನು ದೇವರೆಡೆಗೆ ಹೋಗುವುದರಿಂದ ಪರಿಶುದ್ಧನಾಗಿ ಹೋಗಬೇಕೆಂದು ಮೃತ ಶರೀರವನ್ನು, ದೇಹದ ಅಂಗಾಂಗಗಳನ್ನೆಲ್ಲ ಸ್ವಚ್ಛಮಾಡಿ, ಸಾಬೂನಿನ ನೀರಿನಿಂದ ಸ್ನಾನ ಮಾಡಿಸಿ, ಸುಗಂಧ ದ್ರವ್ಯಗಳನ್ನು ಸಿಂಪಡಿಸಿ ಬಿಳಿಯ ಬಣ್ಣದ ವಸ್ತ್ರವನ್ನು ಹೊದಿಸುತ್ತಾರೆ.

ಇಸ್ಲಾಂ ಧರ್ಮದಲ್ಲಿ ಜೀವನು ಸಾಯುವ ಪೂರ್ವದಲ್ಲಿ ಎಲ್ಲರ ಸಾಲ ವನ್ನು ತೀರಿಸಬೇಕೆಂಬ ನಿಯಮವಿದೆ. ಮೃತನನ್ನು ಗೋರಿಯಲ್ಲಿ ದಫನ್ ಗೊಳಿಸುವ ಪೂರ್ವದಲ್ಲಿ ಪತ್ನಿ ಋಣವನ್ನು ತಾನು ಮಾಫಿ ಮಾಡುವುದಾಗಿ ಘೋಷಿಸಬೇಕೆಂಬ ವಿಚಾರವಿದೆ.

ಮುಸಲ್ಮಾನರು ಸತ್ತಾಗ ಅಳುವುದಿಲ್ಲ. ಕಾರಣ ಸತ್ತವನಿಗೆ–ಅತ್ತರೆ ಕಣ್ಣೀರಿನ ಒಂದೊಂದು ಹನಿಯೂ ಒಂದೊಂದು ನದಿಯಾಗಿ, ಮೃತನಿಗೆ ಪರಲೋಕ ಸೇರುವಲ್ಲಿ ಅಡ್ಡವಾಗಿ ನಿಲ್ಲುತ್ತದೆ ಎನ್ನುವ ನಂಬಿಕೆಯಿದೆ.

ಮಣ್ಣಿನಿಂದ ಹುಟ್ಟಿದ ದೇಹ ಮಣ್ಣಿನಲ್ಲಿ ಸೇರಿಸಲಾಗುತ್ತದೆ. (ಮುಸ್ಲಿಂ ಉತ್ಸವಗಳು ಮತ್ತು ಸಂಸ್ಕಾರಗಳು – ಪು. ೩೩)

ಮುಸಲ್ಮಾನರು ಸ್ಮಶಾನಕ್ಕೆ ಹೋಗುವಾಗಲೇ ಸ್ನಾನಮಾಡಿ ಹೋಗು ತ್ತಾರೆ. ಶವಸಂಸ್ಕಾರದ ನಂತರ ೩ನೇ ದಿನ ಕುರಾನ್ ಪಠಣ, ೪೦ನೇ ದಿನ ಬಂಧುಮಿತ್ರರನ್ನು ಆಮಂತ್ರಿಸಿ, ಫಕೀರರನ್ನು ಕರೆಯಿಸಿ ಔತಣ ಏರ್ಪಡಿಸು ತ್ತಾರೆ. ಈ ಲೋಕದಲ್ಲಿ ಒಳ್ಳೆಯ ಕಾರ್ಯಮಾಡಿ ಜನರಿಂದ ಸೈ ಎನಿಸಿಕೊಂಡು ಸತ್ತವನಿಗೆ ಅಲ್ಲಾನ ನ್ಯಾಯಾಲಯದಲ್ಲಿ ನ್ಯಾಯ ದೊರಕಿ, ಒಳ್ಳೆಯದಾಗುತ್ತದೆ. ಅಲ್ಲಾನಿಂದ ಪುರಸ್ಕಾರ ದೊರೆತು ಧನ್ಯನಾಗುತ್ತಾನೆ. ಅಲ್ಲಾನ ಅಪ್ಪಣೆ ಬರುವರೆಗೂ ಈ ಲೋಕದಲ್ಲಿದ್ದು, ಅವನು ಕರೆದುಕೊಂಡಾಗ ಹೋಗ ಬೇಕೆಂಬುದು ಇಸ್ಲಾಂ ಧರ್ಮದ ವಿಚಾರವಾಗಿದೆ.

'ಸಾವು' ದೇವನ ನ್ಯಾಯಾಲಯಕ್ಕೆ ಹೋಗುವ ದ್ವಾರ. ಅಲ್ಲಿ ಎಲ್ಲರೂ ಪ್ರವೇಶ ಮಾಡಬೇಕು. ದೇವರ ಎದುರು ವಿಚಾರಣೆ ನಡೆಯಬೇಕು. ಅದಕ್ಕೆ ತಕ್ಕ ಫಲ ದೇವರಿಂದ ಪಡೆಯಬೇಕು ಎನ್ನುವ ವಿಶಿಷ್ಟವಾದ ಹಾಗೂ ಅರ್ಥಪೂರ್ಣವಾದ ಪರಿಕಲ್ಪನೆ ಇಸ್ಲಾಂ ಧರ್ಮದಲ್ಲಿದೆ.

ವೀರಶೈವ ಧರ್ಮದಲ್ಲಿ ಸಾವಿನ ಪರಿಕಲ್ಪನೆ :

ವೀರಶೈವ ಧರ್ಮದಲ್ಲಿ ಸಾವು ಒಂದು ಶುಭ ಮುಹೂರ್ತ, ಮಂಗಳದ ಗಳಿಗೆ, 'ಮಹಾನವಮಿ' ಎನ್ನುವ ಕಲ್ಪನೆ ಇದೆ.

'ಜೀವ' 'ಶಿವ'ನಾಗುವ, ಅಂಗವು ಲಿಂಗವಾಗುವುದೇ ವೀರಶೈವ ಧರ್ಮ. ವೀರಶೈವಧರ್ಮ ಸಾಧಕನಿಗೆ ಒಂದು ಯೋಗವಿಜ್ಞಾನ, ಹಾಗೂ ಮನೋವಿಜ್ಞಾನವಾಗಿದೆ. ವೀರಶೈವರು ಜೀವನದ ಆದಿಯನ್ನು ಲಿಂಗೋದ್ಭವವೆಂದೂ, ಅಂತ್ಯವನ್ನು ಲಿಂಗೈಕ್ಯವೆಂದೂ ಕರೆಯುತ್ತಾರೆ. ವೀರಶೈವರಲ್ಲಿ ಸಾವು ಸಾವಲ್ಲ, ಲಿಂಗದಲ್ಲಿ ಲೀನವಾಗುವ ಸ್ಥಿತಿ. ಲಿಂಗವೇ ಆಗುವ ಯೋಗ. ವೀರಶೈವರು ಮೃತ ಶರೀರವನ್ನು ಲಿಂಗದೇಹಿ ಎಂದು ಕರೆಯುತ್ತಾರೆ. ಇವರಲ್ಲಿ ಸದೇಹ ಮುಕ್ತಿ – ವಿದೇಹ ಮುಕ್ತಿಗಳೆಂದು ಎರಡು ವಿಧ. ದೇಹ ಮುಕ್ತವಾಗಿ ಶಿವಯೋಗ ಸಾಧನೆ ಮಾಡುವುದು ಸದೇಹ ಮುಕ್ತಿ. ದೇಹವನ್ನು ಬಿಟ್ಟು ಆ ಸ್ಥಿತಿ ಹೊಂದುವುದು ವಿದೇಹ ಮುಕ್ತಿ. ''ಸತ್ತ ಬಳಿಕ ಲಿಂಗದೊಳಗಾದೆವೆಂಬುದು ಎತ್ತಣ ವಾರ್ತೆ. ಅದು ಹುಸಿ ನೋಡಾ'' ಎಂದು ಅಲ್ಲಮಪ್ರಭು ಹೇಳುತ್ತಾನೆ. ಅಂದರೆ ಶರಣರು ಸದೇಹಮುಕ್ತಿಗೆ ಹೆಚ್ಚು ಮಹತ್ವ ನೀಡುತ್ತಾರೆ. ವೀರಶೈವರಲ್ಲಿ ಸ್ವರ್ಗ–ನರಕ, ದೇವ ಲೋಕಗಳ ಕಲ್ಪನೆಯಿಲ್ಲ. ಅವು ಬದುಕಿನಲ್ಲಿಯೇ ಇವೆ ಎಂದು ಅವರು ಭಾವಿಸುತ್ತಾರೆ.

'ಸಾಯದ ಮುನ್ನ ಸ್ವಯವನರಿವುದೇ ದೇವಲೋಕ' ಎಂದು ಅಲ್ಲಮಪ್ರಭು ಹೇಳುತ್ತಾನೆ.

ವೀರಶೈವರು ಲಿಂಗವ ಪೂಜಿಸಿ, ಲಿಂಗವೇ ಆಗವುದರಿಂದ ಮತ್ತೆ ಹುಟ್ಟಿ ಬರುವ ಪ್ರಶ್ನೆಯೇ ಇಲ್ಲ. ವೀರಶೈವ ಜನ್ಮಕ್ಕೆ ಬರುವ ಮೊದಲು ಹಲವಾರು ಭವಗಳಲ್ಲಿ ಸಿಕ್ಕಿಬರಬಹುದು. ವೀರಶೈವಕ್ಕೆ ಬಂದು ನಿಜವಾದ ಆಚರಣೆಯಲ್ಲಿ ತೊಡಗಿದರೆ ಅವನೇ ಶಿವನಾಗುತ್ತಾನೆ. ಒಬ್ಬ ಶರಣ ಹೇಳುತ್ತಾನೆ :

"ಎಂಭತ್ತುನಾಲ್ಕು ಲಕ್ಷ ಜೀವಗಳೆಂಬ ಕೊಳಗದಲ್ಲಿ ಆಯುಷ್ಯರಾಶಿಯ ಅಳೆದು–ಅಳೆದು ಸೋತೆನಯ್ಯಾ, ವೀರಶೈವತ್ವಕ್ಕೆ ಬಂದು ಜನ್ಮವ ಹಿಂಗಿದೆನು ಲಿಂಗವ ಕಂಡು ಲಿಂಗವೇ ಆದೇನು ಕಾಣಾ" ಎಂದು. ಲಿಂಗವಂತ, ಲಿಂಗಚಿಂತನೆಯಲ್ಲಿ ತನ್ನ ಕ್ರಿಯೆಗಳನ್ನು ತೊಡಗಿಸಿ, ಲಿಂಗವಾಗುವುದೇ ವೀರಶೈವರ ಮುಕ್ತಿ ಅಥವಾ ಲಿಂಗಾಂಗ ಸಾಮರಸ್ಯ ಮತ್ತು ಮರಣದ ಅಂತಿಮ ಧ್ಯೇಯ. ಎಲ್ಲ ಎಲ್ಲವನರಿಯಬಹುದು, ಸಾವನರಿಯಬಾರದು ಮಾನವರೆಲ್ಲರಿಗೂ ಸಾವು, ಮಹಾಪುರುಷರೆಲ್ಲರಿಗೂ ಸಾವು, ಶಿವ–ಶಿವಾ, ಸಾವನರಿಯದೀ ಲೋಕ, ಎಂದು ಅಲ್ಲಮ ಪ್ರಭುವಿನ ವಿಚಾರ. ಸಾವು ಅರಿಯಬಾರದು, ಅದನ್ನು ಅನುಸಂಧಾನ ಮಾಡಿ ಶಿವನಾಗಬೇಕೆನ್ನುತ್ತದೆ ವೀರಶೈವಧರ್ಮ. ವೀರಶೈವಾಚಾರ ಮಾರ್ಗದಲ್ಲಿ ನಡೆದು ಮೃತನಾದವನಿಗೆ ಒಂದೇ ಜನ್ಮದಲ್ಲಿ ಮುಕ್ತಿ ಎಂದು ಆಗಮ ವಾಕ್ಯವೂ ಇದನ್ನೇ ಸಾರುತ್ತದೆ. (ಏಕೇನ ಜನ್ಮನಾ ಮುಕ್ತಿಃ, ವೀರಾಣಾಂತು ಮಹೇಶ್ವರಿ)

ವೀರಶೈವರಲ್ಲಿ ಲಿಂಗೈಕ್ಯನಾದ ವ್ಯಕ್ತಿಯ ಲಿಂಗದೇಹದ ಸಂಸ್ಕಾರದ ಕ್ರಮವನ್ನು 'ಶಿವಮೇಧ', 'ನಿರ್ಮಾಣಯಾಗ', ದೇಹಾವಸಾನಕೃತ್ಯಾ', 'ಅಂತ್ಯೇಷ್ಠಿ' ಎಂದು ಕರೆಯುತ್ತಾರೆ. ದೇಹದಿಂದ ಜೀವ ಬಿಡುಗಡೆ ಹೊಂದುವಾಗ ನಾಲ್ಕು ಭೂತಗಳು ನಿರ್ಗಮಿಸುತ್ತವೆ. ಇನ್ನುಳಿದ ಪೃಥ್ವಿಭೂತವು ವಿಶ್ವದಲ್ಲಿ ಲೀನವಾಗಬೇಕು. ಆದ್ದರಿಂದ ಮೃತನ ದೇಹವನ್ನು ಭೂಮಿಯಲ್ಲಿ ನಿಕ್ಷೇಪ ಮಾಡವುದು ಸೂಕ್ತವೆಂದು ವೀರಶೈವರು ನಂಬುತ್ತಾರೆ.

ಶ್ರೀಸೂಕ್ತದಲ್ಲಿ ಬರುವ "ಕರ್ದಮೇನ ಪ್ರಜಾಭೂತಾಮಯಿ ಸಂಭವ ಕರ್ದಮ" ಅಂದರೆ "ಪೃಥಿವಿ ಕಾಲಪರಿಪಾಕದಿಂದ ಮರಣ ಹೊಂದಿದ ನನ್ನ ದೇಹವನ್ನು ನಿನ್ನ ಗರ್ಭದಲ್ಲಿ ಅಡಗಿಸಿಕೊಂಡು ಸದ್ಗತಿ ನೀಡು" ಎನ್ನುವ ಮಂತ್ರಾರ್ಥ ಮೇಲಿನ ವಿಷಯವನ್ನೇ ಸಮರ್ಥಿಸುತ್ತದೆ.

ವೀರಶೈವರಲ್ಲಿ ಶವವನ್ನು ಹೂಳುವ ಸ್ಥಳಕ್ಕೆ 'ಸಮಾಧಿ' ಎಂದು ಕರೆಯುತ್ತಾರೆ. ಇದು ಯೋಗದರ್ಶನದ ಪಾರಿಭಾಷಿಕ ಪದ. ಆತ್ಮ ಸಾಕ್ಷಾತ್ಕಾರದ ಸ್ಥಿತಿಯನ್ನು ಮುಟ್ಟಿ ಇನ್ನಿಲ್ಲವಾದ ವೀರಶೈವನ ದೇಹವಿರುವ ಸ್ಥಳವನ್ನು 'ಸಮಾಧಿ' ಎಂದು ಕರೆಯುತ್ತಾರೆ. ಜನನ–ಮರಣಗಳ ಬಿಡುಗಡೆಯ ಸ್ಥಿತಿಯನ್ನೇ ವೀರಶೈವರು 'ಶಿವಜೀವೈಕ್ಯ', 'ಲಿಂಗಾಂಗ

ಸಾಮರಸ್ಯ' ಎಂದು ಕರೆಯುತ್ತಾರೆ. ನದಿ ಸಮುದ್ರ ನ್ಯಾಯದಂತೆ, ನದಿ ಸಾಗರವನ್ನು ಸೇರಿ, ಮತ್ತೆ ಹಿಂದಿರುಗುವ ಪ್ರಶ್ನೆಯೇ ಇಲ್ಲ. ಆಧ್ಯಾತ್ಮ ಸಾಧನೆಯಿಂದ ಜೀವಕ್ಕೆ ದೊರಕುವ ಸಫಲತೆಯೇ ಮುಕ್ತಿ. ಈ ನಿಲುವನ್ನು ಪಡೆಯಲು ಜಗತ್ತಿನ ಸಂತ ಮಹಾಂತರೆಲ್ಲ ಸಾಧನೆ ಮಾಡಿದ್ದಾರೆ. ಕವಿ ಕಾಳಿದಾಸನ ಪ್ರಾರ್ಥನೆಯು ಇದೇ ಆಗಿದೆ. 'ಮಮಾಪಿಚ ಕ್ಷಪಯತು ನೀಲ ಲೋಹಿತಃ ಪುನರ್ಭವಂ ಪರಿಗತ ಶಕ್ತಿರಾತ್ಮಭೂಃ (ತನಗೆ ಪುನರ್ಜನ್ಮ ಬೇಡ, ಮುಕ್ತಿ ಬೇಕೆಂದು ಶಿವನನ್ನು ಪ್ರಾರ್ಥಿಸುತ್ತಾನೆ)

ಶಿವಲೋಕದಿಂದಲಾ । ಪರಮನಪ್ಪಣೆ ಪಡೆದು
ಶಿವನವಂಶೋದ್ಭವನಾಗಿ । ಮರ್ತ್ಯಕ್ಕಿಳಿದು
ವಿವರಿಸುವ ತತ್ವಮಂ । ಪಂಚಾಕ್ಷರಿಯ ಮಹಾ
ಷಟ್‌ಸ್ಥಲಂಗಳನು ಮುದದಿಂ
ತಲೆ ತಿಳಿದು ಆಚರಿಸಿ । ಸಾತ್ವಿಕೋತ್ತಮನಾಗಿ
ಶಿವಪುರವ ಪೊಕ್ಕು । ಸಮರಸವಾದ ಬಳಿಕ
ನೀಂ ಶಿವನೆಲೆಯ ಬಿಟ್ಟು । ಮರ್ತ್ಯಕ್ಕಿಳಿಯಬೇಡೆಂದು
ಸ್ವರ್ಣ ಪುಷ್ಪವನೀವೆನು ॥

ಇದು ವೀರಶೈವರ ಚರಮಗೀತೆ. ಮೃತದೇಹವನ್ನು ಮಣ್ಣಿನಲ್ಲಿ ಹೂಳುವ ಮುನ್ನ ಸಮಾಧಿಯ ಬಳಿಯಲ್ಲಿ ಜಂಗಮರು ಮೇಲಿನ ಪದ್ಯವನ್ನು ಪಠಿಸುತ್ತಾರೆ. ಈ ಗೀತೆಯ ಒಳನೋಟ ಜನನ–ಮರಣ ಹಾಗೂ ಬದುಕಿನ ಸಾರ್ಥಕತೆಯ ಬಗ್ಗೆ ಗಂಭೀರ ದರ್ಶನವಿದೆ.

ಮೃತರ ಗುಣವರ್ಣನೆ, ಸಾವಿನ ಅನಿವಾರ್ಯತೆ, ಪುನರ್ಜನ್ಮವನ್ನು ಬಯಸದಿರುವಿಕೆ ಮೃತನಾದ ವ್ಯಕ್ತಿ ಸಾವಿನ ನಂತರ ಉತ್ತಮವಾದ ಬದುಕನ್ನು ನಡೆಸಲಿ ಎನ್ನುವ ಹಾರೈಕೆಯ ಅಂಶಗಳು ಇಲ್ಲಿ ಕಾಣಿಸಿಕೊಳ್ಳುತ್ತವೆ.

ಜೀವ–ಜಗತ್ತು ಈಶ್ವರನ ಬಗ್ಗೆ ವಿವೇಚನೆ ಸಾವಿಗೆ ದೇಹವನ್ನು ಅರ್ಪಿಸಿ ಜೀವಾತ್ಮ ಬತ್ತಲೆಯಾಗಿ 'ಪವಿತ್ರಾತ್ಮ'ನಾಗಿ ಬಯಲನ್ನು ಸೇರಬೇಕೆಂಬ ಸದಾಶಯ ಈ ಗೀತೆಯಲ್ಲಿದೆ.

'ಸಾವ'ನ್ನು ಕುರಿತು ವೀರಶೈವರ ತಾತ್ವಿಕ ದೃಷ್ಟಿಕೋನ ಅತ್ಯಂತ ಅರ್ಥಪೂರ್ಣವಾಗಿದೆ. ಬಸವಣ್ಣನವರು ವಚನವೊಂದರಲ್ಲಿ ಹೀಗೆ ಹೇಳುತ್ತಾರೆ :

'ಎಮ್ಮವರಿಗೆ ಸಾವಿಲ್ಲ, ಎಮ್ಮವರು ಸಾವನರಿಯರು' ಎಂದು.
ಮತ್ತೆ ಹೇಳುತ್ತಾರೆ.
ಸಾವೆಂಬುದು ಸ್ವಯವಲ್ಲ
ಲಿಂಗದಿಂದುದಯಿಸಿ ಬಂದ ಲಿಂಗೈಕ್ಯಂಗೆ
ಲಿಂಗದಲ್ಲಿಯಲ್ಲದೆ ಬೇರೆಡೆಯುಂಟೆ ?
ಕೂಡಲ ಸಂಗಮದೇವಾ ।

ಶರಣನಿಗೆ 'ಸಾವು' ಲಿಂಗಾಂಗ ಸಾಮರಸ್ಯದ ದಿವ್ಯಾನುಭವ. ಶಿವಜೀವೈಕ್ಯ ಸ್ಥಿತಿಯ ಅನುಭವ. ದುಃಖದ ಸಂಗತಿಯಲ್ಲ, 'ಮರಣ ಮಹಾನವಮಿ'. ವೀರಶೈವವು ಜನ್ಮಾಂತರಗಳನ್ನು ನಂಬಿದರೂ ಪುನರ್ಜನ್ಮ ಒಪ್ಪುವುದಿಲ್ಲ. ಕರ್ಮಸಿದ್ಧಾಂತ ನಂಬುವುದಿಲ್ಲ. ಪಾಪ–ಪುಣ್ಯದ ಕಲ್ಪನೆ ಹಾಗೂ ಸ್ವರ್ಗ ನರಕಗಳ ನಂಬಿಕೆಗಳನ್ನು ನಿರಾಕರಿಸುತ್ತಾ ಇವು ನಮ್ಮ ಬದುಕಿನ ಅವಿಭಾಜ್ಯ ಭಾಗಗಳು, ಇವು ನಮ್ಮ ನಡೆ–ನುಡಿಗಳಲ್ಲಿವೆ ಎಂದು ನಂಬುತ್ತಾರೆ.



## ಷಣ್ಮುಖಯ್ಯ ಅಕ್ಕೂರಮಠರ ಕೆಲವು ಪುಸ್ತಕಗಳನ್ನು ಕುರಿತು ವಿದ್ವಾಂಸರ ಅಭಿಪ್ರಾಯಗಳು

ವೈಚಾರಿಕ ಸಾಹಿತ್ಯ : ದಿಗ್ದರ್ಶನ (೧೯೮೦) ಈ ಕೃತಿಯಲ್ಲಿ, ಲೇಖಕರ ಶ್ರದ್ಧಾಪೂರ್ಣವಾದ ಅಭ್ಯಾಸ, ಸಂಯಮದ ನಿರೂಪಣೆ, ಗಾಢವಾದ ಚಿಂತನೆಯನ್ನು ಕಾಣಬಹುದು. ಸಂಸ್ಕೃತ, ಕನ್ನಡ, ಹಿಂದಿ ಮೂರೂ ಭಾಷೆಗಳ ಪಾಂಡಿತ್ಯ ಪಡೆದಿರುವ (ಲೇಖಕರು) ಸಂದರ್ಭೋಚಿತವಾಗಿ ಕೊಡುವ ಉದಾಹರಣೆಗಳಿಂದ ಅವರ ಆಳವಾದ ಅಧ್ಯಯನದ ವ್ಯಾಪ್ತಿಯನ್ನು ಗುರುತಿಸಬಹುದು.

ಗ್ರಂಥಲೋಕ (೧–೫–೧೯೮೦) —ಸದಾಶಿವ ಎಣ್ಣೆಹೊಳೆ

ಈ ವೈಚಾರಿಕ ಪ್ರಬಂಧಗಳ ಸಂಕಲನದಲ್ಲಿ : ವಿಚಾರಗಳ ಸಂಮೋಹವಿದೆ, ವೈವಿಧ್ಯತೆ ಇದೆ, ತರ್ಕದ ಹೊಳಪಿದೆ, ಅರಳಿಸಿಕೊಳ್ಳುವ ಅರ್ಥೈಸಿಕೊಳ್ಳುವ ಕಾಳಜಿ ಇದೆ. ಲೇಖಕರು ತಮ್ಮ ಅನಿಸಿಕೆಗಳನ್ನು ತರ್ಕದ ನೆಲೆಯಲ್ಲಿ ಸರಳವಾಗಿ ಮಂಡಿಸುವ ಪ್ರಯತ್ನ ಗಮನಾರ್ಹ.

ಲೋಕವಾಣಿ (೨–೬–೧೯೮೦) —ಎಂ. ಜಿ. ನಾಗರಾಜ್

ಈ ಕೃತಿಯಲ್ಲಿ ಭಾರತೀಯ ಸಂಸ್ಕೃತಿಯ ವಿವಿಧ ಸ್ತರಗಳ ಸೂಕ್ಷ್ಮಾವಲೋಕನ ಈ ಲೇಖನಗಳ ಪ್ರಧಾನ ಗುರಿಯಾಗಿದೆ. ಹಲವು ಮೂಲಗಳಿಂದ ಸಂಗ್ರಹಿಸಿದ ವಿಷಯಗಳನ್ನು ಕೇವಲ ಪಟ್ಟಿಮಾಡದೆ ಅವುಗಳನ್ನು ತುಲನೆ ಮಾಡಿ ಒಂದೇ ಅಂಶವನ್ನು ಹಲವಾರು ವಿಚಾರಗಳ ಬೆಳಕಿನಲ್ಲಿ ವಿಶ್ಲೇಷಿಸುವುದರಿಂದ ಸಮಗ್ರತೆಯನ್ನು ಸ್ವೋಪಜ್ಞತೆಯನ್ನು ಕಾಯ್ದುಕೊಂಡಿದ್ದಾರೆ. ನಮ್ಮ ಸಾಂಸ್ಕೃತಿಕ ನೆಲೆಯ ವಿವಿಧ ಘಟ್ಟಗಳನ್ನು, ಒಂದು ಚಾರಿತ್ರಿಕ ದೃಷ್ಟಿಕೋನದಿಂದ ನೋಡಿ, ಬದಲಾವಣೆಗಳನ್ನು ಅವುಗಳ ಹಿಂದಿನ ಪ್ರೇರಣೆಗಳನ್ನು ಗುರುತಿಸುವ ರೀತಿ ಮೆಚ್ಚುಗೆಯಾಗುತ್ತದೆ. ಸಂಶೋಧಕನಿಗೆ ಇರಲೇಬೇಕಾದ ಪೂರ್ವಗ್ರಹ ಮುಕ್ತ ಮನಸ್ಸು ಭಾವೋದ್ರೇಕರಹಿತ ಬರವಣಿಗೆ

ನಿರೂಪಣೆಯಲ್ಲಿರಬೇಕಾದ ಹೊಸತನ ಇವುಗಳನ್ನು ಇವರ ಬರಹಗಳಲ್ಲಿ ಕಾಣಬಹುದಾಗಿದೆ.

ಪ್ರಜಾವಾಣಿ (೨೨–೬–೧೯೮೦) —ಟಿ. ಪಿ. ಅಶೋಕ

ನಿಮ್ಮ ಪುಸ್ತಕವನ್ನು ಬಿಡುವಾದಾಗ ಓದಿ ಮುಗಿಸಿದ್ದೇನೆ. ನಿಮ್ಮ ಸ್ವತಂತ್ರ ವೈಚಾರಿಕ ದೃಷ್ಟಿ ಇದರಲ್ಲಿ ಎದ್ದು ಕಾಣುತ್ತದೆ. ದಿಗ್ದರ್ಶನ ಎಂಬ ತಲೆಬರಹವು ಸಾರ್ಥಕವಾಗಿದೆ. ದಿಕ್ಕನ್ನು ತೋರಿಸಿದ್ದೀರಿ. ಆ ದಿಕ್ಕಿನಲ್ಲಿ ಇನ್ನು ದೂರ ಹೋಗುವುದು ಸಾಧ್ಯ.

ಬೆಂಗಳೂರು (೧೯–೬–೧೯೮೦) —ಡಾ. ರಂ. ಶ್ರೀ. ಮುಗಳಿ

ನಿಮ್ಮ ಪುಸ್ತಕ ಓದಿದೆ ; ಸಂತೋಷ ಪಟ್ಟೆ, ಖಚಿತವಾಗಿ, ಸ್ಫುಟವಾಗಿ ಹೇಳುವ ಕಲೆ ನಿಮಗೆ ಸಾಧಿಸಿದೆ. ಶುಚಿಯಾದ ಶೈಲಿ.

ರಾಯಚೂರು (೧೪–೪–೧೯೮೦) —ಶಾಂತರಸ

ನಿಮ್ಮ ಪುಸ್ತಕ ತಲುಪಿದೆ ಧನ್ಯವಾದಗಳು. ನಿಮ್ಮ ಅರಿವಿನ ಕ್ಷಿತಿಜಗಳನ್ನು ವಿಸ್ತೃತವಾಗುವ ದಿಕ್ಕಿನಲ್ಲಿ ಸಾಗಿರುವ ನಿಮ್ಮ ಈ ಜ್ಞಾನಯಾತ್ರೆ ನಿಜವಾದ ಮಾನವಧರ್ಮವನ್ನು ಗ್ರಹಿಸಿಕೊಳ್ಳುವಲ್ಲಿ ಸಾಫಲ್ಯವನ್ನು ಪಡೆದೀತು ಎಂದು ನಂಬಿದ್ದೇನೆ.

ಧಾರವಾಡ (೧೧–೪–೧೯೮೦) —ಶಂ. ಬಾ. ಜೋಶಿ

ನಿಮ್ಮ ಪುಸ್ತಕ ನಿಜಕ್ಕೂ ವೈಚಾರಿಕ ಕ್ರಾಂತಿಗೆ ದಿಗ್ದರ್ಶನವಾಗಿದೆ. ಅದರಲ್ಲೂ ಹೊಸದೃಷ್ಟಿಯ ವಿಮರ್ಶೆ ಸಂಶೋಧನೆಯ ಕ್ಷೇತ್ರಕ್ಕೆ ನಾಂದಿ ಹಾಡಿದಂತಿದೆ. ವಚನಗಳ ಅಭ್ಯಾಸ ಈ ರೀತಿ ನಡೆದಲ್ಲಿ ಅದೊಂದು ಅದ್ಭುತ ಸೇವೆ ಆಗುತ್ತದೆ.

೭–೪–೧೯೮೦ —ಡಾ. ಮಲ್ಲಿಕಾರ್ಜುನ ಲಠ್ಠೆ

ತಮ್ಮ ಪುಸ್ತಕ ತಲುಪಿದೆ. ನನ್ನ ಅಭಿಪ್ರಾಯವನ್ನು ಹೇಳುವ ಕೃಪೆ ಮಾಡಿದ್ದೀರಿ. ನನ್ನ ಅಭಿಪ್ರಾಯದಿಂದ ನಿಮಗೇನಾಗುವುದಿದೆ ? ಎಲ್ಲವೂ ಸರಿಯಾಗಿಯೇ ಇದೆ. ಪುಟ ೮೫ರಲ್ಲಿ ಹಿಂದುಳಿದ ಜನಾಂಗದವರು

ಬೌದ್ಧರಾಗಿಯೋ ಬ್ರಾಹ್ಮಣರಾಗಿಯೋ ಇಲ್ಲವೆ ಮುಸಲ್ಮಾನರಾಗಿಯೋ ಮತಾಂತರ ಹೊಂದಿದರು ಎಂದಿದೆ. ಇದು ರಾಹುಲನ ಲೇಖನದ ಅನುವಾದ. ಬ್ರಾಹ್ಮಣರಾಗಿ ಮತಾಂತರ ಹೊಂದಲು ಆ ಕಾಲದಲ್ಲಿ ಸಾಧ್ಯವಿದ್ದಿತೋ ಏನೋ ನಾನರಿಯೆ. ಇದು ಈಗಲೂ ಇದ್ದಿದ್ದರೆ ಇವರ ಬ್ರಾಹ್ಮಣಿಕೆಗೆ ಈಗಿರುವ ದುಃಸ್ಥಿತಿ ಬರುತ್ತಿರಲಿಲ್ಲ ಅಲ್ಲವೆ ?

ಬೆಂಗಳೂರು (೭–೪–೧೯೮೦) —ಬಿ. Chi

ನಿಮ್ಮ ಪುಸ್ತಕ ಇಂದು ಕೈಸೇರಿತು. ಬಿಡುವಿದ್ದುದರಿಂದ ಓದಲೆಂದು ಕೈಗೆತ್ತಿಕೊಂಡೆ. ಮುಗಿಸುವವರೆಗೆ ಬಿಡಲಾಗಲಿಲ್ಲ! ತಮ್ಮ ವಿಚಾರಧಾರೆಯನ್ನು ಮೆಚ್ಚಿಕೊಂಡೆ ; ಪುಸ್ತಕ ಮುಗಿಯುವ ವೇಳೆಗೆ ತಮ್ಮನ್ನು ಕಾಣಬೇಕೆಂಬ ಕುತೂಹಲ ಮೂಡಿಕೊಂಡಿತು ! ....ಇಷ್ಟರಲ್ಲೇ ತಮ್ಮನ್ನು ಕಾಣುತ್ತೇನೆ.

೨೭–೩–೧೯೮೦ —ಪ್ರೊ. ಎಸ್. ಕೆ. ರಾಮಚಂದ್ರರಾವ್

## ಸಂಸ್ಕೃತದಲ್ಲಿ ವೀರಶೈವ ಸಾಹಿತ್ಯ (೧೯೬೨)

(ಆರ್ಯಭಟ ಪ್ರಶಸ್ತಿ ಪಡೆದ ಕೃತಿ ೧೯೬೫)

ವೇದಕಾಲದಿಂದ ೨೦ನೆಯ ಶತಮಾನದ ಕೊನೆಯವರೆಗೆ ವೀರಶೈವದಲ್ಲಿ ರಚಿತವಾದ ಸಂಸ್ಕೃತ ಸಾಹಿತ್ಯದ ಸಮಗ್ರ ಪರಾಮರ್ಶೆಯನ್ನು ಅಕ್ಕೂರಮಠರು ಸಮರ್ಥವಾಗಿ ಮಾಡಿದ್ದಾರಲ್ಲದೆ, ಹಲವು ಗ್ರಂಥವಿಶೇಷಗಳ ವೈಶಿಷ್ಟ್ಯದ ಕಿರುಪರಿಚಯ ಕೂಡಾ ನೀಡಿದ್ದಾರೆ. ಹೀಗಾಗಿ ವೀರಶೈವ ಸಾಹಿತ್ಯ ಸಂಸ್ಕೃತದಲ್ಲಿ ಬೆಳೆದು ಬಂದಿರುವ ರೀತಿಯ ದಿಗ್ದರ್ಶನ ಇಲ್ಲಿದೆ. ಮುಂದಿನ ಅಭ್ಯಾಸಕ್ಕೂ ಪ್ರೇರಣೆ ಉಂಟು. ಲೇಖಕರ ಸಾಹಸ ಪ್ರಶಂಸನೀಯ

ಸಂಯುಕ್ತ ಕರ್ನಾಟಕ (೧೭–೧೨–೧೯೬೫) —ದ. ಲ. ಕೆರೂರ

ನಿಮ್ಮ ಪುಸ್ತಕ ಈಗ ತಾನೇ ಬಂತು. ಓದಿ ಮುಗಿಸಿದೆ. ನಿಮ್ಮ ಪಾಂಡಿತ್ಯ, ವಿವೇಚನಾಯುಕ್ತ ಬರವಣಿಗೆಯಿಂದ ಪುಸ್ತಿಕೆಯ ಘನತೆ ಹೆಚ್ಚಿದೆ.

ನಮ್ಮ ಜನರು ಸಂಸ್ಕೃತದ ಬಗೆಗೆ ತೋರಿದ ಅವಜ್ಞೆ ಹಾಗೂ ಉಪೇಕ್ಷೆಗಳಿಂದ ನಾವು ಎಂಥ ದರಿದ್ರರಾದೆವು ಎನ್ನುವ ಪ್ರಜ್ಞೆ ಇಂದಿನ ವಿದ್ವಾಂಸರು

ಎಂದೆನ್ನಿಸಿಕೊಳ್ಳುವವರಿಗೂ ಬರಲಿಲ್ಲವೆನ್ನುವುದು ಈ ಸಮಾಜದ ದುರಂತ.

ಧಾರವಾಡ (೧೫–೭–೯೯೩) —ಡಾ. ಪಂಚಾಕ್ಷರಿ ಹಿರೇಮಠ

ನಿಮ್ಮ ಕಿರು ಹೊತ್ತಿಗೆ ತಲುಪಿದೆ ನಿಮ್ಮ ಸಂಪಾದನೆ, ಸಂಶೋಧನೆ, ಪ್ರಶಂಸನೀಯ.

ಧರ್ಮಸ್ಥಳ (೧೫–೭–೯೯೩) —ಗೌ. ಮ. ಉಮಾಪತಿ ಶಾಸ್ತ್ರಿ

ನಿಮ್ಮ ಪುಸ್ತಕ ಓದಿದೆ. ಈ ಚಿಕ್ಕ ಗ್ರಂಥದಲ್ಲಿ ಸಾಕಷ್ಟು ವಿಷಯವನ್ನು ಸಂಗ್ರಹಿಸಿದ್ದೀರಿ. ನೀವು ಸಂಗ್ರಹಿಸಿರುವ ವಿಷಯ ಮತ್ತು ಕೊಟ್ಟಿರುವ ವಿವರಗಳು ಉಪಯುಕ್ತವಾಗಿವೆ. ಈ ವಿಷಯವನ್ನು ಕುರಿತ ವಿವರವಾದ ಅಧ್ಯಯನಕ್ಕೆ ಇದು ಪ್ರೇರಕವಾಗುವಂತಿದೆ, ಮಾರ್ಗದಶಕವಾಗುವಂತಿದೆ. ಇಂತಹ ಒಂದು ಕೃತಿಯನ್ನು ಕೊಟ್ಟುದಕ್ಕಾಗಿ ನಿಮ್ಮನ್ನು ಅಭಿನಂದಿಸುತ್ತೇನೆ.

ಮೈಸೂರು (೨೪–೭–೯೯೩) —ಡಾ. ಎಸ್. ತಿಪ್ಪೇರುದ್ರಸ್ವಾಮಿ

ಹುಟ್ಟಿನೊಳಡಗಿದ ಪರಾಗಮಧು (ರೆ)
ಮಹರ್ಷಿ ಪಾನದೊಳಡಗಿದ ಸಾಗರ
ಶಿಖೆಯೊಳಡಗಿದ ಗಂಗೆ
ಮರಳಿ ಹರಿದು ಹರಡಿದಂತೆ
ಸಂಸ್ಕೃತ ಭಾಷೆಯೊಳಡಗಿದ ವೀರಶೈವ ಸಾಹಿತ್ಯ
ಅಕ್ಕರೆಯಿಂ ಸಿಂಪಡಿಸಿದ
ಜ್ಞಾನಗಂಗೋತ್ರಿಯ ಶ್ರೀಷಣ್ಮುಖ, ಹಸನ್ಮುಖ

ನಿಮ್ಮದಾಗಿರಲಿ ಸದಾಸಂಶೋಧನ ಸಂಮುಖ, ತುಂತರದಿ ತಣಿಸಿದ ನೀತ ಕಾಂತಪ್ರಿಯ ಪ್ರಖ್ಯಾತ ನಿರುಪಾಧೀಶ.

ಉಲ್ಲಟ್ಟಿ ಕ್ಯಾಂಪ್ (೬–೧೧–೯೯೩) —ನಿರುಪಾಧಿ ಸ್ವಾಮಿಗಳು

ಸಂಸ್ಕೃತದಲ್ಲಿ ವೀರಶೈವ ಸಾಹಿತ್ಯ ಗ್ರಂಥವನ್ನು ಅವಲೋಕಿಸಿ ಆನಂದಿಸಿದ್ದೇವೆ. ನಿಜವಾಗಲೂ ನಿಮ್ಮ ಪರಿಶ್ರಮ ನಮ್ಮ ವೀರಶೈವರಿಗೆ ವಿಶೇಷವಾದ ಕಾಣಿಕೆಯಾಗಿದೆ. ಇದೊಂದು ವೀರಶೈವ ಸಾಹಿತ್ಯದ ಸಂಸ್ಕೃತ ಕೋಶದಂತೆ ಸಹಾಯಕವಾಗುತ್ತದೆ. ಈ ಗ್ರಂಥದಲ್ಲಿ ಸಂಸ್ಕೃತಾನುರಾಗಿಗಳಿಗೆ ವೀರಶೈವ ಸಾಹಿತ್ಯದ ವಿಶಾಲವಾದ ಹಾಗೂ ಉಪಯುಕ್ತವಾದ ಸ್ಥೂಲಪರಿಚಯ ದೊರೆ

ಯುತ್ತದೆ. ಅಷ್ಟೇ ಅಲ್ಲ; ಆ ಗ್ರಂಥಗಳ ಬಗ್ಗೆ ವಿವರವಾಗಿ ಅರಿಯುವಂತೆ ಪ್ರೇರಣೆ ಕೂಡಾ ದೊರೆಯುತ್ತದೆ.

ಕಾಶಿ (೨೮–೧–೯೪) –ವೇದಾಂತಾಚಾರ್ಯ ಶ್ರೀ ವಿರೂಪಾಕ್ಷ ಶಿವಾಚಾರ್ಯ

'ಸಂಸ್ಕೃತದಲ್ಲಿ ವೀರಶೈವ ಸಾಹಿತ್ಯ'ವನ್ನು ಓದಿ ನನಗೆ ನಿಮ್ಮ ವಿದ್ವತ್ತಿನ ಹರಹು ಎಷ್ಟು ದೊಡ್ಡದೆಂಬುದರ ಅರಿವಾಗಿ, ಆನಂದಿಸಿದೆ. ನಿಮ್ಮ ಸೃಜನ ಶೀಲ, ಸೃಜನೇತರ ಕೃತಿ ರಚನೆ ಇನ್ನೂ ಹೆಚ್ಚಾಗಿ ಸಾಗಲಿ.

ಬೆಂಗಳೂರು (೮–೧೧–೯೯೩) –ಡಾ. ಸಿದ್ಧಯ್ಯ ಪುರಾಣಿಕ

ವಿಶ್ವಸನೀಯವಾದ ಹಲವು ಆಕರಗಳನ್ನು ಆಧಾರಮಾಡಿಕೊಂಡು ನೀವು ಸಿದ್ಧಪಡಿಸಿರುವ 'ಸಂಸ್ಕೃತದಲ್ಲಿ ವೀರಶೈವ ಸಾಹಿತ್ಯ'ವೆಂಬ ನಿಮ್ಮ ಗ್ರಂಥ ಕೈಸೇರಿತು.

ನಿಮ್ಮ ವಿದ್ವತ್ಪೂರ್ಣ ಶ್ರಮದ ಬಗ್ಗೆ ನನಗೆ ಮೆಚ್ಚುಗೆ ಇದ್ದೇ ಇದೆ. ವೀರಶೈವ ಸಾಹಿತ್ಯಾಭ್ಯಾಸಿಗಳಿಗೆ ಉಪಯುಕ್ತವಾದ, ಇಂಥದೊಂದು ಸಾಂದರ್ಭಿಕ ಗ್ರಂಥವನ್ನು ಬರೆದ ಹೆಸರಾಂತ ಲೇಖಕರಾದ ನಿಮ್ಮನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಮೈಸೂರು (೧೧–೭–೯೯೩) –ಡಾ. ಎಲ್. ಬಸವರಾಜು

'ಸಂಸ್ಕೃತದಲ್ಲಿ ವೀರಶೈವ ಸಾಹಿತ್ಯ' ಎಂಬ ಕಿರುಕೃತಿ ತಲುಪಿದೆ. ಸಂಸ್ಕೃತ ಎಂದರೆ ಬ್ರಾಹ್ಮಣರ ಭಾಷೆ, ವೈದಿಕ ಸಂಪ್ರದಾಯದ್ದು ಎನ್ನುವ ಸಂದರ್ಭ ದಲ್ಲಿ ನಿಮ್ಮ ಈ ಕೃತಿ ವೀರಶೈವದ ಬಗೆಗೆ ಹೊಸ ವಿಷಯವನ್ನು ವ್ಯಕ್ತಪಡಿಸುತ್ತಿ ರುವುದು ಹೆಚ್ಚಿನ ಮಾಹಿತಿಯನ್ನು ಲಭ್ಯವಾಗಿಸುತ್ತಿರುವುದು ತಿಳಿದು ಸಂತೋಷವಾಯಿತು.

ಗದಗ (೨೭–೭–೯೯೩) –ಪೂಜ್ಯ ಜಗದ್ಗುರು ತೋಂಟದಾರ್ಯ ಸ್ವಾಮಿಗಳು

## ಧರ್ಮ ಸಂಪದ (೧೯೯೪)

ಷಣ್ಮುಖಯ್ಯ ಅಕ್ಕೂರಮಠರ ಈ ಪುಸ್ತಕದ ಎಲ್ಲ ಲೇಖನಗಳೂ ನೀರಿನ ಒರತೆಗಳಿರುವ ಜಾಗವನ್ನು ನಿರ್ದೇಶಿಸುತ್ತವೆ; ಈ ಬಗೆಯ ಒರತೆಗಳನ್ನು

ತೋಡಿಕೊಂಡು ತಮಗೆ ಬೇಕಾದ ಜೀವಜಲವನ್ನು ಈ ಕ್ಷೇತ್ರದ ವ್ಯಾಸಂಗಿಗಳು ಪಡೆಯಬೇಕಾಗಿದೆ.

ಕನ್ನಡ ಪ್ರಭ (೫-೬-೧೯೯೪) —ಮಲ್ಲೇಪುರಂ ಜಿ. ವೆಂಕಟೇಶ್

ನಿಮ್ಮ ಪುಸ್ತಕ ತಲುಪಿದೆ ವೀರಶೈವ ಧಾರ್ಮಿಕ ಹಾಗೂ ಸಾಮಾಜಿಕ ಸಾಹಿತ್ಯಕ್ಕೆ ಇದೊಂದು ಒಳ್ಳೆಯ ಕೊಡುಗೆ. ಇದು ಅಭ್ಯಾಸಿಗಳಿಗೆ ತುಂಬಾ ಉಪಯುಕ್ತವಾದುದಾಗಿದೆ.

ಧಾರವಾಡ (೫-೭-೧೯೯೪) —ಡಾ. ವೃಷಭೇಂದ್ರಸ್ವಾಮಿ

## ವಚನ ಸಾಹಿತ್ಯ ವಿವೇಚನೆ (೧೯೯೩)

'ವಚನ ಸಾಹಿತ್ಯ ವಿವೇಚನೆ' ಓದಿದ್ದೇನೆ. ಇಲ್ಲಿಯ ಲೇಖನಗಳನ್ನು ಮೆಚ್ಚಿಕೊಂಡಿದ್ದೇನೆ. ತಮ್ಮ ಆಳವಾದ ಅಧ್ಯಯನ, ವೈಚಾರಿಕ ವಿವೇಚನೆ ಈ ಲೇಖನಗಳಲ್ಲಿ ಎದ್ದು ಕಾಣುತ್ತವೆ.

ಧಾರವಾಡ (೨-೧೨-೧೯೯೩) —ಡಾ. ವೀರಣ್ಣ ರಾಜೂರ

'ವಚನ ಸಾಹಿತ್ಯ ವಿವೇಚನೆ'ಯ ಕೆಲವು ಪ್ರಬಂಧಗಳನ್ನು ಆಸಕ್ತಿಯಿಂದಲೂ, ಕುತೂಹಲದಿಂದಲೂ ಓದಿದ್ದೇನೆ. ಓದಿ ಸಂತೋಷಿಸಿದ್ದೇನೆ. ವಚನ ಸಾಹಿತ್ಯ ವಿದ್ಯಾರ್ಥಿಗಳಿಗೆ ಇದು ತುಂಬಾ ಉಪಯುಕ್ತವೆನ್ನಿಸುವ ಗ್ರಂಥ. ನಾಥ ಸಂಪ್ರದಾಯ, ಜ್ಯೋತಿಷ್ಯ, ಶಕುನ ಶಾಸ್ತ್ರ, ಸೂಫಿ ಪಥ ಇವುಗಳೊಡನೆ ವಚನ ಸಾಹಿತ್ಯವನ್ನು ವಿವೇಚನೆ ಮಾಡಿರುವುದರಲ್ಲಿ ನಿಮ್ಮ ಸ್ವೋಪಜ್ಞತೆ ತೋರಿಸಿಕೊಳ್ಳುತ್ತದೆ. ಅದನ್ನು ನಾನು ಬಹುವಾಗಿ ಇಷ್ಟಪಟ್ಟಿದ್ದೇನೆ.

ಮೈಸೂರು (೧೯-೧೨-೧೯೯೩) —ಡಾ. ಹಾ. ಮಾ. ನಾಯಕ

ವಚನ ಸಾಹಿತ್ಯದ ಬಗೆಗೆ ನಿಮಗೆ ಹೊಸ ಮಾತುಗಳನ್ನು ಹೇಳಲು ಸಾಧ್ಯವಾಗಿದೆ. ನನಗೆ ವೈಯಕ್ತಿಕವಾಗಿ ಎರಡು ಲೇಖನಗಳು ತುಂಬಾ ಇಷ್ಟವಾದವು. ನಾಥ ಸಂಪ್ರದಾಯ ಮತ್ತು ಅಲ್ಲಮಪ್ರಭು, ಸೂಫಿ ಮತ್ತು ಶರಣರ ಅನುಭಾವ ಪಥ ಈ ಲೇಖನಗಳು ಮುಂದಿನ ಸಂಶೋಧಕರಿಗೆ ನಿಶ್ಚಳವಾಗಿ ಹೊಸದಾರಿ ತೆರೆದಿವೆ. ಮಧ್ಯಕಾಲೀನ ರಹಸ್ಯ ತಾಂತ್ರಿಕ ಪಂಥಗಳ ಅಭ್ಯಾಸಿ

ಗಳಿಗೂ ಇವು ಉಪಯುಕ್ತ. ವಚನ ಚಳುವಳಿಯ ನಿರ್ಲಕ್ಷಿತ ಅಂಶಗಳ ಬಗ್ಗೆ ನೀವು ಬೆಳಕು ಚೆಲ್ಲಿದ್ದೀರಿ. ಇದು ಅಭಿನಂದನಾರ್ಹವಿಚಾರ. ವಚನ ಚಳುವಳಿಯ ಬಗೆಗಿನ ನಮ್ಮ ಅರಿವನ್ನು ಹೆಚ್ಚಿಸಿದ ನಿಮಗೆ ಅಭಿನಂದನೆಗಳು.

ಕನ್ನಡ ವಿಶ್ವವಿದ್ಯಾಲಯ (೧-೧೨-೧೯೯೬) —ಪುರುಷೋತ್ತಮ ಬಿಳಿಮಲೆ

## ವಚನಕಾರರ ಪ್ರಮುಖ ಪರಿಕಲ್ಪನೆಗಳು (೧೯೯೪)

(ಸಂಕಲನ ಮತ್ತು ಸಂಪಾದನ ಕೃತಿ)

ವಚನ ಸಾಹಿತ್ಯ ಒಂದು ಚಿನ್ನದ ಗಣಿ. ತೋಡಿದಷ್ಟೂ ಹೊರಡುವ ಬೆಲೆಯುಳ್ಳ ಬದುಕು. ಅದರ ವಿವಿಧ ಮುಖಗಳಲ್ಲಿ ದರ್ಶನ ಈ ಬಗೆಯ ಅಧ್ಯಯನ ಮಾರ್ಗದಿಂದ ಮಾತ್ರ ಸಾಧ್ಯ. ಈ ದಿಸೆಯಲ್ಲಿ ಇದೊಂದು ಹೊಸ ಮೈಲುಗಲ್ಲು ಎಂದರೆ ತಪ್ಪಾಗದು.

ಇಂಥ ಮಹತ್ವದ ಗ್ರಂಥವನ್ನು ಸಂಪಾದಿಸಿದ ತಮಗೆ ಹಾರ್ದಿಕ ಅಭಿನಂದನೆಗಳು.

ಧಾರವಾಡ (೨೦-೫-೧೯೯೪) —ಚೆನ್ನವೀರ ಕಣವಿ

ತಲೆಮಾರಿನಿಂದ ತಲೆಮಾರಿಗೆ ವಚನಸಾಹಿತ್ಯ ಜನರನ್ನು ಎಚ್ಚರಿಸುತ್ತ, ವಿಚಾರವಂತರನ್ನಾಗಿ ಮಾಡುತ್ತ ವಿಶ್ವಧರ್ಮವೊಂದನ್ನು ನೆಲೆನಿಲ್ಲಿಸಲು ಅವರನ್ನು ಕಟಿಬದ್ಧರನ್ನಾಗಿ ಮಾಡುತ್ತಿದೆ.

ನಮ್ಮ ಕಾಲಕ್ಕೆ ನಾವು ಮಾಡಿದ್ದನ್ನು ನಿಮ್ಮ ಕಾಲದಲ್ಲೀಗ ನೀವೆಲ್ಲ ಮಾಡುತ್ತಿರುವುದರೊಡನೆ ಹೋಲಿಸಿ ನೋಡಿದರೆ ನಾವು ಮಾಡಿದ್ದು ಸಾಲ ದೆನಿಸುವ ಜೊತೆ ಜೊತೆಗೇ ನೀವು ಹೆಚ್ಚಿನದನ್ನೂ ಸಾಧಿಸಬಲ್ಲಿರೆಂಬ ಭರವಸೆ ಮೂಡುತ್ತಿದೆ. ನಿಮ್ಮ ಸಂಪಾದಕತ್ವದಲ್ಲಿ ಸುಂದರವಾಗಿ ಹೊರಬಂದ ವಚನ ಕಾರರ ಪ್ರಮುಖ ಪರಿಕಲ್ಪನೆಗಳು ಗ್ರಂಥವನ್ನು ನೋಡಿ. ಸಂತೋಷ ವಾಯಿತು.

ಮೈಸೂರು (೧೮-೫-೧೯೯೪) —ಡಾ. ಎಲ್. ಬಸವರಾಜು

ಈ ಗ್ರಂಥವನ್ನು ಸಂಪಾದಿಸಿ ವಚನ ಸಾಹಿತ್ಯ ವಿದ್ಯಾರ್ಥಿಗಳಿಗೆ ಮಹದುಪಕಾರ ಮಾಡಿದ್ದೀರಿ ಪುಸ್ತಕವನ್ನು ಅಲ್ಲಲ್ಲಿ ನೋಡಿದ್ದೇನೆ. ಪೂರ್ತಿ ಯಾಗಿ ಓದಿಲ್ಲ. ಆದರೆ ನಿಶ್ಚಯವಾಗಿಯೂ ಇದೊಂದು ಆಕರ ಗ್ರಂಥ

ವೆಂಬುದನ್ನು ನಾನು ಹೇಳಬೇಕು.

ಮೈಸೂರು (೪–೬–೧೯೯೪) —ಡಾ. ಹಾ. ಮಾ. ನಾಯಕ

## ಷಣ್ಮುಖಯ್ಯ ಅಕ್ಕೂರಮಠ ಅವರ ಕೃತಿಗಳು

೧. ವೈಚಾರಿಕ ಸಾಹಿತ್ಯ : ದಿಗ್ದರ್ಶನ (೧೯೮೦)
೨. ಸೂಫಿ ಮತ್ತು ಶರಣರ ಅನುಭಾವ ಪಥ (೧೯೮೧)
೩. ಜ್ಯೋತಿಶಾಸ್ತ್ರ ವಿವೇಚನೆ : ವಚನಕಾರರ ಸಮಾಲೋಚನೆ (೧೯೮೨)
೪. ಶಕುನಶಾಸ್ತ್ರ ವಿವೇಚನೆ : ಶರಣರ ಆಲೋಚನೆ (೧೯೮೩)
೫. ಸಂಸ್ಕೃತದಲ್ಲಿ ವೀರಶೈವ ಸಾಹಿತ್ಯ (೧೯೯೨)
೬. ವಚನ ಸಾಹಿತ್ಯ ವಿವೇಚನೆ (೧೯೯೩)
೭. ಧರ್ಮ ಸಂಪದ (೧೯೯೪)
೮. ಸಮಾಯೋಗ (೧೯೯೬)
೯. ಮತಿಗೆ ಮಂಗಳ

### ಅನುವಾದ

೧. ಸೂಕ್ಷ್ಮಾಗಮ
೨. ಶಿವತತ್ತ್ವ ರತ್ನಾಕರ ಪ್ರಥಮ ಕಲ್ಲೋಲ

### ಸಂಪಾದಿತ ಕೃತಿಗಳು

೧. ವಚನಕಾರರ ಪ್ರಮುಖ ಪರಿಕಲ್ಪನೆಗಳು (೧೯೯೪)
೨. 'ಅಮರವಾಣಿ' : (ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರ ಸಂಸ್ಮರಣ ಸಂಪುಟ ೧೯೯೫)
೩. ಮರಳೇಗವಿದೀಪ್ತಿ–೧೯೯೫
೪. 'ನಿಜಗುಣ' ಗೌರವ ಸಂಪುಟ ೧೯೯೬
೫. ವಿನಾಯಕ ೧೯೯೮
೬. ಸಿರಿ–ಸಂಪದ (ಉತ್ತರ ಕರ್ನಾಟಕದ ಉತ್ಸವ ೧೯೯೯)
೭. ಸರ್ಪಭೂಷಣ ಶಿವಯೋಗಿ (ಕರ್ನಾಟಕ ಸಾಹಿತ್ಯ ಅಕಾಡೆಮಿ ೧೯೯೮)
೮. ಸುವರ್ಣ ಶ್ರೀ
೯. ಕೈವಲ್ಯ ದರ್ಪಣ

## ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ, ಹಾರಕೂಡ ಪ್ರಕಟಿಸಿದ ಗ್ರಂಥಗಳು

| | |
|---|---|
| ೧. ಹಾರಕೂಡ ಹಿರೇಮಠದ ಶ್ರೀ ಸದ್ಗುರು ಚನ್ನಬಸವ ಸ್ವಾಮಿಗಳ ಅಷ್ಟೋತ್ತರ ಶತನಾಮಾವಳಿ | - ವೇ. ಪುರಾಣಿಕ ಶರಣಯ್ಯನವರು ಹೊಸಮಠ, ಗು[illegible]ಸಗಿ |
| ೨. ಜನಪದ ಸಾಹಿತ್ಯದಲ್ಲಿ ಜೀವನ ಮೌಲ್ಯಗಳು | - ಪ್ರೊ. ಸೂಗಯ್ಯ ಹಿರೇಮಠ |
| ೩. ಅನುಭವ ಮಂಟಪದಲ್ಲಿ ವೀರಶೈವ ಸಂಸ್ಕೃತಿ | - ಶ್ರೀ ವಿ.ಎಸ್. ಚರಂತಿಮ[illegible] [illegible]ಪೂರ |
| ೪. ವಚನ ಸಾಹಿತ್ಯದಲ್ಲಿ ಜೀವನ ಮೌಲ್ಯಗಳು | - ಡಾ. ಎಂ.ಎಸ್. ಲಕ್ಷ್ಮೆ |
| ೫. 'ಅಂತರ' ಸಣ್ಣ ಕತೆಗಳ ಸಂಕಲನ | - ಪ್ರೊ. ಸೂಗಯ್ಯ ಹಿರೇ[illegible] |
| ೬. ಅನುಭಾವಿಯ ಆತ್ಮಕಥನ | - ಡಾ. ಎಸ್.ಆರ್. ಗು[illegible] |
| ೭. ಶರಣರ ಕಾಯಕ ಮತ್ತು ದಾಸೋಹ | - ಶಿವರಾಜ ಜಿ. ಪಾಟೀ[illegible] ವ[illegible]ತಪೂರ |
| ೮. ಶರಣರ ವಚನಗಳಲ್ಲಿ ಸಮಾಜ ಕಾರ್ಯದರ್ಶನ | - ಪ್ರೊ. ಎಸ್.ಆರ್. ಶಾ[illegible] |
| ೯. ಸನ್ನಿಧಿ | - ಡಾ. ಸಂಗಮೇಶ ಸವದತ್ತಿಮಠ |
| ೧೦. ಪುಣ್ಯಚಿತ್ತರು | - ಡಾ. ಪಂಚಾಕ್ಷರಿ ಹಿರೇಮಠ |
| ೧೧. ಶೂನ್ಯ ಸಂಪಾದನೆಯ ಮುಖಗಳು | - ಡಾ. ಸಂಗಮೇಶ ಸವದತ್ತಿಮಠ |
| ೧೨. ಚನ್ನವೀರ | - (ಸಂ)ಡಾ. ಸಂಗಮೇಶ, ಸವದತ್ತಿಮಠ |
| ೧೩. ವೀರಶೈವ ಸಾಹಿತ್ಯ | - ಡಾ. ಎಸ್.ಎಂ.ಹಿರೇಮಠ |
| ೧೪. ಕಡಕೋಳ ಮಡಿವಾಳೇಶ್ವರ ಶಿಷ್ಯರ ತತ್ವ ಪದಗಳು | - (ಸಂ.) ಡಾ. ಮೀನಾಕ್ಷಿ ಬಾಳಿ |
| ೧೫. ವೀರಶೈವ ಸಂಪದ | - ಡಾ.ಬಿ.ಆರ್.ಹಿರೇಮಠ, ಧಾರವಾಡ |
| ೧೬. ಶಿವಶರಣರು ಹಾಗೂ ವೈಚಾರಿಕತೆ | - ಡಾ. ಎಸ್.ವಿದ್ಯಾಶಂಕರ,ಬೆಂಗಳೂರು |
| ೧೭. ಸಿದ್ಧರಾಮ - ಒಂದು ಸಮೀಕ್ಷೆ | - ಡಾ. ಬಿ.ವ್ಹಿ.ಮಲ್ಲಾಪೂರ, ಧಾರವಾಡ |
| ೧೮. ಹಾರಕೂಡ ಶ್ರೀ ಚನ್ನಬಸವೇಶ್ವರ ಚರಿತ್ರೆ | - ಲೇ. ಶ್ರೀಮತಿ ಗೋಪಿಕಾದೇವಿ ದೇಶಮುಖ, ಗುಲಬರ್ಗಾ |
| ೧೯. ರುದ್ರಲಿಂಗ ಸಂಸ್ಕೃತಿ | - ಆಚಾರ್ಯ ನಂದೀಶ |
| ೨೦. ಬಸವೋತ್ತರ ಯುಗದ ವಚನಕಾರರು | - ಡಾ. ವೀರಣ್ಣ ರಾಜೂರ |
| ೨೧. ಕಲ್ಯಾಣ ನಾಡಿನ ಪರಂಜ್ಯೋತಿ | - (ಸಂ.) ಡಾ. ಎಂ.ಎಸ್. ಲಕ್ಷ್ಮೆ<br>- ಮಲ್ಲಿನಾಥ ಹಿರೇಮಠ, ಹಾರಕೂಡ<br>- ಡಾ. ಹೆಚ್. ಕಾಶಿನಾಥರೆಡ್ಡಿ |
| ೨೨. ಕರಿಯನಿತ್ತಡೆ ಒಲ್ಲೆ | - ಲೇ. ರಮೇಶಬಾಬು ಯಾಳಗಿ, ಸಗರ |
| ೨೩. ವೀರಶೈವ ಪರಿಜ್ಞಾನ | - ಲೇ. ಷಣ್ಮುಖಯ್ಯ ಅಕ್ಕೂರಮಠ ಬೆಂಗಳೂರು |

[illegible]